# ತಜ್ಞ ವೈದ್ಯರ ಶಿಬಿರ



ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಕಾರ್ಯಕ್ರಮದಡಿ ಗ್ರಾಮೀಣ ಜನರ ಆರೋಗ್ಯವನ್ನು ಸುಧಾರಿಸುವ ನಿಟ್ಟಿನಲ್ಲಿ ಪ್ರಸಕ್ತ ಸಾಲಿನಿಂದ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ತಜ್ಞ ವೈದ್ಯರ ಶಿಬಿರವನ್ನು ಹಮ್ಮಿಕೊಳ್ಳಲಾಗುತ್ತಿದೆ.

ತಾಲ್ಲೂಕು ಮಟ್ಟದಲ್ಲಿ ಪ್ರತಿ ತಿಂಗಳು 15ನೇ ತಾರೀಖು,
ಜಿಲ್ಲಾ ಮಟ್ಟದಲ್ಲಿ ಪ್ರತಿ ತಿಂಗಳು 22ನೇ ತಾರೀಖು
ತಜ್ಞ ವೈದ್ಯರ ಶಿಬಿರಗಳನ್ನು ಏರ್ಪಡಿಸಲಾಗುತ್ತಿದೆ.
*(ಶಿಬಿರದ ಸಮಯ ಬೆಳಿಗ್ಗೆ 9ರಿಂದ ಸಂಜೆ 5 ಗಂಟೆಯವರೆಗೆ)*

**ತಾಲ್ಲೂಕು ಮಟ್ಟದ ಶಿಬಿರದಲ್ಲಿ ಕೆಳಕಂಡ ತಜ್ಞ ವೈದ್ಯರ ಸೇವೆ ಲಭ್ಯವಾಗುತ್ತದೆ.**

1) ಜನರಲ್ ಮೆಡಿಸಿನ್
2) ಜನರಲ್ ಸರ್ಜರಿ
3) ಸ್ತ್ರೀರೋಗ ತಜ್ಞರು
4) ಮಕ್ಕಳ ತಜ್ಞರು
5) ಕಿವಿ, ಮೂಗು ಮತ್ತು ಗಂಟಲು ತಜ್ಞರು
6) ಮೂಳೆ ಮತ್ತು ಕೀಲು ರೋಗ ತಜ್ಞರು
7) ಚರ್ಮ ಮತ್ತು ಲೈಂಗಿಕ ರೋಗಗಳ ತಜ್ಞರು
8) ನೇತ್ರ ತಜ್ಞರು
9) ದಂತ ರೋಗ ತಜ್ಞರು
10) ಆಯುಷ್ ತಜ್ಞರು

**ಜಿಲ್ಲಾ ಮಟ್ಟದ ಶಿಬಿರದಲ್ಲಿ ಮೇಲೆ ಹೇಳಿರುವ ತಜ್ಞ ವೈದ್ಯರ ಸೇವೆ ಜೊತೆಗೆ ಕೆಳಕಂಡ ತಜ್ಞ ವೈದ್ಯರ ಸೇವೆ ಲಭ್ಯವಾಗುತ್ತದೆ.**

1) ಕ್ಯಾನ್ಸರ್ ತಜ್ಞರು
2) ಮಧುಮೇಹ ತಜ್ಞರು
3) ಮಾನಸಿಕ ತಜ್ಞರು
4) ಹೃದಯ ಸಂಬಂಧಿ ರೋಗ ತಜ್ಞರು
5) ಮೂತ್ರ ಪಿಂಡ ರೋಗ ತಜ್ಞರು
6) ಟೆಲಿ ಮೆಡಿಸಿನ್ ತಂತ್ರಜ್ಞಾನ

ತಾಲ್ಲೂಕಿನ ತಜ್ಞ ವೈದ್ಯರ ಶಿಬಿರದಲ್ಲಿ ತಪಾಸಣೆಗೆ ಒಳಗಾದ ರೋಗಿಗಳಲ್ಲಿ ಹೆಚ್ಚಿನ ತಪಾಸಣೆ ಹಾಗೂ ಚಿಕಿತ್ಸೆ ಅಗತ್ಯವಿರುವ ರೋಗಿಗಳು ಜಿಲ್ಲಾ ತಜ್ಞ ವೈದ್ಯರ ಶಿಬಿರದಲ್ಲಿ ಪುನಃ ತಪಾಸಣೆ ಮಾಡಿಸಿಕೊಂಡು ಹೆಚ್ಚಿನ ಚಿಕಿತ್ಸೆಯನ್ನು ಪಡೆಯಬಹುದು.

ಶಿಬಿರದಲ್ಲಿ ರೋಗಿಯ ಮಲ, ಮೂತ್ರ, ಕಫ, ರಕ್ತ ಪರೀಕ್ಷೆ ಮಾಡಲಾಗುತ್ತದೆ ಮತ್ತು ಮಧುಮೇಹದ ಪರೀಕ್ಷೆ, ಇ.ಸಿ.ಜಿ., ಟಿ.ಬಿ., ಮಲೇರಿಯ, ಹೆಚ್.ಐ.ವಿ. ಪರೀಕ್ಷೆ ಮಾಡಲಾಗುತ್ತದೆ. ಈ ಶಿಬಿರಗಳಲ್ಲಿ ರೋಗಿಗಳಿಗೆ ಅಗತ್ಯ ಔಷಧಿಗಳನ್ನು ಒದಗಿಸಲಾಗುತ್ತದೆ.

ಈ ಎಲ್ಲಾ ಸೇವೆಗಳು ರೋಗಿಗಳಿಗೆ ಉಚಿತವಾಗಿ ದೊರೆಯುತ್ತವೆ.
ಸಾರ್ವಜನಿಕರು ಈ ಸುವರ್ಣಾವಕಾಶವನ್ನು ಉಪಯೋಗಿಸಿಕೊಂಡು ತಮ್ಮ ಆರೋಗ್ಯವನ್ನು ಸುಧಾರಿಸಿಕೊಳ್ಳಲು ವಿನಂತಿಸಲಾಗಿದೆ.

ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ

ಪ್ರಕಟಣೆ : ಮಾಹಿತಿ ಶಿಕ್ಷಣ ಮತ್ತು ಸಂಪರ್ಕ ವಿಭಾಗ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು - 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಶ್ರೀಹರಿ, ವೆಂಕಟ್, ಆಚಾರ್ಯ, ಬಿ. ವಿಲ್ಸನ್, ರಾಂಚಂದ್ರ ಕೊಪ್ಪಲು

ಮುಖಚಿತ್ರ : ರಾ. ಸೂರಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಬೆಂ**ಗಳೂರಿನಲ್ಲಿ ಸುಮಾರು ದಿನಕ್ಕೊಂದರಂತೆ ಕುಟುಂಬಗಳ ಹತ್ಯೆಯು ನಡೆಯುತ್ತಿರುವುದರಿಂದ ಅದೊಂದು ಹೊಸ ಸಮಾಚಾರ ಎನಿಸಿಕೊಳ್ಳಲು ಅನರ್ಹವಾಗಿಬಿಟ್ಟಿದೆ. ಅದನ್ನು ಬಿಟ್ಟರೆ ದೊಡ್ಡದಾಗಿ ಸಮಾಚಾರ ಮಾಡುವವರು ಪ್ರಮೋದ್ ಮುತಾಲಿಕ್ ಮತ್ತು ಶ್ರೀರಾಮ ಸೇನೆ. ಅದನ್ನು 'ರಾವಣ ಸೇನೆ' ಎಂದರೆ ಮಂಗಳೂರಿನ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ನಾಯಕರಿಗೆ ಮನಸ್ಸಿಗೆ ನೋವಾಗುತ್ತದಂತೆ; ಆದ್ದರಿಂದ ಅದನ್ನು 'ಶ್ರೀರಾಮ ಸೇನೆ' ಎಂದೇ ಕರೆಯೋಣ. ಅವರ ನಡತೆ ಬದಲಾಯಿಸುವುದು ಮುಖ್ಯ, ಹೆಸರು ಬದಲಾಯಿಸುವುದು ಗೌಣ. ಅವರೇ ಇಟ್ಟುಕೊಂಡಿರುವ ಹೆಸರನ್ನು ನಾವೇಕೆ ಬದಲಿಸಬೇಕು ! ಕೇರಳದ ಯುವತಿಯೊಬ್ಬಳನ್ನು ಮಂಗಳೂರಿನಲ್ಲಿ ಅಪಹರಿಸಿದ್ದವರು ಯಾರೋ ಅವರನ್ನು ರಾವಣರೆಂದೇ ಕರೆಯಬೇಕು, ಸರಿ. ಆದರೆ ಅಪಹರಿಸುವವರೇ ಒಬ್ಬರು, ದಸ್ತಗಿರಿಯಾಗುವವರೇ ಬೇರೊಬ್ಬರು, ಎಂಬ ಸಂಗತಿ ಇರುವಾಗ ಯಾರನ್ನು ರಾವಣರೆನ್ನಬೇಕು! ಮಾನ್ಯ ಮುಖ್ಯಮಂತ್ರಿಗಳು ತಮ್ಮ ಪರಿವಾರದ ಬಗೆಗಿನ ವ್ಯಾಮೋಹವನ್ನು ಪಕ್ಕಕ್ಕಿಟ್ಟು ಒಂದಂಶವನ್ನು ಗಂಭೀರವಾಗಿ ಮತ್ತು ವಸ್ತುನಿಷ್ಠವಾಗಿ ಗಮನಿಸಬೇಕು. ರಾಮಸೇನೆಯೇ ಆಗಲಿ ವಾನರ ಸೇನೆಯೇ ಆಗಲಿ ತಾನು ''ನೈತಿಕತೆಯ ರಕ್ಷಕ''ನೆಂದು ಕರೆದುಕೊಂಡು ಕಂಡಲ್ಲಿ ಹಲ್ಲೆ ಮಾಡುವುದನ್ನು ಅಷ್ಟೇನೂ ಬಾಧಕವಲ್ಲದ ವಿಷಯವೆಂದು ತಳ್ಳಿಹಾಕುವುದಾದರೆ ನಕ್ಸಲೀಯ ಚಟುವಟಿಕೆಗಳನ್ನು ಮಾನ್ಯ ಮಾಡಬೇಕೆಂದು ಆಗ್ರಹಿಸುವುದು ತಪ್ಪಾಗುವುದಿಲ್ಲ. ಅಮೂರ್ತವಾದ ''ನೈತಿಕ ಮಡಿವಂತಿಕೆ''ಯನ್ನು ರಕ್ಷಿಸುವ ಹೊಣೆ ಶ್ರೀರಾಮ ಸೇನೆಯದಾದರೆ, ಸಂಪೂರ್ಣವಾಗಿ ಮೂರ್ತವಾದ ಶೋಷಣೆ - ದೌರ್ಜನ್ಯ ಇತ್ಯಾದಿಗಳಿಂದ ಕಂಗಾಲಾಗಿರುವವರ ರಕ್ಷಣೆಗಾಗಿ ತೀವ್ರವಾದಿಗಳೇಕೆ ತಾವು ನಂಬುವ ನೈತಿಕತೆಯನ್ನು ಆಚರಣೆಗೆ ತರಲು ಮಧ್ಯಪ್ರವೇಶ ಮಾಡಕೂಡದು? ಅದನ್ನು ಖಂಡಿಸುವುದು ಸರಿಯಾದರೆ, ಶ್ರೀರಾಮ ಸೇನೆಯ ಕಾಲಾಳುಗಳನ್ನು ಹಿಡಿದು ಸೆರೆಮನೆಗೆ ಕಳಿಸುವುದು ಕೂಡ ಸರಿಯೇ. ಯಾರು ಎಂತಹ ಬಟ್ಟೆ ತೊಡುತ್ತಾರೆ, ಏನು ತಿನ್ನುತ್ತಾರೆ, ಅಥವಾ ಎಲ್ಲಿ ಏನು ಕುಡಿಯುತ್ತಾರೆ ಎಂಬುದರ ಶೋಧನೆ ಮಾಡುವುದು ಅನವಶ್ಯಕ ಮತ್ತು ಸಂವಿಧಾನ ಬಾಹಿರವಾದ ಚಟುವಟಿಕೆ. ಆದರೆ ಏನನ್ನೂ ತಿನ್ನಲಾಗದವರು ಸಹಸ್ರಾರು ಸಂಖ್ಯೆಯಲ್ಲಿದ್ದಾರಲ್ಲ, ಅವರ ಹಿತಕ್ಕಾಗಿ ದುಡಿಯುವುದು ಶ್ರೇಯಸ್ಕರ. ಶ್ರೀರಾಮ ಸೇನೆಯು ಏನೂ ಇಲ್ಲದವರ ಸ್ಥಿತಿಯನ್ನು ಬದಲಾಯಿಸುವುದಕ್ಕೆ ಕ್ರಮ ಕೈಗೊಂಡರೆ ಶ್ರೀರಾಮಚಂದ್ರನಿಗೆ ಸ್ವಲ್ಪ ಗೌರವ ಬರುತ್ತದೆಂದು ಭಾವಿಸಬಹುದು.

ಶ್ರೀ ಪಾಲೆಮಾರ್ ಎಂಬ ಸಚಿವರು ಅನರ್ಘ್ಯ ರತ್ನದಂತಹ ಮಾತನಾಡಿದ್ದಾರೆಂದು ಒಂದು ಪತ್ರಿಕೆಯು ಬರೆದಿತ್ತು; ಅದೂ ಮಂಗಳೂರಿನ ದುರ್ಘಟನೆಯ ಹಿನ್ನೆಲೆಯಲ್ಲೇ ಹೇಳಿದ್ದ ಮಾತು. ಪಾಲೆಮಾರರ ಬೌದ್ಧಿಕ ಶ್ರೀಮಂತಿಕೆಯು ಯಾವ ಮಟ್ಟದಲ್ಲೇ ಇರಲಿ, ಅವರಾಡಿರುವ ಮಾತು ಸರ್ವಥಾ ಯೋಗ್ಯವಲ್ಲವೆಂದು ಭಾವಿಸಲು ಅಡ್ಡಿಯಿಲ್ಲ, ಮಂಗಳೂರಿನ ಘಟನೆಗಳು ಮಾಧ್ಯಮಗಳಲ್ಲಿ ಚರ್ಚೆಗೆ ಬರಬಾರದು, ಅವನ್ನು ವರದಿ ಮಾಡಬಾರದು, ಅವು ಮಂಗಳೂರಿಗಷ್ಟೇ ಸೀಮಿತವಾದುವು, ಎಂಬ ಅಭಿಪ್ರಾಯ ಅವರದು. ಅಂದರೆ, ಕೀಚಕರನ್ನು ಅವರ ಪಾಡಿಗೆ ಬಿಟ್ಟುಬಿಡಬೇಕೆಂಬ ಘನಘೋರ ಔದಾರ್ಯ ಇದು. ಮಂಗಳೂರನ್ನು ಕತ್ತಲೆಯ ಮುಸುಕಿನಲ್ಲಿಟ್ಟು ಆ ನಗರವನ್ನು ಮಹಾನ್ ನೈತಿಕ ಆಗರವನ್ನಾಗಿ ಪರಿವರ್ತಿಸುವ ಆಕಾಂಕ್ಷೆ ಅವರದು. ಹಾಗೆ ಎಲ್ಲೆಡೆ ಮಾಡಿದರೆ ಆಗ ಅಪರಾಧಗಳೇ ಇರುವುದಿಲ್ಲ, ಪೊಲೀಸರು - ನ್ಯಾಯಾಲಯ ಯಾವುದೂ ಬೇಕಾಗುವುದಿಲ್ಲ, ಪ್ರಜಾಪ್ರಭುತ್ವದ ಕಲ್ಪನೆಯು ಕೆಲಸಕ್ಕೆ ಬಾರದ ವಸ್ತುವಾಗುತ್ತದೆ. ಗುಜರಾತಿನ ಮುಖ್ಯಮಂತ್ರಿಗಳೂ ಅದನ್ನೇ ಹೇಳಿದ್ದರು : ''ಗುಜರಾತಿನ ಘಟನೆಗಳನ್ನು ಗುಜರಾತಿನವರಿಗೆ ಬಿಡಿ'', ಎಂದು. ನಾವೆಸಗುವ ದುಷ್ಕೃತ್ಯಗಳನ್ನು ನಾವೇ ಮಾಡಿದ್ದೆಂದು ಒಪ್ಪಿಕೊಳ್ಳುವಷ್ಟು ಸೌಜನ್ಯವನ್ನು ಶ್ರೀರಾಮ ಸೇನೆ ಮತ್ತು ಅದರ ಪೋಷಕರು ತೋರಬೇಕು, ''ಮಂಗಳೂರಿನಲ್ಲಿ ದಾಂಧಲೆಗಳನ್ನು ಆಯೋಜಿಸಿದ್ದು ಕಾಂಗ್ರೆಸ್ ಪಕ್ಷ'' ಎಂದು ಹೇಳುವುದು ಶ್ರೀರಾಮ ಸೇನೆಗೆ ಶೋಭೆ ತರುವುದಿಲ್ಲ. ಆ ಸೇನೆಯನ್ನು ರಕ್ಷಿಸಲು ಗೃಹ ಸಚಿವ ಶ್ರೀ ವಿ. ಎಸ್. ಆಚಾರ್ಯರು ಪತ್ರಿಕೆಗಳ ವರದಿಗಳನ್ನು ನಿಯಂತ್ರಿಸಲು 'ಓಂಬುಡ್ಸ್‌ಮನ್' ರಚಿಸುವ ಹುಮ್ಮಸ್ಸಿನಲ್ಲಿದ್ದಾರೆ. ಒಟ್ಟಿನಲ್ಲಿ ಫ್ಯಾಸಿಸ್ಟ್ ಮಾದರಿಯ ಪ್ರಭುತ್ವಕ್ಕಾಗಿ ಇವರೆಲ್ಲಾ ಹಾತೊರೆಯುತ್ತಿದ್ದಾರೆ. ನಾವು ಅದನ್ನು ಆಗಗೊಡಕೂಡದು.

ಶ್ರೀರಾಮ ಸೇನೆಯ ನೈತಿಕ ಸೂತ್ರಗಳು ನಮ್ಮ ಸಮಾಜದಲ್ಲಿ ವಿಪತ್ತುಗಳ ಸರಮಾಲೆಯನ್ನು ಸೃಷ್ಟಿಸುತ್ತವೆ. ಮಹಿಳೆಯರನ್ನು ಮಧ್ಯಯುಗದ ಅಂಧಕಾರಕ್ಕೆ ತಳ್ಳುವ ಹುನ್ನಾರ ಇದು. ಜಾಗತೀಕರಣವನ್ನು ಬೆಂಬಲಿಸುವ ಭಾರತೀಯ ಜನತಾ ಪಕ್ಷ ಒಂದು ಕಡೆ,

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೦ ಸಂಚಿಕೆ-೮ ಮಾರ್ಚ್ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@dataone.in**
**website : www.navakarnataka.com**
**http://navakarnataka.blogspot.com**


ಸಂಪಾದಕೀಯ

# ೭೫ನೇ ಕನ್ನಡ ಸಾಹಿತ್ಯ ಸಮ್ಮೇಳನ

**ಈ** ವರ್ಷ ಜನವರಿ ೨೯ರಿಂದ ಆರಂಭವಾಗಬೇಕಿದ್ದ ಚಿತ್ರದುರ್ಗದ ಸಮ್ಮೇಳನವು ಮಾಜಿ ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರ ನಿಧನದಿಂದಾಗಿ ಫೆಬ್ರುವರಿ ೪ಕ್ಕೆ ಮುಂದೂಡಲ್ಪಟ್ಟ ಸುದ್ದಿಯನ್ನು ಪ್ರಸಾರಮಾಡುವುದರ ಜೊತೆ ಜೊತೆಗೆ ದೂರದರ್ಶನವಾಹಿನಿಯೊಂದು ಪ್ರದರ್ಶಿಸಿದ್ದು ಸಮ್ಮೇಳನದ ಅತಿಥಿಗಳಿಗಾಗಿ ತಯಾರಿಸಿದ್ದ ಲಕ್ಷಾಂತರ ಲಾಡು ಉಂಡೆ ಮೊದಲಾದ ಭಕ್ಷ್ಯಗಳ ರಾಶಿ ರಾಶಿ! ಸದ್ಯ ಭೋಜ್ಯಗಳನ್ನು ಇನ್ನೂ ಸಿದ್ಧಪಡಿಸಿರಲಿಲ್ಲ. ಒಂದು ವಾರದ ನಂತರ ಅವೇ ಭಕ್ಷ್ಯಗಳನ್ನು ಅತಿಥಿಗಳಿಗೆ ಬಡಿಸಲಾಯಿತೆ, ಗೊತ್ತಿಲ್ಲ. ಮಾಜಿ ರಾಷ್ಟ್ರಪತಿಗಳ ನಿಧನಕ್ಕೆ ಈ ಬಾರಿ ಶಾಲಾ ಕಾಲೇಜುಗಳಿಗಾಗಲಿ, ಸರ್ಕಾರಿ ಕಛೇರಿಗಳಿಗಾಗಲಿ ರಜೆ ಘೋಷಿಸಿರಲಿಲ್ಲ. ಸರ್ಕಾರದಿಂದ ಪ್ರಾಯೋಜಿತ ಮನರಂಜನಾ ಕಾರ್ಯಕ್ರಮಗಳನ್ನು ಮಾತ್ರ ರದ್ದುಪಡಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಸಾಹಿತ್ಯ ಸಮ್ಮೇಳನವನ್ನು ಮುಂದೂಡುವ ಬದಲು ನಿರ್ಧರಿಸಿದ್ದಂತೆ ಕಾರ್ಯಕ್ರಮವು ಆರಂಭವಾಗುವ ಮೊದಲು ಸಭಿಕರು ಎರಡು ನಿಮಿಷ ಎದ್ದು ನಿಂತು 'ಮೌನಾಚರಣೆ'ಯ ಮೂಲಕ ಮಾಜಿ ರಾಷ್ಟ್ರಪತಿಗಳಿಗೆ ಗೌರವವನ್ನೂ ಅವರ ನಿಧನಕ್ಕಾಗಿ ಸಂತಾಪವನ್ನೂ ಸೂಚಿಸಿ ಸಮ್ಮೇಳನವನ್ನು ನಡೆಸಿದ್ದರೆ ಅದು ಶಿಷ್ಟಾಚಾರ ಸಂಪ್ರದಾಯದ ಉಲ್ಲಂಘನೆಯಾಗುತ್ತಿತ್ತೆ? ಗೊತ್ತಿಲ್ಲ.

ಸಮ್ಮೇಳನದ ವಿವರಗಳು ಆದಾಗಲೇ ಮನಸ್ಸಿನಿಂದ ಮರೆಯಾಗುತ್ತಿವೆ. ಈ ಕುರಿತು ಬರೆಯಬೇಕಾದರೂ ಆ ದಿನಗಳ ಪತ್ರಿಕೆಗಳನ್ನು ತಿರುವಿಹಾಕಬೇಕಾಗುತ್ತದೆ... ಸಮ್ಮೇಳನ ಸೇರುವುದಕ್ಕೆ ಕೆಲವು ದಿನಗಳ ಮುಂಚೆ 'ದಿ ಹಿಂದೂ' ಪತ್ರಿಕೆಯು ಪರಿಷತ್ತಿನ ಅಧ್ಯಕ್ಷರ ಸಂದರ್ಶನವೊಂದನ್ನು ಪ್ರಕಟಿಸಿತ್ತು.

'ನವ್ಯಸಾಹಿತಿಗಳು ಪರಿಷತ್ತಿನ ಚಟುವಟಿಕೆಗಳಿಂದ ದೂರ ಉಳಿದಿರುವುದೇಕೆ ?' ಎಂಬ ಪ್ರಶ್ನೆಗೆ ಉತ್ತರವಾಗಿ 'ಇಷ್ಟು ಕಾಲ ಪರಿಷತ್ತಿನಿಂದ ದೂರ ಉಳಿದಿದ್ದ ಲೇಖಕರು ಕೂಡ ಈಗ ಪರಿಷತ್ತಿನ ಸದಸ್ಯರಾಗಲು ಮುಂದೆ ಬಂದಿದ್ದಾರೆ' ಎಂದೂ ಮತ್ತೊಂದು ಪ್ರಶ್ನೆಗೆ ಉತ್ತರವಾಗಿ 'ಸರ್ಕಾರವನ್ನೂ, ರಾಜಕಾರಣಿಗಳನ್ನೂ, ರಾಜಕೀಯಪಕ್ಷಗಳನ್ನೂ ತನ್ನ ಕಾರ್ಯಕ್ರಮಗಳಲ್ಲಿ ಸೇರಿಸಿಕೊಳ್ಳುವುದಕ್ಕೆ ಪರಿಷತ್ತು ವಿರೋಧಿಯಾಗಿಲ್ಲ; ಆದರೆ ಸಕ್ರಿಯ ರಾಜಕಾರಣ ಮತ್ತು ರಾಜಕೀಯಗಳಿಂದ ಸಾಕಷ್ಟು ದೂರವಿರುತ್ತದೆ' ಎಂದು ಹೇಳಿದ್ದಾರೆ.

ಸಮ್ಮೇಳನದ ಹಿಂದಿನ ದಿನ ಸಂಜೆ ಸಮ್ಮೇಳನಾಧ್ಯಕ್ಷರೊಂದಿಗೆ ಮಾತಾಡಿದ 'ಪ್ರಜಾವಾಣಿ'ಯು ಮಾರನೆ ದಿನದ ಪತ್ರಿಕೆಯ ಮುಖಪುಟದಲ್ಲಿ 'ರಾಜಕಾರಣಿಗಳನ್ನು ಹೊರಗಟ್ಟಿ' – ಸಮ್ಮೇಳನಾಧ್ಯಕ್ಷರ ಗುಡುಗು. ಎಂದೂ 'ಅನಂತಮೂರ್ತಿಗೆ ಆಹ್ವಾನವಿಲ್ಲ' ಎಂದೂ ಪ್ರಕಟಿಸಿದೆ. ಒಳಪುಟದಲ್ಲಿ 'ಜ್ಞಾನಪೀಠ ಪುರಸ್ಕೃತ ಸಾಹಿತಿ ಡಾ|| ಯು. ಆರ್. ಅನಂತಮೂರ್ತಿ, ಮಾಜಿ ಸಚಿವ ಎಂ. ಪಿ. ಪ್ರಕಾಶ್ ಸೇರಿದಂತೆ ಅನೇಕ ಗಣ್ಯರಿಗೆ ಆಹ್ವಾನ ಕಳಿಸಿಲ್ಲ. ಸ್ವತಃ ನಲ್ಲೂರು ಪ್ರಸಾದ್ ಅವರೇ ಇದನ್ನು ಖಚಿತಪಡಿಸಿದ್ದಾರೆ' ಎಂದು ಬರೆದಿದೆ. ಅಲ್ಲದೆ, 'ಕನ್ನಡ ಸಾಹಿತ್ಯ ಪರಿಷತ್‌ಗೆ ಪರ್ಯಾಯವಾಗಿ ಮತ್ತೊಂದು ಪರಿಷತ್ ಕಟ್ಟಲು ಹೊರಟವರಿಗೆ ಆಹ್ವಾನ ಕಳಿಸಬೇಕಾದ ಔಚಿತ್ಯವೇನಿದೆ ? ಸಾಹಿತ್ಯ ಪರಿಷತ್ ತಾಯಿ ಇದ್ದಂತೆ. ತಾಯಿಗೆ ಪರ್ಯಾಯ ಹುಡುಕಲು ಸಾಧ್ಯವೇ ? ಚುನಾವಣೆಯಲ್ಲಿ ಸೋತ ಮೇಲೆ ಪರ್ಯಾಯ ಕಟ್ಟಲು ಹೊರಟವರನ್ನು ಏನೆಂದು ಕರೆಯಬೇಕು ? ಇಂಥವರನ್ನು ಕ್ಷಮಿಸಲು ಸಾಧ್ಯವಿಲ್ಲ – ಎಂಬುದು ನಲ್ಲೂರು ನಿಲುವು' ಎಂದು ತಿಳಿಸಿದೆ. ಇನ್ನು ಸಮ್ಮೇಳನವು ನಡೆದ ಆ ಮೂರು-ನಾಲ್ಕು ದಿನಗಳಲ್ಲಿ ಪತ್ರಿಕೆಗಳಿಗೆ ಸುದ್ದಿಯಾಗಿರುವುದು, ಸಮ್ಮೇಳನಕ್ಕೆ ಬಂದ ಜನರು ಅನ್ನ ನೀರು ನೆರಳಿಗಾಗಿ ಅನುಭವಿಸಿದ ಪರದಾಟ ಮತ್ತು ಸಮ್ಮೇಳನಾಧ್ಯಕ್ಷರ ನೇರ ನುಡಿಗಳು. 'ಸಮ್ಮೇಳನಾಧ್ಯಕ್ಷರು ಬಂಡಾಯದ ಬಾವುಟ ಹಾರಿಸುವ ಮೂಲಕ ಮುಖ್ಯಮಂತ್ರಿ ಬಿ. ಎಸ್. ಯಡಿಯೂರಪ್ಪ, ಸಾಹಿತ್ಯ ಪರಿಷತ್ ಅಧ್ಯಕ್ಷ ನಲ್ಲೂರು ಪ್ರಸಾದ್ ಒಳಗೊಂಡಂತೆ ಎಲ್ಲ ಗಣ್ಯರನ್ನೂ ಮುಜುಗರಕ್ಕೀಡುಮಾಡಿದರು. ಬಸವರಾಜು ಭಾಷಣದ ಮಧ್ಯೆ ಸಂಘಟಕರು ಹಸ್ತಕ್ಷೇಪ ಮಾಡಿ 'ಬ್ರೇಕ್' ಹಾಕಲು ಮಾಡಿದ ಪ್ರಯತ್ನ ಫಲಿಸಲಿಲ್ಲ... ನೆರೆದಿದ್ದ ಸಾವಿರಾರು ಜನರಿಂದ ಬಸವರಾಜು ಅವರ ಭಾಷಣಕ್ಕೆ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಯಿತು. ಲೆಕ್ಕವಿಲ್ಲದಷ್ಟು ಚಪ್ಪಾಳೆ ಶಿಳ್ಳೆಗಳು ಕೇಳಿಬಂದವು' ಇಂಥವೇ ವಿವರಗಳು.

ಮೊದಲು, ಸಮ್ಮೇಳನಕ್ಕೆ ಬಂದ ಜನರ ಪರದಾಟವನ್ನು ಗುರುತಿಸೋಣ; ವರ್ಷಗಳು ಕಳೆದಂತೆ ಸಮ್ಮೇಳನದಲ್ಲಿ ಸೇರುವವರ ಸಂಖ್ಯೆ ಲಕ್ಷಗಟ್ಟಲೆ ಬೆಳೆಯುತ್ತಿದೆ; 'ಇದೊಂದು ಜಾತ್ರೆಯಾಗುತ್ತಿದೆ' – ಎಂಬ ಆಕ್ಷೇಪಣೆಗಳು ಕೇಳಿಬಂದಿವೆ. 'ಇದು ಜಾತ್ರೆಯಾದರೂ ಅರ್ಥಪೂರ್ಣವಾಗಿದೆ; ದೇಶದ ವಿವಿಧ ಭಾಗಗಳ ಕನ್ನಡ ಜನರ ಪರಸ್ಪರ ಸಂಪರ್ಕಕ್ಕೆ ಪೂರಕವಾಗಿದೆ; ಕನ್ನಡ ಸಂಸ್ಕೃತಿ ಪ್ರಚಾರಕ್ಕೆ, ಸಾಹಿತ್ಯಾಭಿರುಚಿಯ ಪೋಷಣೆಗೆ ಸಹಾಯಕವಾಗಿದೆ' – ಎಂಬ ಸಮರ್ಥನೆಯೂ ಇದೆ. ಒಂದು ವಿಚಾರ: ಜಾತ್ರೆಗೆ ಬರುವ ಜನ ತಮ್ಮ ಅನ್ನ ನೀರು ವಸತಿಗಳಿಗಾಗಿ 'ವ್ಯವಸ್ಥಾಪಕರ'ನ್ನು ಅವಲಂಬಿಸಿರುವುದಿಲ್ಲ. ಬಯಲಿನಲ್ಲಿ ಒಲೆಹಚ್ಚಿ ಅನ್ನ ಬೇಯಿಸಿಕೊಳ್ಳುತ್ತಾರೆ, ಬಯಲಿನಲ್ಲೇ ಮಲಗುತ್ತಾರೆ. ಇವುಗಳಲ್ಲಿ ಕೊರತೆಯಾದರೆ ಯಾರನ್ನೂ ದೂಷಿಸುವುದಿಲ್ಲ. ಸಮ್ಮೇಳನದ ವಿಚಾರ ಹಾಗಲ್ಲ. 'ವ್ಯವಸ್ಥಾಪಕರ'ಲ್ಲಿ ಕೇಂದ್ರ ಸಾಹಿತ್ಯ ಪರಿಷತ್ತು ಮತ್ತು ಸ್ಥಳೀಯ ಸ್ವಾಗತ ಸಮಿತಿಗಳೆರಡೂ ಸೇರುತ್ತವೆ. ಯಾರ ಯಾರ ಹೊಣೆಗಾರಿಕೆ ಎಷ್ಟೆಂಬುದು ಖಚಿತವಿದೆಯೆ ? (ಕಡೆಯ ದಿನ ಕೇಂದ್ರ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಪೊಲೀಸರ ರಕ್ಷಣೆಯಲ್ಲಿ ಗುಂಪಿನಿಂದ ತಪ್ಪಿಸಿಕೊಂಡು ಬರಬೇಕಾಯಿತಂತೆ!) ಈ ಗೊಂದಲವನ್ನು ತಪ್ಪಿಸಬಹುದಲ್ಲವೆ ? ಸಮ್ಮೇಳನದ ಅಧ್ಯಕ್ಷರ ಆಯ್ಕೆ, ಗೋಷ್ಠಿಗಳ ವ್ಯವಸ್ಥೆ ಮೊದಲಾದ ಮುಖ್ಯಾಂಶಗಳಿಗೆ ಕೇಂದ್ರ ಪರಿಷತ್ತು ತನ್ನ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಬಹುದು. ಈ ಬಾಬುಗಳಿಗೆ ತಗಲುವ ಖರ್ಚುವೆಚ್ಚಗಳನ್ನು ಪರಿಷತ್ತು ತನ್ನ ಸಂಚಿತ ನಿಧಿಯಿಂದ ಪೂರೈಸಬಹುದು. ಸಮ್ಮೇಳನಕ್ಕೆ ತಾನು ಆಹ್ವಾನಿಸಬೇಕೆಂದಿರುವ ಗಣ್ಯರ ಪಟ್ಟಿಯನ್ನು ಪೂರ್ವಭಾವಿಯಾಗಿ ಸ್ವಾಗತ ಸಮಿತಿಗೆ ಕಳಿಸಿಕೊಟ್ಟು, ಸ್ವಾಗತ ಸಮಿತಿಯು ಅವರನ್ನು ಖಚಿತವಾಗಿ ಆಹ್ವಾನಿಸುವಂತೆ ವಿನಂತಿಸಿಕೊಳ್ಳಬಹುದು.

ಇನ್ನು ಸಮ್ಮೇಳನವನ್ನು ನಡೆಸುವವರು ತಮ್ಮಿಂದ ಉಚಿತ ರೀತಿಯಲ್ಲಿ ನಿಭಾಯಿಸಲು ಸಾಧ್ಯವಾಗುವಷ್ಟು ಜನರನ್ನು ಮಾತ್ರ ಸಮ್ಮೇಳನದಲ್ಲಿ ಸೇರಿಸುವ ಜವಾಬ್ದಾರಿ ವಹಿಸಿಕೊಳ್ಳಲಿ. ಸ್ವಾಗತ ಸಮಿತಿಯು ಸ್ಥಳೀಯರ ಮತ್ತು ದಾನಿಗಳ ಕೊಡುಗೆಯಿಂದ ಸ್ಮರಣ ಸಂಚಿಕೆಯಲ್ಲಿ ಜಾಹಿರಾತುಗಳಿಂದ ಅಗತ್ಯವಾದ ಹಣವನ್ನು ಸಂಗ್ರಹಿಸಿಕೊಳ್ಳಬಹುದು. ಆದ್ದರಿಯಾಗಿ ಸಮ್ಮೇಳನ

ನಡೆಯಬೇಕೆಂದಾದರೆ ಸರ್ಕಾರದ ಅನುದಾನದ ಅಗತ್ಯವಿದ್ದೇ ಇದೆ. ಈ ಬಾರಿಯ ಸಮ್ಮೇಳನಾಧ್ಯಕ್ಷರು 'ಸರ್ಕಾರದಿಂದ ೨ ಕೋಟಿ ಪಡೆದುಕೊಂಡು ನಾವು ಯಾಕೆ ಊಟ ಹಾಕಬೇಕು ? ಅಷ್ಟನ್ನೂ ಕನ್ನಡಿಗರು ಕೊಡುವುದಿಲ್ಲವೆ ?' ಎಂದು ಕಿಡಿಕಾರಿದರು. ಇದು ಪತ್ರಿಕೆಗಳಲ್ಲಿ ವರದಿಯಾಗಿದೆ. ಕಿಡಿಕಾರುವ ಮಾತು ಹಾಗಿರಲಿ, ಸರ್ಕಾರವು ಕೊಡುವ ಹಣವು ಕೂಡ ಸಾರ್ವಜನಿಕರ ಹಣವೇ. ಆದರೆ ಸಮ್ಮೇಳನ ನಡೆಯುವ ಅವಧಿಯಲ್ಲಿ ಪರಿಷತ್ತಿನ ಅಧ್ಯಕ್ಷರು ಯಾರಿರುತ್ತಾರೆ, ಸಮ್ಮೇಳನದ ಅಧ್ಯಕ್ಷರು, ಸ್ವಾಗತ ಸಮಿತಿಯ ಅಧ್ಯಕ್ಷರು, ಸದಸ್ಯರು ಯಾರೆಲ್ಲ ಇರುತ್ತಾರೆ ಎಂಬುದನ್ನು ನೋಡಿಕೊಂಡು ಹಣ ಬಿಡುಗಡೆ ಮಾಡುವ ರೂಢಿ ತಪ್ಪಬೇಕು. ಸಮ್ಮೇಳನಕ್ಕೆ ದೊರೆಯಲಿರುವ ಅನುದಾನವನ್ನು ಆಯವ್ಯಯ ಅಂದಾಜನ್ನು (ಬಜೆಟ್) ಮಂಡಿಸುವ ಸಂದರ್ಭದಲ್ಲೆ ತಿಳಿಸುವುದೊಳ್ಳೆಯದು. ಇದರಿಂದ ಸ್ವಾಗತ ಸಮಿತಿಯು ತನ್ನ ಆಯವ್ಯಯಗಳನ್ನು ನೋಡಿಕೊಂಡು ಸಮ್ಮೇಳನದ ಸಿದ್ಧತೆಮಾಡಿಕೊಳ್ಳುವುದು ಸುಲಭವಾಗುತ್ತದೆ. ಹಿಂದಿನ ವರ್ಷ ಬಿಡುಗಡೆಯಾದ ಹಣದ ಲೆಕ್ಕ ಸಂದಾಯವಾಗಿಲ್ಲ ಮೊದಲಾದ ಕಾರಣಗಳನ್ನೊಡ್ಡಿ ಹಣ ಬಿಡುಗಡೆ ಮಾಡಲು ಸತಾಯಿಸುವುದು ಸರಿಯಲ್ಲ. ಅಲ್ಲದೆ, ಮೊದಲು ಒಂದು ಕೋಟಿಯೊ ಎರಡು ಕೋಟಿಯೋ ಕೊಡುತ್ತೇವೆಂದು ಹೇಳಿ, ಉದ್ಘಾಟನಾ ಸಮಾರಂಭದಲ್ಲಿ ಸ್ಫೂರ್ತಿಗೊಂಡು ಇಪ್ಪತ್ತು ಲಕ್ಷವೋ, ಐವತ್ತು ಲಕ್ಷವೋ ಹೆಚ್ಚು ಕೊಡುತ್ತೇವೆನ್ನುವುದು - ಚೆನ್ನಾಗಿ ಕಾಣುವುದಿಲ್ಲ. ಸಮ್ಮೇಳನಕ್ಕೆ ಸುಮಾರು ೩-೪ ಕೋಟಿ ಖರ್ಚಾಯಿತೆಂದು ಪತ್ರಿಕೆಗಳು ಅಂದಾಜು ಮಾಡುತ್ತವೆ.

ಇನ್ನು ಸಮ್ಮೇಳನಾಧ್ಯಕ್ಷರ ಭಾಷಣಕ್ಕೆ, ಅದರಲ್ಲಿಯೂ ಅವರು ಆಡಿದರೆನ್ನಲಾದ ತಥಾಕಥಿತ ವಿವಾದಾಸ್ಪದವಾದ ಕೆಲವು ಮಾತುಗಳಿಗೆ, ಹಿಂದೆಂದಿಗಿಂತಲೂ ಹೆಚ್ಚಿನ ಪ್ರತಿಕ್ರಿಯೆ ಮತ್ತು ಪ್ರಚಾರ ಸಿಕ್ಕಿದೆ. ಜನಪ್ರಿಯ ವಾರಪತ್ರಿಕೆ ಸುಧಾ, ಈ ತಿಂಗಳು ಮೂರನೆ ವಾರದ ಸಂಚಿಕೆಯಲ್ಲಿ ಬರೆದಿರುವುದು ಹೀಗೆ :

''... ನೇರ ನಡೆ-ನುಡಿಗಳಿಗೆ ಹೆಸರಾದ ಡಾ|| ಎಲ್. ಬಸವರಾಜು ಅವರು ಯಾವ ಭಿಡೆಯೂ ಇಲ್ಲದೆ ತಮಗೆ ಅನ್ನಿಸಿದ್ದನ್ನು ಹೇಳಿದ್ದಾರೆ. ಅವರ ಮಾತುಗಳಿಂದ ಹಲವರಿಗೆ ನೋವಾಗಿದೆ, ಹಲವರು ಮುಜುಗರಕ್ಕೆ ಒಳಗಾಗಿದ್ದಾರೆ. 'ಮಠಾಧೀಶರು ಸಾಹಿತ್ಯ ಸಮ್ಮೇಳನಕ್ಕೆ ಬೇಡವೆಂದಾದರೆ ಮಠಾಧೀಶರೇ ಸಂಘಟಿಸಿದ ಸಮ್ಮೇಳನದ ಅಧ್ಯಕ್ಷತೆಯನ್ನು ಡಾ|| ಬಸವರಾಜು ಒಪ್ಪಿಸಿಕೊಂಡದ್ದೇಕೆ' ಎಂಬ ತಾರ್ಕಿಕ ಪ್ರಶ್ನೆಯೂ ಎದುರಾಗಿದೆ.'' ...''ಮಠಾಧೀಶರೇನೂ ಪ್ರಶ್ನಾತೀತರಲ್ಲ. ಶಿಕ್ಷಕರನ್ನು, ರಾಜಕಾರಣಿಗಳನ್ನು ಪ್ರಶ್ನಿಸುವುದಾದರೆ ಮಠಾಧೀಶರನ್ನೇಕೆ ಪ್ರಶ್ನಿಸಬಾರದು ?'' ಎಂಬ ಮಾರುತ್ತರವೂ ಬಂದಿದೆ.

ಇಲ್ಲಿನ ಪ್ರಶ್ನೋತ್ತರಗಳು ತರ್ಕಬದ್ಧವಾಗಿರಬಹುದು. ಆದರೆ ಇದರಿಂದ 'ಈ ಬಾರಿ ಚಿತ್ರದುರ್ಗದ ಸಾಹಿತ್ಯ ಸಮ್ಮೇಳನವನ್ನು ಸಂಘಟಿಸಿದವರು ಮಠಾಧೀಶರು' ಎಂಬ ಅರ್ಥ ಪ್ರತೀತವಾಗುವುದಿಲ್ಲವೆ ? ಹಾಗಿದ್ದರೆ ಕೇಂದ್ರ ಸಾಹಿತ್ಯ ಪರಿಷತ್ತು, ಸ್ವಾಗತ ಸಮಿತಿ, ಸರ್ಕಾರ ಇವೆಲ್ಲವುಗಳ ಪಾತ್ರವೇನು ?

ಯಾರೂ ಪ್ರಶ್ನಾತೀತರಲ್ಲವೆಂಬುದು ನಿಜ. ಆದರೆ ಯಾರನ್ನು ಎಲ್ಲಿ, ಹೇಗೆ ಪ್ರಶ್ನಿಸಬೇಕು ಎಂಬುದೂ ಮುಖ್ಯವಲ್ಲವೆ ?

ಡಾ|| ಬಸವರಾಜು ಅವರಿಗೆ ಸರ್ಕಾರದ ಬಗೆಗೆ, ಮಠಾಧೀಶರ ಬಗೆಗೆ ಇರಬಹುದಾದ ಕೋಪವನ್ನು, ದೀನ ದಲಿತರ ಬಗೆಗೆ ತಮ್ಮ ಕಳಕಳಿಯನ್ನು ಅಭಿವ್ಯಕ್ತಿಸಲು ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠವು ಸರಿಯಾದ ವೇದಿಕೆಯೆ ? ಭಾಷೆಗೆ ಸಂಬಂಧಿಸಿದ ವಿವಿಧ ಅಕೆಡಮಿಗಳನ್ನು ಪರಿಷತ್ತಿನ ಅಂಗಸಂಸ್ಥೆಗಳಾಗಿಸಬಹುದೆಂಬ ಸಲಹೆ ವಿಚಾರಯೋಗ್ಯವಾಗಿದೆ. ಆದರೆ ಸಮ್ಮೇಳನಾಧ್ಯಕ್ಷರ ಭಾಷಣ ಮತ್ತು ಆ ಕುರಿತು ನಡೆಯುವ ಚರ್ಚೆ, ಸಂವಾದಗಳು ಪರೋಕ್ಷವಾಗಿಯಾದರೂ ಸಾಹಿತ್ಯಕ್ಕೆ ಸಂಬಂಧಪಟ್ಟಿರುವುದು ಅವಶ್ಯವಲ್ಲವೆ ?

## ಲಕ್ಷ್ಮಣ ರೇಖೆಯೊಳಗೆ ಉಸಿರುಗಟ್ಟಿದ ಸೀತೆಯರು

**ಕ**ರ್ನಾಟಕದಲ್ಲಿ ಇಂದು ರಾಮಮಂತ್ರ ಜಪಿಸುತ್ತಾ ಅಧಿಕಾರದ ಗದ್ದುಗೆಯೇರಿ ಕೂತವರ ರಕ್ಷೆಯಲ್ಲಿ ಭಾರತೀಯ ಸಂಸ್ಕೃತಿಯ ಸ್ವಘೋಷಿತ ಗುತ್ತಿಗೆದಾರರು ನೈತಿಕ ಪೊಲೀಸರಾಗಿ ಮೆರೆಯುತ್ತಿದ್ದಾರೆ. ಶ್ರೀರಾಮ ಸೇನೆಯ ನೇತೃತ್ವದ ಈ ನೈತಿಕ ಪೊಲೀಸ್‌ಗಿರಿಗೆ ರಾಜಕೀಯ ಆಯಾಮವೂ ಇರುವುದರಿಂದ ಸಮಸ್ಯೆ ಅತ್ಯಂತ ಗಂಭೀರ ಸ್ವರೂಪ ಪಡೆದಿದೆ. ಭಯೋತ್ಪಾದನೆಯ ವಿರುದ್ಧದ ಆಂದೋಲನ ಕೈಗೊಂಡಿರುವ 'ಸಂಸ್ಕೃತಿಯ ರಕ್ಷಕ'ರೇ ಈ ಸಾಂಸ್ಕೃತಿಕ ಭಯೋತ್ಪಾದನೆಗೆ ಕುಮ್ಮಕ್ಕು ಕೊಡುತ್ತಿರುವುದು ಪ್ರಜಾಪ್ರಭುತ್ವದ ಬೇರುಗಳನ್ನು ಅಲ್ಲಾಡಿಸುತ್ತಿದೆ.

ಇತ್ತೀಚೆಗೆ ಮಂಗಳೂರಿನ ಪಬ್‌ನಲ್ಲಿ ರಾಮಸೇನೆಯ ಆಕ್ರಮಣಕ್ಕೆ ಒಳಗಾದವರು ಐದು ಹುಡುಗಿಯರಾದರೂ, ಆ ಏಟಿನ ಅಪಮಾನ ಮಹಿಳೆಯರೆಲ್ಲರಿಗೂ ಗುರಿಯಾಗಿಸಿರುವಂತಹುದು. ಈ ಆಘಾತ ಮಹಿಳೆಯರೆಲ್ಲರಿಗೂ ಸಿಟ್ಟು ಬರಿಸಿದೆ; ಗಾಬರಿ ಹುಟ್ಟಿಸಿದೆ. ಆ ಹುಡುಗಿಯರ ಕೂದಲು ಹಿಡಿದು ಎಳೆದಾಡಿ, ದೈಹಿಕವಾಗಿ ಅವರನ್ನು ಶಿಕ್ಷಿಸಿದ ದೃಶ್ಯ ಮಾಧ್ಯಮದಲ್ಲಿ ಕಂಡವರು ಯಾರೂ ಈ ದೇಶದಲ್ಲಿ ನಾರಿಯರು ಪೂಜೆಗೊಳ್ಳುತ್ತಾರೆ, ಎಂದು ಹೇಳುವುದಿಲ್ಲ. ಪೊಲೀಸ್ ಬಂಧನದಲ್ಲಿರುವಾಗಲೂ ಹೆಮ್ಮೆಯಿಂದ ತಾವು ಮಾಡಿದ್ದೇ ಸರಿ ಎಂದು ಹೇಳುತ್ತಾ, ಅವಕಾಶ ಸಿಕ್ಕರೆ, ನಾವು ಮುಂದೆಯೂ ಇಂತಹ ಮಹಿಳೆಯರ ಮೇಲೆ ಆಕ್ರಮಣ ಮಾಡುತ್ತೇವೆ ಎನ್ನುವ ಪುಂಡುತನ ತೋರುವ ಸೇನಾನಿಗಳು ಒಂದು ಕಡೆಯಾದರೆ, 'ಇದೇನು ಮಹಾ' ಸಣ್ಣ ಘಟನೆ ! ಏನೇ ಆದರೂ ನಾವು ಪಬ್ ಸಂಸ್ಕೃತಿಯನ್ನು ಸಹಿಸುವುದಿಲ್ಲ' ಎಂದು ನುಡಿದಿರುವ ಸ್ಥಳೀಯ ಶಾಸಕ ಕೃಷ್ಣ ಪಾಲೇಮಾರ್‌ರವರ ಬೇಜವಾಬ್ದಾರಿತನ ಯಾರೂ ಕ್ಷಮಿಸಲು ಸಾಧ್ಯವಿಲ್ಲ. ಅದು ಸಾಲದೆಂಬಂತೆ, ಕಾನೂನನ್ನು ಕೈಗೆತ್ತಿಕೊಂಡವರನ್ನು ಶಿಕ್ಷಿಸುವುದಕ್ಕಿಂತ ಮೊದಲಿಗೆ ಇದರಲ್ಲಿ ರಾಜಕೀಯ ವಾಸನೆ ಹುಡುಕಲು ಹೊರಟ ಗೃಹಮಂತ್ರಿಯಿಂದ ಎಂತಹ ಭದ್ರತೆಯನ್ನು ಸ್ತ್ರೀಸಮೂಹ ನಿರೀಕ್ಷಿಸಲು ಸಾಧ್ಯ?

(೭ನೇ ಪುಟಕ್ಕೆ)






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

ಮತ್ತು ಮಧ್ಯಯುಗದ ಸಾಮಾಜಿಕ ಆಚರಣೆಗಳನ್ನು ಹೇರಲು ತವಕಿಸುವ ಸೇನೆ ಇನ್ನೊಂದು ಕಡೆ : ಎಂತಹ ಸಂಯೋಗ ಇದು ! ಸೇನೆಯ ಕಾರ್ಯಕ್ರಮವು ದಕ್ಷಿಣ ಆಫ್ರಿಕಾದಲ್ಲಿ ಜಾರಿಯಲ್ಲಿದ್ದ ''ಅಪಾರ್ಥೈಡ್'' (ವರ್ಣವಿದ್ವೇಷ ನೀತಿ)ಗೆ ಸಮಾನವಾದ ಪಿಡುಗನ್ನು ತರಲು ಹೊರಟಿದೆ. ಅಲ್ಲಿ ವರ್ಣದ ಆಧಾರದಲ್ಲಿ ಮಾಡಲಾದ ಅಕ್ಷಮ್ಯ ಪಾತಕಗಳನ್ನು ಇಲ್ಲಿ ಮತೀಯ ಆಧಾರದಲ್ಲಿ ಮಾಡಹೊರಟಿದ್ದಾರೆ. ಹಿಂದುಗಳು ಮುಸಲ್ಮಾನರನ್ನು ಮಾತನಾಡಿಸಕೂಡದು, ಅವರ ಅಂಗಡಿಗಳಲ್ಲಿ ಏನನ್ನೂ ಕೊಳ್ಳ ಕೂಡದು, ಅವರೊಡನೆ ಸಮಾರಂಭಗಳಲ್ಲಿ ಭಾಗವಹಿಸಕೂಡದು, ಶಾಲಾ-ಕಾಲೇಜುಗಳಲ್ಲಿ ಅವರ ಸಂಸರ್ಗ ಕೂಡದು ಇತ್ಯಾದಿ ತುಚ್ಛ ಮಾತುಗಳನ್ನು ೨೧ನೆಯ ಶತಮಾನದಲ್ಲಿ ನಾವು ಕೇಳಬೇಕಾಗಿದೆ! ಇದು ಸಾಮಾನ್ಯವಾದ ವಿಷಯವಲ್ಲ. ಹೀಗೇ ಮುಂದುವರಿದರೆ ನಾಳೆ ದಕ್ಷಿಣ ಕನ್ನಡದ ಮುಸಲ್ಮಾನರು ಬೇರೆಲ್ಲಿಗೋ ಹೋಗಿ ಶಿಬಿರಗಳಲ್ಲಿ ಆಶ್ರಯ ಪಡೆಯಬೇಕಾಗಿ ಬಂದೀತು. ಕಾಶ್ಮೀರದ ಪಂಡಿತರು ಹತ್ತು ವರ್ಷಗಳಿಂದ ಜಮ್ಮು ಮತ್ತು ದೆಹಲಿಯಲ್ಲಿ ಶಿಬಿರಗಳಲ್ಲಿ ವಾಸ ಮಾಡುತ್ತಿದ್ದಾರೆ ಮತ್ತು ಭಾರತದ ಯಾವ ನಾಗರಿಕನೂ ಅನುಭವಿಸಬಾರದ ಸಂಕಷ್ಟವನ್ನು ಎದುರಿಸುತ್ತಿದ್ದಾರೆ. ಉತ್ತರದ ಕಾಶ್ಮೀರದಂತೆ ದಕ್ಷಿಣದ ದಕ್ಷಿಣ ಕನ್ನಡವು ಮಾರ್ಪಡಬೇಕೆ ಅಥವಾ ಕಾಶ್ಮೀರವು ಯಥಾಸ್ಥಿತಿಗೆ ಮರಳಿ ಪಂಡಿತರು ಅಲ್ಲಿ ಮತ್ತೆ ನಿರಾಳವಾಗಿ ಬದುಕುವಂತಾಗಬೇಕೆ ? ಮಾನ್ಯ ಡಾ॥ ಯಡಿಯೂರಪ್ಪನವರು ಈ ಪ್ರಶ್ನೆಯನ್ನು ಹಾಕಿಕೊಳ್ಳಬೇಕೆಂದು ಬಯಸುತ್ತೇವೆ. ಶ್ರೀರಾಮ ಸೇನೆಯ ಕುಕೃತ್ಯಗಳು ಹೊರಗೆ ಕಾಣುವಷ್ಟು ನಿರಾತಂಕದವಲ್ಲ, ಅವು ಪೂರ್ಣ ಪ್ರಮಾಣದ ಕ್ಷೋಭೆಗೆ ಕಾರಣವಾಗುತ್ತವೆ. ಇದನ್ನು ಮರೆಯದಿರೋಣ.

ಫ್ಯಾಸಿಸ್ಟ್ ಅಸಹನೆ ಮತ್ತು ಸರ್ವಾಧಿಕಾರಿ ಮನೋಭಾವಕ್ಕೆ ನಿದರ್ಶನವೆಂಬಂತೆ ಫೆಬ್ರವರಿ ೧೮ರಂದು ಕಲಾ ಪ್ರದರ್ಶನವೊಂದರ ಉದ್ಘಾಟನೆಯ ಸಂದರ್ಭದಲ್ಲಿ ಸಚಿವ ರಾಮಚಂದ್ರೇಗೌಡರು ಕಲಾವಿದರು ಏನನ್ನು ಚಿತ್ರಿಸಬೇಕು, ಹೇಗೆ ಚಿತ್ರಿಸಬೇಕು ಎಂಬುದರ ಬಗ್ಗೆ ಸಂಹಿತೆಯೊಂದನ್ನು ತಮ್ಮ ಅಜ್ಞಾನದ ಖನಿಯಿಂದ ಹೊರತೆಗೆದು ಕಲಾವಿದರ ಮುಂದಿಟ್ಟಿದ್ದಾರೆ. ಸಭೆಯಲ್ಲಿ ಅವರನ್ನು ಪ್ರಶ್ನಿಸಿದ ಕಲಾವಿದ ಶ್ರೀ ಮೂರ್ತಿಯವರನ್ನು ಪೊಲೀಸರಿಗೆ ಹೇಳಿ ಗೌಡರು ಹೊರಹಾಕಿಸಿದ್ದಾರೆ. ಶ್ರೀರಾಮ ಸೇನೆಯ ವರ್ತನೆಗಿಂತ ಇದೇನೂ ಕಡಿಮೆಯಲ್ಲ. ಕಲಾವಿದರು ಇನ್ನು ಬಾಯಿಮುಚ್ಚಿ ಕುಳಿತಿರಲು ಸಾಧ್ಯವಿಲ್ಲ.

* * *

ಕನ್ನಡವನ್ನು ಶಾಸ್ತ್ರೀಯ ಭಾಷೆಯೆಂದು ಪರಿಗಣಿಸಿ ಕೇಂದ್ರ ಸರ್ಕಾರವು ಹೊರಡಿಸಿರುವ ಆಜ್ಞೆಯಲ್ಲಿ ''ಮದ್ರಾಸ್ ಹೈಕೋರ್ಟಿನಲ್ಲಿರುವ ವಿಚಾರಣೆಯ ತೀರ್ಪನ್ನು ಆಧರಿಸಿದಂತೆ'' ಎಂಬ ಕರಾರನ್ನು ವಿಧಿಸಲಾಗಿದೆ. ಅದಾರೋ ೮೦ ವರ್ಷದ ಗಾಂಧಿ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ಕೊಡಕೂಡದೆಂದು ಆಗ್ರಹಿಸಿ ಕೋರ್ಟಿಗೆ ಹೋಗಿದ್ದಾರಂತೆ. ವಿಚಾರಣೆ ಮುಗಿಯಲು ಇನ್ನೆಷ್ಟು ವರ್ಷ ಬೇಕೋ ಯಾರಿಗೆ ಗೊತ್ತು! ಅಲ್ಲಿಯವರೆಗೆ ಕರ್ನಾಟಕದ ಜನ ಚಾತಕ ಪಕ್ಷಿಯಂತೆ ಆಕಾಶದತ್ತ ಮುಖಮಾಡಿ ನಿಂತಿರಬೇಕು!! ಆಜ್ಞೆಯನ್ನು ಹೊರಡಿಸಿದ ಕೇಂದ್ರ ಸರ್ಕಾರವು ತನ್ನ ಆಜ್ಞೆಯನ್ನು ಸಮರ್ಥಿಸಿಕೊಳ್ಳುವ ಜವಾಬ್ದಾರಿ ಹೊರಬೇಕು, ಆದರೆ ಅಲ್ಲಿಯ ನೇತಾರರಿಗೆ ಅದಕ್ಕೆಲ್ಲಾ ವೇಳೆಯಿಲ್ಲ. ರಾಜ್ಯೋತ್ಸವದ ವೇಳೆಗೆ ಎಂಥದೋ ಕೆಲಸಕ್ಕೆ ಬಾರದ ಆಜ್ಞೆ ಹೊರಡಿಸಿರುವುದು ಕೇಂದ್ರಕ್ಕೆ ಹೆಮ್ಮೆ ಇರಬೇಕು. ಅದನ್ನು ಮುದ್ರಿಸಿರುವ ಬೂದುಹಾಳೆಯಷ್ಟೂ ಪ್ರಯೋಜನವಿಲ್ಲದ ಆಜ್ಞೆ ಅದು. ಶಾಸ್ತ್ರೀಯ ಭಾಷೆಯ ಸ್ಥಾನದ ಬಗ್ಗೆ ತೀರ್ಮಾನಿಸಲು ರಚನೆಗೊಂಡಿದ್ದ ಸಮಿತಿಯ ಎರಡನೆ ಸಭೆಯಲ್ಲಿ ಹಾಜರಿದ್ದವರು ೫ ಮಂದಿ (ಒಟ್ಟು೯ ಮಂದಿಯ ಪೈಕಿ). ಹಾಜರಿಲ್ಲದವರು ೪ ಮಂದಿ. ಹಾಜರಾದ ೫ ಸದಸ್ಯರ ಪೈಕಿ ಒಬ್ಬರು ಸಭೆಯ ತೀರ್ಮಾನವನ್ನು ಅಂಗೀಕರಿಸಲು ಸಾಧ್ಯವಿಲ್ಲವೆಂದು ಬರೆದುಕೊಟ್ಟಿದ್ದಾರೆ. ನಿರ್ಣಯವನ್ನು ಬೆಂಬಲಿಸಿದವರಲ್ಲಿ ಇಬ್ಬರು ಕರ್ನಾಟಕೇತರರು, ಆದರೆ ಇಬ್ಬರೂ ಮೈಸೂರಿನಲ್ಲಿರುವ ಕೇಂದ್ರೀಯ ಭಾಷಾ ಸಂಸ್ಥೆಯ ನಿರ್ದೇಶಕರು. ಅವರಿಬ್ಬರ ಮೇಲೂ ಕರ್ನಾಟಕವು ಒತ್ತಡ ಹೇರಿದ್ದಿತೆಂದು ಅರ್ಜಿದಾರರು ಕೋರ್ಟಿಗೆ ಹೇಳಿದ್ದಾರೆ. ನಮ್ಮ ಭಾಷೆಗೆ 'ಶಾಸ್ತ್ರೀಯ' ಎಂಬ ಗುಣವಾಚಕ ಸೇರಿಸಲು ಇಷ್ಟೆಲ್ಲಾ ಪಂಚಾಯಿತಿ ಬೇಕೆ ? ನಮ್ಮ ರಾಜ್ಯ ಸರ್ಕಾರಕ್ಕೆ ನಿಜಕ್ಕೂ ಆಸಕ್ತಿ ಇದ್ದರೆ ಶಾಸ್ತ್ರೀಯ ಭಾಷೆಯಾದ ನಂತರ ನಡೆಯಬಹುದಾದ ಸಂಶೋಧನೆ ಮುಂತಾದುವನ್ನು ತನ್ನ ಖರ್ಚಿನಲ್ಲಿ ಈಗಲೇ ಆರಂಭಿಸಲು ಅಡ್ಡಿಯಿಲ್ಲ. ದೆಹಲಿಯ ಸರದಾರರ ಹಣವನ್ನು ಎದುರುನೋಡುತ್ತಾ ಕುಳಿತಿರಬೇಕಾಗಿಲ್ಲವೆಂಬುದನ್ನು ಸರ್ಕಾರ ತಿಳಿದುಕೊಳ್ಳಬೇಕು.

* * *

ಐಶ್ವರ್ಯ ರೈ ಎಂಬ ಸುಂದರಿಗೆ 'ಪದ್ಮಶ್ರೀ' ಎಂಬ ಬಿರುದನ್ನು ನಮ್ಮ ರಾಷ್ಟ್ರಪತಿಯವರು ದಯಪಾಲಿಸಿದ್ದಾರೆ. ಒಲಿಂಪಿಕ್ ಹೀರೋ ಬಿಂದ್ರಾಗೆ ಮತ್ತು ಕೆಲವು ಕ್ರಿಕೆಟ್ಟಿಗರಿಗೂ ಅದನ್ನು ಕೊಟ್ಟಿದ್ದಾರೆ. ಒಲಿಂಪಿಕ್ ಪಾರಿತೋಷಕ ಪಡೆದ ಕುಸ್ತಿಪಟುಗಳಿಬ್ಬರಿಗೆ ಅದನ್ನು ಕೊಟ್ಟಿಲ್ಲ. ಅವರು ಬಿಂದ್ರಾನಷ್ಟು ಬೆಳ್ಳಗಿಲ್ಲ, ಅವನಲ್ಲಿರುವಷ್ಟು ಹಣ ಹೊಂದಿಲ್ಲ ಮತ್ತು ಅವನಂತೆ ಸೊಗಸಾಗಿ ಇಂಗ್ಲಿಷ್ ಮಾತನಾಡಲು ಬಾರದ ಪೇದೆಗಳು; ಆದ್ದರಿಂದ ಅವರಿಗೆ ಯಾವ ಪದ್ಮವನ್ನಾಗಲಿ ಪಾರಿಜಾತವನ್ನಾಗಲಿ ನೀಡಲು ಬರುವುದಿಲ್ಲ! ಇದು ನಮ್ಮ ದೇಶವು ಆಟಪಾಟಗಳನ್ನು ಪ್ರೋತ್ಸಾಹಿಸುವ ರೀತಿ. ಮಾಧ್ಯಮಗಳು ಕ್ರಿಕೆಟ್‌ಗಾದರೆ ಒರಲುತ್ತವೆ, ಗಂಟೆಗಟ್ಟಲೆ ಚೀರುತ್ತವೆ; ಆದರೆ ಕುಸ್ತಿಯು ಶ್ರೀಮಂತ ನಾಗರಿಕರ ಕಣ್ಣಿಗೆ ರುಚಿಸಕೂಡದೋ ಏನೋ! ಕ್ರಿಕೆಟ್ಟಿಗನಾದರೆ ಖೂನಿ ಮಾಡಿಯೂ ಬಚಾವಾಗಬಹುದು, ಆದರೆ ಕುಸ್ತಿಪಟುವು ಜಟಕಾ ಬಂಡಿ ಹತ್ತಿದರೂ ಆಕ್ಷೇಪಕ್ಕೆ ಗುರಿಯಾಗಬಹುದು. ಇದಕ್ಕಿಂತಲೂ ನಾಚಿಕೆಗೇಡಿನ ಸಂಗತಿ ಬೇಕೆ !

ಐಶ್ವರ್ಯಮ್ಮನವರದು ಇನ್ನೂ ದೊಡ್ಡ ಸಾಧನೆ, ಏಕೆಂದರೆ ಅವರಿಗೆ ಪದ್ಮ ಪ್ರಶಸ್ತಿಯನ್ನು ದೊರಕಿಸಿಕೊಡಲು ಅಮರ್ ಸಿಂಗ್ ಎಂಬ ರಾಜಕೀಯ ಹುಳು ಪ್ರಧಾನ ಮಂತ್ರಿಯ ಮೇಲೆ ಒತ್ತಡ ಹೇರಿದೆ. 'ನಿಮ್ಮ ಸರ್ಕಾರ ಉಳಿಯಬೇಕಾದರೆ ಪ್ರಶಸ್ತಿ ಕೊಡಿ' ಎಂಬ ಒಂದು ಮಾತು ಸಾಕು, ಅಮರ್ ಸಿಂಗ್ ಬೇಕಾದ್ದನ್ನು ಪಡೆಯಬಹುದು. ಆತ ಅಂತಿಂಥವನಲ್ಲ, ಅಮೆರಿಕಾದಲ್ಲಿ ಕ್ಲಿಂಟನ್ ಫೌಂಡೇಶನ್ ಎಂಬ ಒಂದು ಸಂಸ್ಥೆಗೆ ಹತ್ತು ಲಕ್ಷ ಡಾಲರುಗಳನ್ನು (ಅಂದರೆ, ಸುಮಾರು ೫ ಕೋಟಿ ರೂಪಾಯಿಗಳನ್ನು) ದಾನವಾಗಿ ಕೊಟ್ಟಿರುವ ಭೂಪ. ಭೋಪಾಲ್‌ನಲ್ಲಿ ಸತ್ತವರಿಗೆ ಒಂದು ಕಾಸು ಕೊಡಲು ಸಿದ್ಧನಿಲ್ಲದ ಈ ಭೂಪ ಕ್ಲಿಂಟನ್ ಸಂಸ್ಥೆಗೆ ಲಾಭವಿಲ್ಲದೆ ೫ ಕೋಟಿ ಕೊಡುತ್ತಾನೆಯೆ ? ಏನು ಲಾಭ ಎಂಬುದನ್ನು ಹೊರತೆಗೆಯುವ ಅವಶ್ಯಕತೆ ಇದೆ.

ಈ ಮಧ್ಯೆ ಸಂಜಯ ದತ್ ಎಂಬ ಇನ್ನೊಬ್ಬ ''ಶ್ರೇಷ್ಠ ಕಲಾವಿದನು'' ಪಾರ್ಲಿಮೆಂಟಿಗೆ ಹೋಗಲೇಬೇಕೆಂದು ನಿರ್ಧರಿಸಿ ಅಮರ್ ಸಿಂಗ್‌ನ ಹಿಂದೆ ಬಿದ್ದಿದ್ದಾನೆ. ಆ ಅವ್ಯವಹಾರದಲ್ಲೂ ಅಮರ್‌ಗೆ ಒಂದು ಭಾರವಾದ ಹಣದ ಥೈಲಿಗೇನೂ ಮೋಸವಿಲ್ಲ. ಜೈಲಿನಲ್ಲಿರಬೇಕಾದ ಸಂಜಯ ದತ್ ಪಾರ್ಲಿಮೆಂಟಿಗೆ ಹೋಗುವುದು ನಮ್ಮಲ್ಲೇನೂ ಹೊಸ ಸಂಪ್ರದಾಯವಲ್ಲ. ಆದರೆ ಭಯೋತ್ಪಾದಕರ ಬಣದ ಜೊತೆ ನೇರ ಸಂಪರ್ಕ ಹೊಂದಿರುವವರು ಪಾರ್ಲಿಮೆಂಟಿನಲ್ಲಿ ಜನರ ಪ್ರತಿನಿಧಿಯಾಗಿ ಕುಳಿತುಕೊಳ್ಳಬೇಕೆ ? ನ್ಯಾಯಾಲಯವು ಈತನನ್ನು ಜಾಮೀನಿನ ಮೇಲೆ ಬಿಟ್ಟಿರುವುದಲ್ಲದೆ ವಿದೇಶಕ್ಕೆ ತೆರಳಲು ಸಹ ಅನುಮತಿ ನೀಡಿದೆ. ಇದನ್ನೆಲ್ಲಾ ನೋಡಿದರೆ ನಮ್ಮ ದೇಶದ ಸರ್ಕಾರ ನಡೆಸುತ್ತಿರುವವರು ಯಾರೆಂಬ ಸಂಶಯ ಬಲವಾಗಿ ಬೆಳೆಯುತ್ತದೆ. ಅಮರ್ ಸಿಂಗ್ ಪ್ರಭಾವ ಅಸಾಧಾರಣವಾದ್ದು. ಇನ್ನು ಮುಲಾಯಂ ಸಿಂಗ್ ಪ್ರಧಾನಿಯೇನಾದರೂ ಆಗಿಬಿಟ್ಟರೆ ಏನು ಗತಿ ? ಆಗ ಅಮರ ಸಿಂಗರನ್ನು ಯಾರು ತಡೆಯಬಲ್ಲರು !

* * *

ವಾಷಿಂಗ್‌ಟನ್ನಿನ ಶ್ವೇತ ಭವನದಲ್ಲಿ ಕೃಷ್ಣಮುಖಿ (ಅಂದರೆ ಕರಿ ಮುಖದವನು) ಬಂದು ಕುಳಿತದ್ದಾಯಿತು, ಆದರೆ ಪ್ರಪಂಚದಲ್ಲಿ ಬುಷ್ ಹರಿಯಬಿಟ್ಟಿದ್ದ ಯಾವ ಜಂತುವನ್ನೂ ಒಬಾಮಾ ಹಿಂದಕ್ಕೆ ಕರೆಸಿಕೊಂಡಿಲ್ಲ. ಪುಟಗಟ್ಟಲೆ ರಾಜಕೀಯದ ಭವಿಷ್ಯವನ್ನು ಬರೆದ ನಮ್ಮ ಶ್ರೇಷ್ಠ ಪತ್ರಕರ್ತರಿಗೆ ನೀರು ಕುಡಿದಷ್ಟೇ ಸುಲಭವಾಗಿ ಅವರೇ ಬರೆದಿದ್ದುದನ್ನೆಲ್ಲಾ ಮರೆಯುವ ಚಾಣಾಕ್ಷತನ ಇದೆ. ಆದರೂ ಅವರು ಬರೆದಿದ್ದನ್ನೆಲ್ಲಾ ಓದಿ ನಂತರ ೨೪ ಗಂಟೆಗಳಲ್ಲಿ ಮರೆತುಬಿಡುವ ನಮ್ಮ ಮಧ್ಯಮ ವರ್ಗದ ಪ್ರಜಾಕೋಟಿಗೇನೂ ಕಡಿಮೆ ಇಲ್ಲ.

ಶ್ವೇತ ಭವನದ ಅಧಿಕೃತ ವಕ್ತಾರ ರಾಬರ್ಟ್ ಗಿಬ್ಸ್ ಇತ್ತೀಚೆಗೆ ಒಂದು ಆಪ್ಯಾಯಮಾನವಾದ ಹೇಳಿಕೆ ನೀಡಿದ್ದಾನೆ. ಅದೇನೆಂದರೆ ''ಭಾರತ ಮತ್ತು ಅಮೆರಿಕಾ ಸಹಜವಾಗಿಯೇ ಮಿತ್ರರು'' ಎಂಬುದು. ಮಿತ್ರರೆಂದರೆ ಕೇವಲ ''ಹೈ, ಹಲೋ'' ಮಿತ್ರರಲ್ಲ, ಒಟ್ಟಾಗಿ ಕೂರುವುದು, ತಿನ್ನುವುದು, ಹೊಡೆಯುವುದು, ಹೊಡಿಸಿಕೊಳ್ಳುವುದು, ಎಲ್ಲವೂ ಈ ಮೈತ್ರಿಕೂಟದಲ್ಲಿ ಸೇರಿದೆ. ಪಾಕಿಸ್ತಾನದ ವಾಯವ್ಯ ಪ್ರದೇಶಕ್ಕೆ ಬಾಂಬು ಹಾಕಲು ಸದ್ಯದಲ್ಲೇ ಅಮೆರಿಕಾದ ವಿಮಾನಗಳು ಭಾರತದ ಯಾವುದಾದರೂ ನೆಲೆಯಿಂದ ಹಾರಿದರೂ ಆಶ್ಚರ್ಯವಿಲ್ಲ. ಮನಮೋಹನ ಸಿಂಗ್ ಅವರಿಗೆ ತಟ್ಟಿದ ಹೃದಯಾಘಾತಕ್ಕೆ ಕೋಟಿಪಟ್ಟು ಜಾಸ್ತಿ ನಮ್ಮ ದೇಶದ ಜನರಿಗೆ ಆಘಾತ ಆಗುವ ಸಮಯ ಹತ್ತಿರ ಬರುತ್ತಿದೆ. ೧೯೬೦ರ ದಶಕದಲ್ಲಿ ಕ್ಯೂಬಾದ ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೋ ಒಂದು ಮಾತು ಹೇಳಿದ್ದರು : ''ಸಮಾಜವಾದಿ ರಾಷ್ಟ್ರಗಳು ಅಲಿಪ್ತ ರಾಷ್ಟ್ರಗಳ ಸಹಜ ಮಿತ್ರರು'', ಎಂದು. ಆಗ ವಿಶ್ವದ

ಅನೇಕ ಪತ್ರಿಕೆಗಳು ಮತ್ತು ಇತರ ಮಾಧ್ಯಮಗಳು ಕ್ಯಾಸ್ಟ್ರೋ ಹೇಳಿಕೆಯನ್ನು ಕಟುವಾಗಿ ಟೀಕಿಸಿ ವಿರೋಧಿಸಿದ್ದರು. ಅಂದು ಗಂಟಲು ಹರಿದುಕೊಂಡವರಿಗೆ ಈಗ ಗಂಟಲು ಹೂತುಹೋಗಿದೆ. ವಿಶ್ವದ ಅನೇಕ ರಾಷ್ಟ್ರಗಳ ಸಂಪತ್ತನ್ನು ಲೂಟಿ ಮಾಡುವ, ಲಕ್ಷಗಟ್ಟಲೆ ಜನರನ್ನು ಕೊಲ್ಲುವ, ದುರಹಂಕಾರಕ್ಕೆ ಎಣೆಯಿಲ್ಲದ ಅಮೆರಿಕಾ ಸರ್ಕಾರವು ಭಾರತಕ್ಕೆ ಏಕೆ 'ಸಹಜ ಮಿತ್ರ' ಆಗಬೇಕು ? ಶ್ವೇತಭವನದಿಂದ ಆರಂಭಗೊಳ್ಳುವ ಪಾತಕಗಳ ಮೂಟೆಯನ್ನು ಹೊರಲು ನಮ್ಮ ವಿದೇಶಾಂಗ ಮಂತ್ರಿ ಪ್ರಣವ ಮುಖರ್ಜಿಯವರು ಕೂಲಿಯಾಳಾಗಿ ಪರಿವರ್ತನೆ ಹೊಂದಬೇಕೆ ? ಅಮೆರಿಕಾದೊಡನೆ 'ಸಹಜ ಮೈತ್ರಿಯೂ' ಬೇಡ, 'ಸಹಜ ದ್ವೇಷವೂ' ಬೇಡ; ಸುಮ್ಮನೆ ಸಹಜವಾದ ರಾಜತಾಂತ್ರಿಕ ಸಂಬಂಧವಿದ್ದರೆ ಸಾಕು. ''ಸಹಜ ಮಿತ್ರ''ನ ಬಂದೂಕುಗಳನ್ನು ಹೆಗಲ ಮೇಲಿರಿಸಿಕೊಳ್ಳುವ ಭಾರತೀಯರು ಯಾರೂ ಇಲ್ಲ ಎಂಬುದನ್ನು ರಾಬರ್ಟ್ ಗಿಬ್ಸ್‌ಗೆ ಮನವರಿಕೆ ಮಾಡಿಕೊಡಬೇಕು. ನಮ್ಮ ದೇಶವನ್ನು ಮನಮೋಹನ ಸಿಂಗರು ಯಾವ ದಿಕ್ಕಿನಲ್ಲಿ ಕೊಂಡೊಯ್ಯುತ್ತಿದ್ದಾರೆಂಬುದು ಇದರಿಂದ ಸ್ಪಷ್ಟವಾಗುತ್ತಿದೆ. ಭಾರತದ ಹಾದಿ ಅದಲ್ಲವೆಂಬುದನ್ನು ಕೆಲವೇ ತಿಂಗಳುಗಳಲ್ಲಿ ಭಾರತದ ಜನತೆಯು ಕಾಂಗ್ರೆಸ್ ಪಕ್ಷಕ್ಕೆ ಹೇಳುವುದಿದೆ. ಅದಕ್ಕೆ ಶುಭ ಹಾರೈಸೋಣ.

ಪ್ರಸ್ತುತ ಸಂಚಿಕೆಯಲ್ಲಿ ಈ ವರ್ಷದ ರಾಜ್ಯ ಮತ್ತು ಕೇಂದ್ರ ಆಯವ್ಯಯ ಹಾಗೂ ರೈಲ್ವೆ ಬಜೆಟ್‌ಗಳನ್ನು ವಿಶ್ಲೇಷಿಸುವ ಗೋಜಿಗೆ ಹೋಗಿಲ್ಲದಿರುವುದು ಓದುಗರ ಗಮನಕ್ಕೆ ಬಂದಿರುತ್ತದೆ. ಮೂರೂ ಬಜೆಟ್‌ಗಳು ಯಥಾಪ್ರಕಾರ ಸಕಾಲಕ್ಕೆ ಮಂಡಿಸಲಾಗಿವೆ. (ಕರ್ನಾಟಕದ್ದು ಹಂಗಾಮಿ ಬಜೆಟ್ ಅಷ್ಟೆ). ಆದರೆ ಅವೆಲ್ಲಾ ಬೊಗಳೆ ಬಜೆಟ್‌ಗಳು. ಆ ಕಾರಣಕ್ಕಾಗಿಯೇ ಅವುಗಳ ವಿಶ್ಲೇಷಣೆ ಅಪ್ರಸ್ತುತವಾಗಿದೆ. ಮೂರು ಬಜೆಟ್‌ಗಳೂ ಬರಲಿರುವ ಪಾರ್ಲಿಮೆಂಟ್ ಚುನಾವಣೆಯ ಹಿನ್ನೆಲೆಯಲ್ಲಿ ಬಂದಿವೆ. ಅಷ್ಟು ಹೇಳಿದರೆ ಸಾಕು, ಅವುಗಳ ಅವಲಕ್ಷಣ ತಿಳಿದುಬಿಡುತ್ತದೆ. ಚುನಾವಣೆಯ ನಂತರ ಬರುವ ಬಜೆಟ್ ಭಾರವಾಗಿರುತ್ತದೆಂಬುದರಲ್ಲಿ ಸಂಶಯವಿಲ್ಲ. ಅಮೆರಿಕಾದ ಹಣಕಾಸು ಪರಿಸ್ಥಿತಿಯಿಂದಾಗಿ ನಮ್ಮ ದೇಶದ ರಫ್ತುಗಳು ಹೊಡೆತಕ್ಕೆ ಸಿಗುತ್ತವೆಂಬುದನ್ನು ಮರೆಯಬಾರದು. ಏನೂ ಆಘಾತವಾಗಿಲ್ಲವೆಂದು ನಟಿಸುತ್ತಿರುವ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷ ಚುನಾವಣೆಯ ನಂತರ ಬೇರೆ ರಾಗ ಹಾಡುತ್ತವೆ.

* * *

---

*ಸಂಪಾದಕೀಯ (೫ನೇ ಪುಟದಿಂದ)*

ಇತ್ತೀಚಿನ ಮಂಗಳೂರಿನ ಪಬ್ ಪ್ರಕರಣ ಅನಾಗರಿಕ ಸಮಾಜದ ಪ್ರತಿಫಲನವಾಗಿ ಕಾಣಿಸುತ್ತದೆ. ಮಾನವ ಹಕ್ಕುಗಳನ್ನು, ವ್ಯಕ್ತಿ ಸ್ವಾತಂತ್ರ್ಯವನ್ನು ಗೌರವಿಸುವವರಿಗೆ, ಇದೊಂದು ಆಘಾತಕಾರಿ ಘಟನೆ; ಸಂವಿಧಾನದತ್ತವಾದ ಆಯ್ಕೆಯ ಸ್ವಾತಂತ್ರ್ಯವನ್ನು ನಿಯಂತ್ರಿಸುವ ಶ್ರೀರಾಮ ಸೇನೆಯವರ ಈ ಅವತಾರ ಖಂಡಿತ ಹೊಸ ಘಟನೆಯಲ್ಲ. ಇದನ್ನು ಈಗಾಗಲೇ ಹತ್ತು ಹಲವು ಸಂದರ್ಭಗಳಲ್ಲಿ ನೋಡಿಯಾಗಿದೆ. ಆದರೂ ಪಬ್ ಪ್ರಕರಣದ ಭೀಕರತೆ ನಾಡಿನ ಎಲ್ಲಾ ಪ್ರಜ್ಞಾವಂತರ ನಿದ್ದೆಗೆಡಿಸಿದೆಯೆಂದರೆ ತಪ್ಪಾಗದು. ಅದು ಎತ್ತುವ ಗಂಭೀರ ಪ್ರಶ್ನೆಗಳು ಕೇವಲ ಚರ್ಚೆ ಮಾಡಿ ಬಿಡುವಂತಹುದಲ್ಲ. ಪಿಂಕ್ ಚಡ್ಡಿ, ಸೀರೆಯ ಹೆಸರಿನಲ್ಲಿ ಲೇವಡಿಗೆ ಒಳಗಾಗುವಂತಹುದೂ ಅಲ್ಲ. ಆದರೆ ಸಾಮಾಜಿಕ, ಸಾಂವಿಧಾನಿಕ ಹೋರಾಟವನ್ನು ಅಪೇಕ್ಷಿಸುವಂತಹುದು.

ಇಲ್ಲಿ ಇರುವುದು ಎರಡೇ ಪ್ರಶ್ನೆ. ಒಂದು, ಹೆಣ್ಣಿನ ಆಯ್ಕೆಯ ಸ್ವಾತಂತ್ರ್ಯ; ಮತ್ತೊಂದು 'ಸಂಸ್ಕೃತಿ'ಯೆಂದರೆ ಯಾರ ಸಂಸ್ಕೃತಿ ? ಮಹಿಳೆಯರು ಪಬ್‌ಗಳಲ್ಲಿ ಕೆಲಸ ಮಾಡುವುದನ್ನು ನ್ಯಾಯಾಲಯ ಒಪ್ಪಿದೆ. ಅಷ್ಟೇ ಅಲ್ಲ, ಪಬ್‌ಗಳು ಕೂಡ ಸರ್ಕಾರದ ಅನುಮತಿಯಿಂದಲೇ ನಡೆಯುತ್ತಿವೆ. ಹೀಗಿರುವಾಗ ಪಬ್‌ಗಳು ಬೇಕು, ಆದರೆ ಮಹಿಳೆಯರು ಪಬ್‌ಗಳಿಗೆ ಹೋಗುವುದು ಬೇಡ ಅನ್ನುವ ಮನು ಸಂತತಿಯ ಲಿಂಗರಾಜಕೀಯ ಇಲ್ಲಿ ಏಕೆ ? ಹಾಗೆಂದ ಮಾತ್ರಕ್ಕೆ ಪಬ್ ಸಂಸ್ಕೃತಿಯ ಸಮರ್ಥನೆಯ ವಾದ ಇದಲ್ಲ. ಆ ಚರ್ಚೆ ಇಲ್ಲಿ ಅಪ್ರಸ್ತುತ. ಜಾಗತೀಕರಣದ ಎಲ್ಲ ಭೌತಿಕ ಲಾಭಗಳನ್ನು ದೋಚಿಕೊಳ್ಳುತ್ತಾ, 'ಭಾರತೀಯ ಸಂಸ್ಕೃತಿಯ ರಕ್ಷಣೆ'ಯ ನೆಪವೊಡ್ಡಿ ಹೆಂಗಸರ ಬದುಕಿಗೆ ಲಕ್ಷ್ಮಣ ಗೆರೆಗಳನ್ನು ಎಳೆಯುತ್ತಿರುವ ಮನುವಾದಿಗಳಿಗೆ ಇಡೀ ಮಹಿಳಾ ಸಮುದಾಯ ಬುದ್ಧಿ ಕಲಿಸಬೇಕಿದೆ. ಹೆಣ್ಣಾಗಿ ಹುಟ್ಟುವ, ಹೆಣ್ಣನ್ನು ಹುಟ್ಟಿಸುವ ಆಯ್ಕೆಯಿಂದ ಹಿಡಿದು ಬದುಕಿನ ಎಲ್ಲ ಆಯ್ಕೆಯ ಸ್ವಾತಂತ್ರ್ಯವನ್ನು ಕಸಿಯುವ ಗಂಡಿನ ಹುನ್ನಾರಕ್ಕೆ ಹೆಣ್ಣು ಈಡಾಗದಿರಲು ಮತ್ತು ನ್ಯಾಯಾಲಯ, ಪೊಲೀಸರು ಮಾಡಬೇಕಾದ ಕೆಲಸವನ್ನು ತಾವೇ ಕೈಗೆತ್ತಿಕೊಳ್ಳುವ ಗೂಂಡಾಗಳ ವಿರುದ್ಧ ಹೋರಾಡುವ ಸಂಕಲ್ಪ ಶಕ್ತಿಯನ್ನು ಇಡೀ ಸಮಾಜ ಇಂದು ತೋರಿಸಬೇಕಾಗಿದೆ.

'ಒಂದು ದೇಶದ ಪ್ರಗತಿಯನ್ನು ಅಳೆಯುವ ಮಾನದಂಡ ಎಂದರೆ, ಆ ದೇಶ ತನ್ನ ಹೆಣ್ಣು ಮಕ್ಕಳನ್ನು ಹೇಗೆ ನಡೆಸಿಕೊಳ್ಳುತ್ತಿದೆ ಎಂದು' ಎಂದ ಸ್ವಾಮಿ ವಿವೇಕಾನಂದರ ಹೆಸರನ್ನು ಸದಾ ಜಪಿಸುತ್ತಿರುವ ಈ ಸೇನಾನಿಗಳ ಬೆಂಬಲಿಗರು ಇಂತಹ ಕೃತ್ಯಗಳಿಂದ ನಮ್ಮ ದೇಶವನ್ನು ಎತ್ತ ಒಯ್ಯುತ್ತಿದ್ದೇವೆಂಬುದರ ಬಗ್ಗೆ ಅರಿತಿರಬೇಕು. ಸುಮಾರು ನಲವತ್ತು ಜನ ಗೂಂಡಾಗಳು ಶ್ರೀರಾಮನ ಹೆಸರಿನಲ್ಲಿ ಐದು ಜನ ಮಹಿಳೆಯರ ಮೇಲೆ ಎರಗಿ ಬಿದ್ದು ಎಳೆದಾಡುವುದು ಯಾವ ಸಂಸ್ಕೃತಿ? ಸೆಕ್ಯುಲರ್ ಭಾರತದಲ್ಲಿ ಹಿಂದೂ-ಮುಸ್ಲಿಂ ಹುಡುಗ-ಹುಡುಗಿಯರು ಒಟ್ಟಿಗೆ ಓಡಾಡುವಂತಿಲ್ಲ, ಮದುವೆಯಾಗುವಂತಿಲ್ಲ ಎಂದು ಲಕ್ಷ್ಮಣ ರೇಖೆ ಎಳೆಯುವುದು ಯಾವ ಸಂಸ್ಕೃತಿ ? ಪ್ರೇಮಿಗಳ ದಿನಾಚರಣೆಯೆಂದು ಅಣ್ಣ ತಂಗಿ ಒಟ್ಟಿಗೆ ಓಡಾಡುವುದಕ್ಕೂ ಅಡ್ಡಿಪಡಿಸುವುದು ಯಾವ ಸಂಸ್ಕೃತಿ ? ಇದು ಆರಂಭವಷ್ಟೇ? ರಾಮ ಸೇನೆಯ ಪುಂಡಾಟ ಹೀಗೇ ನಡೆದರೆ ನಾವೆಲ್ಲಾ ಮತ್ತೆ ತ್ರೇತಾಯುಗಕ್ಕೆ ಹಿಂತಿರುಗಬೇಕಾಗುತ್ತದೆ. ಹಾದಿ ಬೀದಿಯವರ ಮಾತಿಗೆ ಹೆದರಿ ಹೆಂಡತಿಯರನ್ನು ಕಾಡಿಗೆ ಗಡಿಪಾರು ಮಾಡಬೇಕಾಗುತ್ತದೆ. ಪಾತಿವ್ರತ್ಯವನ್ನು ಸಾಬೀತುಮಾಡುವ ಅಗ್ನಿಪರೀಕ್ಷೆಗಳು ಹೆಚ್ಚಾಗುತ್ತವೆ. ಜೋಕೆ !

## ಅಂತರರಾಷ್ಟ್ರೀಯ ಮಹಿಳಾ ದಿನ – ಮಾರ್ಚ್ ೮



ಚಿತ್ರಕೃಪೆ : ಮುತ್ತು ಹಾಳಕೇರಿ

ಅಂತರ ರಾಷ್ಟ್ರೀಯ ಮಹಿಳಾದಿನದ ಸಂದರ್ಭದಲ್ಲಿ 'ಹೊಸತು' ಸಮಸ್ತ ಮಹಿಳಾ ಬಾಂಧವರಿಗೆ, ಲೇಖಕಿಯರಿಗೆ ಹಾರ್ದಿಕ ಶುಭಾಶಯಗಳನ್ನು ಕೋರುತ್ತದೆ.




**ಜನವರಿ ವಿಶೇಷ ಸಂಚಿಕೆ - ೨೦೦೯**

ತಮ್ಮ ಹೊಸವರ್ಷದ ಶುಭಾಶಯಗಳೊಂದಿಗೆ 'ಹೊಸತು' ಕೈಸೇರಿತು. ವಿಶೇಷ ಸಂಚಿಕೆ ಎಲ್ಲ ರೀತಿಯಲ್ಲೂ ಸೊಗಸಾಗಿದೆ. ಸಂಪಾದಕೀಯದಿಂದ ಹಿಡಿದು ಪ್ರಕಟವಾಗಿರುವ ಲೇಖನಗಳು ಮೌಲಿಕವೂ ವಿಚಾರಪ್ರಚೋದಕವೂ ಆಗಿವೆ.

ಶ್ರೀಮತಿ ಗಂಗೂಬಾಯಿ ಹಾನಗಲ್‌ರ ಸಂದರ್ಶನದಲ್ಲಿ ಈಗಾಗಲೇ ದೊರಕಿರುವ ಮಾಹಿತಿಗಳ ಜೊತೆಗೆ ಮತ್ತಷ್ಟು ಮಹತ್ತ್ವಪೂರ್ಣ ವಿಚಾರಗಳು ತಿಳಿಯುತ್ತವೆ. ಶಿಕ್ಷಣದ ಬಗ್ಗೆ ರವೀಂದ್ರರ ವಿಚಾರಗಳು ನಿಜಕ್ಕೂ ಪ್ರಸ್ತುತವಾಗಿವೆ. ನೊಬೆಲ್ ಪುರಸ್ಕೃತ ಸೋಯಿಂಕಾ ಕುರಿತಾದ ಲೇಖನ, ಶ್ರೀ ಎ. ಎನ್. ಪ್ರಸಾದ್‌ರ ಸ್ಪಷ್ಟ ಹಾಗೂ ನೇರ ಅಭಿಪ್ರಾಯಗಳು, ವಿಜ್ಞಾನ-ವಿಜ್ಞಾನಿಗಳ ಪಾತ್ರದ ಬಗ್ಗೆ ಡಾ|| ಎಚ್. ಆರ್. ಕೃಷ್ಣಮೂರ್ತಿಯವರ ಹೇಳಿಕೆಗಳು, ಮೆಕ್ಸಿಂ ಗಾರ್ಕಿಯ 'ತಾಯಿ' ಬಗ್ಗೆಯ ಲೇಖನ - ಶ್ರೀ ಜಿ. ರಾಜಶೇಖರ ಅವರ 'ಮತ ಮತ್ತು ಮತಾಂತರ', ಶ್ರೀ ಕೋ. ಚೆನ್ನಬಸಪ್ಪನವರ 'ನ್ಯಾಯಾಂಗದಲ್ಲಿ ಭ್ರಷ್ಟಾಚಾರ'... ಇತ್ಯಾದಿ ಲೇಖನಗಳು ತುಂಬ ಮೆಚ್ಚುಗೆಯಾಯಿತು. ಜೊತೆಗೆ ಇಲ್ಲಿರುವ ಕಥೆಗಳು, ಲಘು ಲೇಖನಗಳು ಖುಷಿಯ ಬರಹಗಳಾಗಿವೆ... ನನ್ನನ್ನು ವಿಚಾರಕ್ಕೆ ಹಚ್ಚಿದ ಮತ್ತೊಂದು ಲೇಖನ ಶ್ರೀ ಎನ್. ವಿದ್ಯಾಶಂಕರ್ ಸಿನಿಮಾ ಬಗ್ಗೆ ಚರ್ಚಿಸಿರುವ ಲೇಖನ!

'ಹೊಸತು' ವಿಶೇಷ ಸಂಚಿಕೆ ಆಗೀಗ ಓದಲು ಜತನವಾಗಿ ಇಟ್ಟುಕೊಂಡಿರಬೇಕಾದ ಸಂಚಿಕೆ.

ಬೆಂಗಳೂರು **ಎಚ್. ಜಿ. ಸೋಮಶೇಖರ ರಾವ್**

ಈ ಬಾರಿಯ ವಿಶೇಷ ಸಂಚಿಕೆ ನಿಜಕ್ಕೂ ಸಂಗ್ರಹ ಯೋಗ್ಯವಾಗಿದೆ. ಪತ್ರಿಕೆಯ ವಿಶೇಷ ಆಕರ್ಷಣೆಯೆಂದರೆ, ಸಂದರ್ಶನಗಳು. ಶ್ರೀ ವಿಜಯ ವಾಮನ ಅವರು ಗಂಗೂಬಾಯಿಯವರೊಂದಿಗಿನ ಮಾತುಕತೆಗೆ ತಮ್ಮ ನೆಚ್ಚಿನ ತಿಳಿ ಹಾಸ್ಯವನ್ನು ಲೇಪಿಸಿದರೆ, ಡಾ|| ಗಾಯತ್ರಿಯವರು ರಂಗನಾಯಕಮ್ಮನವರನ್ನು ಅಕೆಡೆಮಿಕ್ ಗಾಂಭೀರ್ಯದಲ್ಲಿ ಪ್ರಶ್ನಿಸಿ, ಕುತೂಹಲಕಾರೀ ಉತ್ತರಗಳನ್ನು ಪಡೆದಿದ್ದಾರೆ. ಲೇಖನಗಳು ಉತ್ತಮ ಗುಣಮಟ್ಟದ್ದಾಗಿವೆ; ಬಹಳ ದಿನಗಳ ನಂತರ ಎಚ್. ಕೆ. ಆರ್. ಮೇಷ್ಟ್ರು ಬರೆದುಬಿಟ್ಟಿದ್ದಾರೆ! ಒಳ್ಳೆಯ ಪರಿಚಯ ಲೇಖನವದು. ಕುಂ. ವಿ. ಹಾಗೂ ಸಬಿಹಾ ಅವರ ಕಥೆಗಳು ಇಷ್ಟವಾದವು. ಅಂದ ಹಾಗೆ, ಈ ಬಾರಿ ಪುಸ್ತಕಕ್ಕೆ ಬಿಳಿಯ ಹಾಳೆಗಳನ್ನು ಉಪಯೋಗಿಸಿದ್ದು ಮತ್ತು ಫೋಟೋಗಳ ಗುಣಮಟ್ಟ ಸುಧಾರಿಸಿದ್ದು ತೃಪ್ತಿದಾಯಕ ಬೆಳವಣಿಗೆ. ಸುಂದರ ನಿನ್ನೆಗಳನ್ನು ಬುಟ್ಟಿಯಲ್ಲಿಟ್ಟುಕೊಂಡು ನೆಮ್ಮದಿಯ ನಾಳೆಗಳಿಗಾಗಿ ಕಾಯುತ್ತಿರುವವರ ಮುಖಪುಟ ತುಂಬಾ ಚೆನ್ನಾಗಿದೆ. ಸೂರಿಯವರಿಗೆ ಕೃತಜ್ಞತೆಗಳು. ಈ ಬಾರಿಯ ಹೊಸತು 'ಸಾಕಷ್ಟು ಹಳೆಯದಾಗುವಷ್ಟು ಕಾಲ' ಹೊಸತಾಗಿಯೇ ಇರುತ್ತದೆಯಷ್ಟೆ!

*ತೀರ್ಥಹಳ್ಳಿ* ***ಅಲಕ ತೀರ್ಥಹಳ್ಳಿ***

ಈ ಬಾರಿಯ ವಿಶೇಷ ಸಂಚಿಕೆಯೂ ಹಿಂದಿನ ಸಂಚಿಕೆಗಳಂತೆ ಉತ್ತಮವಾಗಿ ಹೊರಬಂದಿದೆ. ಲೇಔಟ್ ಆಕರ್ಷಕವಾಗಿಲ್ಲ ಎಂಬುದು ಯಾರೋ ಒಂದಿಬ್ಬರ ಅಭಿಪ್ರಾಯವಾಗಿರಬಹುದು; ನನಗೇನೋ ಹಾಗೆನಿಸುವುದಿಲ್ಲ. ಸಾಹಿತ್ಯ, ಸಂಸ್ಕೃತಿ, ವಿಮರ್ಶೆ, ವಿಭಿನ್ನ ಪ್ರದೇಶಗಳಲ್ಲಿ ಆಗಬೇಕಾದ ಸುಧಾರಣೆಗಳ ತಳಹದಿಯ ಮೇಲೆ ತಜ್ಞ ಲೇಖಕರ ಲೇಖನಗಳಿಂದ ಕೂಡಿದ ಇಂತಹ ಮಾಸಿಕ ಪತ್ರಿಕೆ ಇನ್ನೊಂದಿಲ್ಲ. ತಾವು ಅನೇಕ ಕ್ರಿಯಾಶೀಲ ಲೇಖಕರೊಡನೆ ವ್ಯಾಪಕ ಸಂಬಂಧವನ್ನಿಟ್ಟುಕೊಂಡಿದ್ದೀರಿ. ಶ್ರಮದಾಯಕವಾದ ಈ ಕೆಲಸವನ್ನು ಉತ್ಸಾಹದಿಂದ ಮುಂದುವರಿಸಿಕೊಂಡು ಬಂದಿದ್ದೀರಿ. ಇದು ಹಾಗೆಯೇ ಮುಂದುವರಿಯಲಿ.

ದಾವಣಗೆರೆ **ಬಿ. ವಿ. ವೀರಭದ್ರಪ್ಪ**




**ಹೊಸತು ನಿತ್ಯ ನೂತನ**

ನಮ್ಮ ನಂಬಿಕೆಯನ್ನು ಹುಸಿಮಾಡದೇ ಈ ಬಾರಿಯ ವಿಶೇಷಾಂಕವೂ ಸರ್ವಾಂಗ ಸುಂದರವಾಗಿ ಮೂಡಿಬಂದಿದೆ.

ಮುಖಪುಟವೇ ಅತ್ಯಂತ ಆಕರ್ಷಕವಾಗಿ ಮೂಡಿಬಂದಿದೆ. ರಾ. ಸೂರಿ ಅಭಿನಂದನಾರ್ಹರು. ಒಳಗಿನ ಹೂರಣವೂ ಅಷ್ಟೇ! ಜಾಹೀರಾತನ್ನು ಉಪೇಕ್ಷಿಸುವಂತಿಲ್ಲ, ಎಷ್ಟೊಂದು ಮಂದಿ ಪ್ರಕಾಶಕರು ಹಾಗೂ ಪುಸ್ತಕಾಲಯಗಳು! ಕೋ. ಚೆನ್ನಬಸಪ್ಪನವರ ಲೇಖನ 'ನ್ಯಾಯಾಂಗದಲ್ಲಿ ಭ್ರಷ್ಟಾಚಾರ' ನ್ಯಾಯಾಂಗದ ಕೆಲವು (ಅತೀ ಕಡಿಮೆ ಸಂಖ್ಯೆಯ ಅಧಿಕಾರಿಗಳು) ನ್ಯಾಯಾಧೀಶರ ಮನ ತಟ್ಟುವ ಕೆಲಸ ಮಾಡಬಹುದು! ಸಂಚಿಕೆಯ ಎಲ್ಲ ಕಲಾವಿದರೂ ಅಭಿನಂದನೀಯರು.

ಮೈಸೂರು *ನರಸಿಂಹಮೂರ್ತಿ*

ಹೊಸವರ್ಷದ ಶುಭಾಶಯಗಳೊಂದಿಗೆ ಹೃದಯ ನಾಟುವ ದೃಷ್ಟಿಯನ್ನು ಹೊತ್ತ ರಾ. ಸೂರಿಯವರ ವರ್ಣ ರಚನೆಯ ಮುಖಪುಟ ನೂರಾರು ಭಾವಗಳನ್ನು ಹೊಮ್ಮಿಸುವಂತಿದೆ.

ಸಂಪಾದಕೀಯವೇ ಒಟ್ಟು ಸಂಚಿಕೆಯ ಆಶಯಗಳನ್ನು ಧ್ವನಿಪೂರ್ಣವಾಗಿ ಪ್ರಸ್ತಾಪಿಸಿರುವುದರಲ್ಲಿ ಕಿಂಚಿತ್ ಹೆಚ್ಚುಗಾರಿಕೆ ಇಲ್ಲ. ಇಡೀ ಸಂಚಿಕೆ ವರ್ಷಪೂರ್ತಿ ಮೆಲುಕು ಹಾಕಬಲ್ಲ ಚಿಂತನ ಮಂಥನಗೈಯಬಲ್ಲಂತಹ ವಸ್ತು ವೈವಿಧ್ಯಗಳನ್ನೊಳಗೊಂಡಿದೆ. ಸಂಪಾದನೆ ಅತ್ಯಂತ ಕರಾರುವಾಕ್ಕಾಗಿ ಮೂಡಿಬಂದಿದೆ. ಅಭಿನಂದನೆಗಳು; ಧನ್ಯವಾದಗಳು.

*ಚಿತ್ರದುರ್ಗ* ***ಚನ್ನಬಸವ ಪುತ್ತೂರ್ಕರ***

೨೦೦೯ರ ಜನವರಿ ವಿಶೇಷ ಸಂಚಿಕೆ ನೋಡಿ ಸಂತೋಷವಾಯಿತು. ''ಭಯೋತ್ಪಾದಕರ ಹಾವಳಿ'' ಕುರಿತ ತಮ್ಮ ವೈಚಾರಿಕ ಅಗ್ರಲೇಖನ ಸುತ್ಯರ್ಹ. ನಮ್ಮ ದೇಶ ರಣರಂಗಕ್ಕೆ ಇಳಿಯಲು ಇನ್ನೂ ಬಹಳಷ್ಟು ಸಿದ್ಧತೆ ಮಾಡಿಕೊಳ್ಳಬೇಕಾಗಿದೆ.ಆದ್ದರಿಂದ ಸಧ್ಯದ ಪರಿಸ್ಥಿತಿಯಲ್ಲಿ ಉಗ್ರರನ್ನು ಹತ್ತಿಕ್ಕುವ ತಯಾರಿಯಲ್ಲೇ ಇರಬೇಕು. ''ಉರುಳಿದ ೨೦೦೮'' - ರಾಷ್ಟ್ರ ಮತ್ತು ರಾಜಕೀಯ ಪರಿಸ್ಥಿತಿಗಳ ಬಗ್ಗೆ ಕೆಲವು ಮತ ಭೇದಗಳಿದ್ದರೂ ಲೇಖನದ ವಿಚಾರಗಳು, ವಿಚಾರ ಮಾಡುವುದಕ್ಕೆ ಆಸ್ಪದ ಕೊಡುತ್ತವೆ.

''ಮತ ಮತ್ತು ಮತಾಂತರ'' ಲೇಖನ ಕೇವಲ ಭೈರಪ್ಪನವರ ವಿಚಾರಗಳಿಗೆ ಮಾತ್ರ ಅವಕಾಶ ಕೊಟ್ಟಂತಿದೆ. ''ಮತಾಂತರಗಳು ಏಕೆ ನಡೆಯುತ್ತವೆ?'' ಎನ್ನುವುದಕ್ಕೆ ಕಾರಣಗಳಿಲ್ಲ. ನಾನೂ ಸುತ್ತಾಡಿ ನೋಡಿದ್ದೇನೆ. ಕೈಸ್ತ ಮತಕ್ಕೆ ಪರಿವರ್ತನೆಗೊಳ್ಳುವುದನ್ನು ನೋಡಿದ್ದೇನೆ.

ಬೆಳಗಾವಿ ***ಪಿ. ವಿಜಯಕುಮಾರ್***

**– ಪು(ಕು)ರ**

ಕಳೆದ (ಫೆಬ್ರವರಿ) ಸಂಚಿಕೆಯ ಸಂಪಾದಕೀಯದ ಬಗೆಗೆ : ಇತ್ತೀಚೆಗೆ ಕಾಮಾಟಿಪುರದ ಮಾತು ಬಹಳ ಕೇಳಿ ಬರುತ್ತಿದೆ. ವೈಯಕ್ತಿಕವಾಗಿ ನನಗೆ ಅದೇನೋ ತಿಳಿಯದು. ('ಬುದ್ಧಿಜೀವಿ'ಯಲ್ಲದ್ದರಿಂದ ?). ನನಗೆ ಗೊತ್ತಿರುವುದು ಶ್ರೀ ರಾಮಕೃಷ್ಣ ಪರಮಹಂಸರ ಕಾಮಾರಪುಕುರ ಮಾತ್ರ! ಈ 'ಪುರ'ಕ್ಕಿಂತ ಆ 'ಪುಕುರ' ಲೇಸು! (''ಎಷ್ಟು ಮತಗಳೋ ಅಷ್ಟು ಪಥಗಳು'' ಎನ್ನಲಿಲ್ಲವೆ, ಪರಮಹಂಸರು ?)

ಮೈಸೂರು ***ಸಿಪಿಕೆ***

**ಫೆಬ್ರವರಿ ೨೦೦೯**

ಫೆಬ್ರವರಿ ಸಂಚಿಕೆಯ ಪು. ೪೫ ಮತ್ತು ಪು. ೫೧ರಲ್ಲಿ ಶ್ರೀ ಕೆ. ಡಿ. ಮುತ್ತೂರ ಮತ್ತು ಶ್ರೀ ನಾ. ದಿವಾಕರ ಅವರ ಹೆಸರುಗಳು ಸರಿಯಾಗಿ ಮುದ್ರಿಸಲಾಗಿಲ್ಲ. ತಾಂತ್ರಿಕ ದೋಷಕ್ಕಾಗಿ ವಿಷಾದಿಸುತ್ತೇವೆ. ಅಲ್ಲದೆ ಪು. ೫೯-೬೧ರಲ್ಲಿ ಪ್ರಕಟವಾಗಿರುವ ಲೇಖನದಲ್ಲಿ ಶಿಂಡ್‌ಲರ್ ಎಂಬುವನ ಹೆಸರು ಉದ್ದಕ್ಕೂ ಶಿಂಡ್‌ಲರ್ಸ್ ಎಂದು ಮುದ್ರಿಸಲಾಗಿದೆ. ಹೆಸರನ್ನು ಸರಿಪಡಿಸಿಕೊಂಡು ಓದಿಕೊಳ್ಳಬೇಕಾಗಿ ವಿನಂತಿ.

**– ಸಂ.**

# 'ಹಳ್ಳ ಬಂತು ಹಳ್ಳ' – ಕೆಲವು ಟಿಪ್ಪಣಿಗಳು

## ಈ ಸಲದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕಾದಂಬರಿ

ಭಾರತೀಯ ಇತಿಹಾಸದಲ್ಲಿ ಸ್ವಾತಂತ್ರ್ಯ ಹೋರಾಟವು ನಮ್ಮ ದೇಶದ ಚರಿತ್ರೆಯಲ್ಲಿ ಒಂದು ಅತ್ಯಂತ ಮೌಲಿಕವಾದ ಘಟನೆ. ಈ ಸಂಗ್ರಾಮವು ಅನೇಕ ಸೃಜನಶೀಲ ಮನಸ್ಸುಗಳಿಗೆ ಪ್ರೇರಣೆ ನೀಡಿದ್ದರ ಫಲವಾಗಿ ಹಲವು ಕತೆ, ಕಾದಂಬರಿ, ಕವಿತೆ, ನಾಟಕ ರಚನೆಯಾಗಿವೆ; ಅನೇಕ ಸಿನೆಮಾಗಳೂ ರೂಪು ಗೊಂಡಿವೆ. ಅರವತ್ತು ವರ್ಷಗಳ ನಂತರವೂ ಇದೇ ಸ್ವಾತಂತ್ರ್ಯ ಸಮರವು ಶ್ರೀನಿವಾಸ ವೈದ್ಯರ ಲೇಖನಿಗೆ ಚೈತನ್ಯ ತುಂಬಿ ಈ ಕಾದಂಬರಿಯನ್ನು ಬರೆಸಿದ್ದು ಅಚ್ಚರಿ ಮೂಡಿಸುವಂಥ ಸಂಗತಿಯಾಗಿದೆ.

ನಮ್ಮ ದೇಶದ ಚರಿತ್ರೆಯಲ್ಲಿ ಸ್ವಾತಂತ್ರ್ಯ ಹೋರಾಟದ ಕತೆಯ ನೋವು ತಳಮಳ, ಸ್ಫೂರ್ತಿ, ಪ್ರೇರಣೆಗಳು ಕೇವಲ ಉತ್ತರ ಭಾರತದಲ್ಲಷ್ಟೇ ಸೀಮಿತವಾಗಿರದೆ ಭಾರತದ ಮೂಲೆ ಮೂಲೆಗೆ ಸ್ವಾತಂತ್ರ್ಯಾಂದೋಲನಗಳು ನಡೆದವು. ನವಲ ಗುಂದದಂಥ ಒಂದು ಪುಟ್ಟ ಗ್ರಾಮದಲ್ಲಾಗಲಿ, ಧಾರವಾಡದಂಥ ಪುಟ್ಟ ನಗರ ಪ್ರದೇಶದಲ್ಲಾಗಲಿ ಈ ಹೋರಾಟವು ಗಂಭೀರ




ಜಾಗೃತ ಪರಿಸರ ಮತ್ತು ಇಲ್ಲಿಯ ಜನಜೀವನದ ಪರಿಸರ ಮತ್ತು ಸಂಸ್ಕೃತಿ. ಸ್ವಾತಂತ್ರ್ಯ ಹೋರಾಟದ ಹುಚ್ಚಿನಲ್ಲಿ ತನ್ನ ವಿದ್ಯೆ, ಮನೆ ಸಂಬಂಧಗಳನ್ನು ತೊರೆದು ದೇಶಪ್ರೇಮ ಮೆರೆದು ಸಾರ್ವಜನಿಕರ ಗೌರವಕ್ಕೆ ಪಾತ್ರನಾಗಿ ಕೊನೆಗೆ ಹುತಾತ್ಮನಾದ ರಾಮೂನ ಗೌರವಯುತ ಬದುಕಿನ ವಿವರಗಳ ವಿರುದ್ಧ ದಿಕ್ಕಿನಲ್ಲಿ ನಡೆದ ಕೇಶವನು ಆಯ್ಕೆ ಮಾಡಿಕೊಂಡ ಜೀವನ. ಶಾಲೆ ಕಲಿತು ಒಳ್ಳೆಯ ರೀತಿಯಿಂದ ಪರೀಕ್ಷೆಗಳನ್ನು ಪಾಸಾಗಿ ಬಿ.ಎ., ಎಲ್‌ಎಲ್.ಬಿ. ಕಲಿತು ಯಶಸ್ವೀ ವಕೀಲನಾಗಿ ತನ್ನ ದೊಡ್ಡಪ್ಪ ಹಾಗೂ ತನ್ನ ಕುಟುಂಬದ ಎಲ್ಲ ಸದಸ್ಯರಿಗೆ ಕಾಲಕಾಲಕ್ಕೆ ಸಹಾಯ ನೀಡುತ್ತ ಅವರಿಂದ ವ್ಹಾ ವ್ಹಾ ಎನ್ನಿಸಿಕೊಂಡು ವೈಯಕ್ತಿಕ ಬದುಕಿನಲ್ಲಿ ಪಡೆದ ಯಶಸ್ಸು. ಪರಕೀಯರಾಗಿದ್ದ ನಾರಾಯಣ ಮತ್ತು ರುಕುಮಾನಂಥ ಪಾತ್ರಗಳು ವಾಸುದೇವ ರಾಯರ ಕುಟುಂಬದಲ್ಲಿ ಬೆರೆತು, ಅತ್ಯಂತ ಆತ್ಮೀಯ ಸದಸ್ಯರಾಗಿದ್ದರೆ; ವಾಸುದೇವಾಚಾರ್ಯರ ಮಗ ಬೋಧ ತನ್ನ ಸ್ವೈರ ಜೀವನದಿಂದ ಮನೆತನಕ್ಕೆ

*ಶ್ರೀ ಶ್ರೀನಿವಾಸ ವೈದ್ಯರ ಕಾದಂಬರಿ 'ಹಳ್ಳ ಬಂತು ಹಳ್ಳ'ಕ್ಕೆ ಈ ಸಲದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ; ಅವರಿಗೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ.*

ಸ್ವರೂಪವನ್ನು ಕಂಡಿದೆ... ಈ ಜನಾಂದೋಲನವು ಸಣ್ಣದೇನಲ್ಲ ಎಂದು ಶ್ರೀ ವೈದ್ಯರಿಗೆ ಹೇಳಬೇಕಾಗಿದೆ. ಸ್ವಾತಂತ್ರ್ಯ ಸಮರದ ಈ ಐತಿಹಾಸಿಕ ಹಿನ್ನೆಲೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಒಂದು ಮಧ್ಯದ ವರ್ಗದಲ್ಲಿಯ ದೇಶಸ್ಥ ಬ್ರಾಹ್ಮಣ ಪರಿವಾರದ ಮೂರು ತಲೆಮಾರಿನ ವೃತ್ತಾಂತವಿದೆ. ಈ ಒಂದು ಸಮುದಾಯದ ಜನರ ಸಾಂಪ್ರದಾಯಿಕತೆ, ಜೀವನಪದ್ಧತಿ, ರೀತಿನೀತಿ, ಒಟ್ಟಾರೆ ಈ ಭಾಗದ ಒಂದು ವಿಶಿಷ್ಟ ಸಂಸ್ಕೃತಿಯನ್ನು ಸಂರಕ್ಷಿಸಿ ದಾಖಲು ಮಾಡಬೇಕಾದದ್ದರ ಅವಶ್ಯಕತೆಯೂ ಸಹ ಈ ಕಾದಂಬರಿಯ ಇನ್ನೊಂದು ಉದ್ದೇಶವಾಗಿರ ಬಹುದು ಎಂದು ತರ್ಕಿಸಿದರೆ ತಪ್ಪಾಗಲಾರದು.

೧೮೫೭ರ ಪ್ರಥಮ ಸ್ವಾತಂತ್ರ್ಯ ಸಮರದಿಂದ ೧೯೪೭ರ ವರೆಗಿನ ಸುಮಾರು ಒಂದು ನೂರು ವರ್ಷಗಳ ಕಾಲಾವಧಿಯಲ್ಲಿ ಒಂದು ಮನೆತನದ ಮೂರು ತಲೆಮಾರಿನ ಕತೆಯನ್ನು ಬರೆಯುವ ಮೂಲಕ ಒಂದು ವಿಸ್ತೃತವಾದ ಕಥಾ ಹಂದರವನ್ನು ರಚಿಸಿ ಇಡೀ ಕಥಾನಕದ ವಿವರಗಳನ್ನು ಲೇಖಕರು ಅಲ್ಲಲ್ಲಿ ತುಂಬುತ್ತ ಹೋಗಿದ್ದಾರೆ. ಈ ನೂರು ವರ್ಷದ ಅವಧಿಯಲ್ಲಿ ಬದಲಾವಣೆಗಳು ಹೇಗೆ ನಡೆದಿವೆ ಎಂದು ವೈದ್ಯರು ಅತ್ಯಂತ ಕಾಳಜಿಪೂರ್ವಕವಾಗಿ ನಿರೂಪಿಸುತ್ತ ನಡೆದಿದ್ದಾರೆ.

ಈ ಕಾದಂಬರಿಯಲ್ಲಿ ಎರಡು ಮುಖ್ಯ ಕಥಾ ವಾಹಿನಿಗಳಿವೆ. ಉತ್ತರ ಭಾರತದ ಕಾಶಿ ಕಾನಪೂರ ಪ್ರದೇಶದಿಂದ ಬಂದ ಕಮಲನಾಭನ ಬದುಕಿನ ಕತೆ, ವಾಸುದೇವಾಚಾರ್ಯರ ಬದುಕಿನ ಕತೆ, ಕೇಶವ, ಬೋಧ, ನಾರಾಯಣ ಮೊದಲಾದವರ ಕತೆಗಳ ಪ್ರವಾಹದ ಹರವು ಒಂದೆಡೆಯಾದರೆ ಇದರ ಸಮಾನಾಂತರದಲ್ಲಿ ಹರಿದ ಇನ್ನೊಂದು ಮುಖ್ಯ ವಾಹಿನಿಯಲ್ಲಿ ರಾಮೂ ಮತ್ತು ಅವನ ಗೆಳೆಯರು ನಡೆಸಿದ ಸ್ವಾತಂತ್ರ್ಯ ಸಮರದ ಆಂದೋಲನದ ಕತೆ ಇದೆ. ಆದರೆ ವಾಸುದೇವಾಚಾರ್ಯರ ಏಕತ್ರ ಕುಟುಂಬದಲ್ಲಿಯ ಮೂರು ತಲೆಮಾರಿನ ಕತೆಯ ಪ್ರವಾಹದ ಓಘವೇ ಓದುಗರ ಕುತೂಹಲವನ್ನು ಕೆರಳಿಸುವುದರಿಂದ ಸ್ವಾತಂತ್ರ್ಯಾಂದೋಲನದ ಕತೆ ತುಸು ಮಸುಕಾಗಿ ಹಿನ್ನಲೆಯಲ್ಲಿ ಉಳಿದುಕೊಂಡಿದೆ.

ಈ ಕಾದಂಬರಿಯ ಇನ್ನೊಂದು ಆಕರ್ಷಣೆ ಯಂದರೆ ಇದರಲ್ಲಿ ಢಾಳಾಗಿ ಕಣ್ಣಿಗೆ ಬೀಳುವ ಕೆಲವು ವೈರುಧ್ಯಗಳು. ಈ ವೈರುಧ್ಯಗಳಿಂದುಂಟಾಗುವ ದ್ವಂದ್ವ ಗಳು ಪರಿವರ್ತನೆಯತ್ತ ಕೊನೆಗೆ ಹೊರಳುವುದನ್ನು ಗಮನಿಸಬಹುದು. ನವಲಗುಂದ ಮತ್ತು ಅದರ ಸುತ್ತಮುತ್ತಲಿನ ಗ್ರಾಮೀಣ ಪರಿಸರದ ಜನಜೀವನದ ವಿರುದ್ಧದಿಕ್ಕಿನಲ್ಲಿದ್ದಂತೆ ತೋರುವ ಧಾರವಾಡದ

**ಪ್ರೊ|| ಮಾಲತಿ ಪಟ್ಟಣಶೆಟ್ಟಿ**

ಕಳಂಕ ತಂದು ಸಮಸ್ಯೆಯಾಗಿ, ತಂದೆ ತಾಯಿಗಳಿಗೆ ನೋವು ಅಪಮಾನ ತರುತ್ತಾನೆ. ಇಂಥ ಕೆಲವು ದ್ವಂದ್ವಗಳು ಮತ್ತು ವೈರುಧ್ಯಗಳು ಒಂದರಲ್ಲೊಂದು ತಳಕು ಹಾಕಿಕೊಂಡದ್ದರಿಂದ ಬದುಕಿನ ನೈಜತೆಯ ಹಲವು ಮುಖಗಳ ದರ್ಶನವಾಗುತ್ತದೆ.

ಈ ಕಾದಂಬರಿಯ ಇನ್ನೊಂದು ಮುಖ್ಯ ಆಕರ್ಷಣೆಯೆಂದರೆ ವಾಸುದೇವಾಚಾರ್ಯರ ವಿಶಾಲ ಏಕತ್ರ ಕುಟುಂಬದ ಮೂರು ತಲೆಮಾರುಗಳ ಬದುಕಿನ ಚಿತ್ರಣ. ವಾಸುದೇವಾಚಾರ್ಯರು ಈ ಕಥಾ ವಿಭಾಗದ ನಾಯಕರಾಗಿದ್ದಾರೆ. ಇವರು ಮತ್ತು ಇವರ ಪತ್ನಿ ತುಳಸಕ್ಕ ಇಡೀ ಮನೆತನಕ್ಕೆ ಯಜಮಾನರಾಗಿ ಎಲ್ಲ ಸಂಬಂಧಗಳನ್ನು ಹಲವು ಸಂಕಷ್ಟ ಪರಿಸ್ಥಿತಿಗಳಲ್ಲೂ ಮೇಲೆತ್ತುತ್ತ ಎಲ್ಲರನ್ನು ತಮ್ಮ ತೆಕ್ಕೆಯಲ್ಲಿ ತೆಗೆದುಕೊಂಡ ಅನುಕರಣೀಯ ಗಟ್ಟಿ ಪಾತ್ರಗಳು. ಕುಟುಂಬದ ಮೂಲಾಧಾರವೇ ಇವರಿಬ್ಬರ ಸೇವೆ, ಔದಾರ್ಯ, ಸಹನೆಗಳು. ಎಷ್ಟೇ ಸಂಪ್ರದಾಯಸ್ಥರಾದರೂ ಆಧುನಿಕ ಬದುಕಿನೊಂದಿಗೆ ಹೊಂದಾಣಿಕೆ ಮಾಡಿಕೊಂಡ ವಿಶಾಲ ಹೃದಯಿಗಳಾದ ಈ ಪಾತ್ರಗಳು ಓದುಗರ ಗಮನವನ್ನು ಸೆಳೆಯುತ್ತವೆ.

ಈ ಕಾದಂಬರಿಯನ್ನು ಓದುವಾಗ ಬಸವರಾಜ ಕಟ್ಟೀಮನಿಯವರ 'ಮಾಡಿ ಮಡಿದವರು' ಕಾದಂಬರಿಯ ನೆನಪಾಗುತ್ತದೆ. ೧೯೫೦ರಲ್ಲಿ ಪ್ರಕಟವಾದ ಈ

ಪುಸ್ತಕದಲ್ಲಿಯೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದ ತರುಣ ಶೇಖರ ಮತ್ತು ಹೇಮಾರಂಥ ಪಾತ್ರಗಳು ಇಡೀ ಕಾದಂಬರಿಯಲ್ಲಿ ಎತ್ತರೆತ್ತರಕ್ಕೆ ಬೆಳೆದು ನಿಲ್ಲುತ್ತವೆ. ಎಲ್ಲ ಉಪಕತೆಗಳು ಇವರಿಬ್ಬರತ್ತ ಹರಿದ ಉಪನದಿಗಳಂತಿವೆ. ಕಟ್ಟೀಮನಿಯವರು ೧೯೫೦ರ ಸಮಯದ ಆ ಒಂದು ಆದರ್ಶಪೂರ್ಣ ದೃಷ್ಟಿಕೋನದಿಂದ ಸೃಷ್ಟಿಸಿದ ಈ ಎರಡು ಪಾತ್ರಗಳು ಅಂದಿನ ತರುಣ ಜನಾಂಗಕ್ಕೆ ದೇಶಪ್ರೇಮದ ಆದರ್ಶಗಳನ್ನು ಈ ಪಾತ್ರಗಳ ಮೂಲಕ ಮುಂದಿಟ್ಟಿದ್ದಾರೆ. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ'ವು ಪರಿಸರ ಪ್ರಧಾನ ಕಾದಂಬರಿಯಾದರೆ ಕಟ್ಟೀಮನಿಯವರ 'ಮಾಡಿ ಮಡಿದವರು' ಕಾದಂಬರಿ ಪಾತ್ರ ಪ್ರಧಾನವಾಗಿ ನನಗೆ ತೋರಿದ್ದಿದೆ.

ಈ ಕಾದಂಬರಿಯ ನೇಯ್ಗೆಯಲ್ಲಿ ಹಲವು ಪಾತ್ರಗಳು, ಹಲವು ಧೋರಣೆಗಳು, ಹಲವು ಸ್ಥಿತಿಗತಿಗಳು ಬಿಡುಗಡೆ ಹೊಂದಿ ಗಮನಾರ್ಹ ತಿರುವುಗಳನ್ನು ಪಡೆಯುತ್ತವೆ. ಗುಲಾಮಗಿರಿಯಿಂದ ಬಿಡುಗಡೆ ಹೊಂದಿ ರಾಜಕೀಯ, ಸಾಮಾಜಿಕ ಸ್ವಾತಂತ್ರ್ಯವನ್ನು ಭಾರತವೂ ಪಡೆದುಕೊಳ್ಳುತ್ತದೆ. ಕಟ್ಟಾ ಸಾಂಪ್ರದಾಯಿಕತೆಯನ್ನು ಕಾಪಾಡಿಕೊಂಡಿರುವ ಕೆಲವು ಪಾತ್ರಗಳೂ ಆಧುನಿಕ ವಿಚಾರ, ಬದುಕಿನ ಹೊಸ ನೀತಿಗಳನ್ನು ಒಪ್ಪಿ ಪರಿವರ್ತನೆಯನ್ನು ಸ್ವಾಗತಿಸುತ್ತವೆ. ರಾಮೂನಂಥ ವಿಶಿಷ್ಟ ಪಾತ್ರವು ಬದುಕಿನ ಸಾಂಪ್ರದಾಯಿಕ, ಸಾಮಾನ್ಯ ಜೀವನ ಪದ್ಧತಿಗಳಿಂದ ಬಿಡುಗಡೆ ಪಡೆದು ಶಾಲೆಗೆ ಶರಣು ಹೊಡೆದು ದೇಶಭಕ್ತಿಯ ಬದುಕನ್ನು ಆಯ್ದುಕೊಳ್ಳುತ್ತದೆ. ಈ ಕುಟುಂಬದಲ್ಲಿ ಪರಕೀಯರಾಗಿ ಬಂದ ನಾರಾಯಣ ರುಕುಮಾನಂಥ ಪಾತ್ರಗಳು ಹಂಗಿನ ಬದುಕಿನಿಂದ ಬಿಡುಗಡೆ ಹೊಂದಿ ಸ್ವತಂತ್ರ ಬದುಕನ್ನು ಆಯ್ದುಕೊಳ್ಳುತ್ತವೆ. ಕೇಶವ, ಧೀರ ಮೊದಲಾದ ಪಾತ್ರಗಳು ನವಲಗುಂದದ ಗ್ರಾಮೀಣ ವಾತಾವರಣದಿಂದ ಬಿಡುಗಡೆ ಹೊಂದಿ ಧಾರವಾಡದ ಮತ್ತು ಮುಂಬಯಿಗಳ ನಗರ ಜೀವನವನ್ನು ಆಯ್ದುಕೊಳ್ಳುತ್ತಾರೆ. ಹೀಗೆ ಹಲವು ಬಿಡುಗಡೆಗಳ ಹಾಸುಹೊಕ್ಕನ್ನು ಈ ಕಾದಂಬರಿಯು ತನ್ನ ನೇಯ್ಗೆಯಲ್ಲಿ ಸೇರಿಸಿಕೊಂಡು ಹಲವಾರು ಪರಿವರ್ತನೆಗಳ ಕತೆಯನ್ನು ಹೇಳುತ್ತದೆ.

ಈ ಕಾದಂಬರಿಯ ಕಸುವಿರುವುದು ಲೇಖಕರ ಪ್ರತಿಭಾಪೂರ್ಣ ಲೇಖನಿಯು ರೂಪಿಸಿದ ಗ್ರಾಮೀಣ ಜನಜೀವನದ ಚಿತ್ರಣದಲ್ಲಿ, ಒಂದು ಮನೆತನದಲ್ಲಿದ್ದ ಹಲವಾರು ಪಾತ್ರಗಳ ವೈವಿಧ್ಯಮಯ ಚಿತ್ರಣದಲ್ಲಿ ಮತ್ತು ೧೯ನೇ ಶತಮಾನದ ಉತ್ತರ ಕರ್ನಾಟಕದ ಈ ಭಾಗಗಳಲ್ಲಿಯ ಮಧ್ಯಮ ವರ್ಗದ ದೇಶಸ್ಥ ಬ್ರಾಹ್ಮಣ ಸಮಾಜದ ಒಂದು ಅವಿಭಕ್ತ ಕುಟುಂಬದ ಜೀವನ ಪದ್ಧತಿಗಳ ಸಂಸ್ಕೃತಿಯನ್ನು ಅದರ ಎಲ್ಲ ಸೂಕ್ಷ್ಮತೆಗಳೊಂದಿಗೆ ಚಿತ್ರಿಸಿದ್ದರಲ್ಲಿ ಇದೆ. ಎಲ್ಲಕ್ಕಿಂತ ಮಿಗಿಲಾಗಿ ಲೇಖಕರು ಬಳಸಿಕೊಂಡ ಧಾರವಾಡದ ನೆಲದ ಭಾಷೆಯ ಸೊಗಡು ತನ್ನ ನೈಜತೆಯಿಂದಾಗಿ ಬಹಳ ಪ್ರಭಾವಶಾಲಿ ಪ್ರಯೋಗವಾಗಿ ಕತೆಗೆ ಹೆಚ್ಚಿನ ಬಲವನ್ನು ತಂದುಕೊಟ್ಟಿದೆ.

'ಹಳ್ಳ ಬಂತು ಹಳ್ಳ' ಶೀರ್ಷಿಕೆಯು ತನ್ನ ಮಡಿಲಲ್ಲಿ 'ಸ್ವಾತಂತ್ರ್ಯ ಬಂತು ಸ್ವಾತಂತ್ರ್ಯ' ಅಥವಾ 'ಪರಿವರ್ತನೆ ಬಂತು ಪರಿವರ್ತನೆ' ಎಂಬ ಮೂಲ ಧೋರಣೆಯನ್ನು ಪರೋಕ್ಷವಾಗಿ ತುಂಬಿಟ್ಟುಕೊಂಡಿದ್ದನ್ನು ಓದುಗರು ಗಮನಿಸಬಹುದು.

ಈ ಕಾದಂಬರಿಯನ್ನು ಓದಿದಾಗ ಶ್ರೀನಿವಾಸ ವೈದ್ಯರು ಇಡೀ ಕಾದಂಬರಿಯ ಹರವಿನಲ್ಲಿ ಅತ್ಯಂತ ಕೌಶಲಪೂರ್ಣವಾಗಿ ಚಿತ್ರಿಸಿದ ಏಕತ್ರ ಕುಟುಂಬಸಂಸ್ಕೃತಿಯು ಆಧುನಿಕ ಯುಗದಲ್ಲಿ ಮರೆಯಾಗುತ್ತಿದ್ದು ಅದು ಇಂದಿನ ಜೀವನದಲ್ಲಿ ತಿರುಗಿ ಬರಬೇಕು ಎಂಬ ಆಶಯವನ್ನು ಲೇಖಕರು ಎಲ್ಲೋ ತಮ್ಮ ಮನಸ್ಸಿನ ಮೂಲೆಯಲ್ಲಿಟ್ಟುಕೊಂಡು ಬರೆದಂತೆ ಅವರ ಆತ್ಮೀಯ ವರ್ಣನೆಗಳಲ್ಲಿ ನಾವು ಕಾಣಬಹುದಾಗಿದೆ. ಒಂದು ಕುಟುಂಬವನ್ನು ಬಿಗಿದಿಟ್ಟುಕೊಳ್ಳುವ ಭಾವನಾತ್ಮಕ ಸಂಬಂಧಗಳು ಇಂದು ಚದುರಿಹೋಗುವುದನ್ನು ಲೇಖಕರು ತೇವುಗಣ್ಣಿನಿಂದ ನೋಡಿದಂತೆ ತೋರುತ್ತದೆ. ಇಡೀ ಕಥಾನಕದಲ್ಲಿ ಪರಿವರ್ತನೆಯನ್ನು ಪ್ರತಿಪಾದಿಸುತ್ತ ಹೊಸ ಬದುಕಿನ ಹೊಸ ದಿಕ್ಕನ್ನು ಸ್ವಾಗತಿಸಿದರೂ ವಾಸುದೇವಾಚಾರ್ಯರು ತಮ್ಮ ನವಲಗುಂದದ ಪರಿಸರಕ್ಕೆ ಪದೇ ಪದೇ ಹಿಂದಿರುಗಲು ಹಂಬಲಿಸುವಂತೆ ಶ್ರೀನಿವಾಸ ವೈದ್ಯರೂ ಧಾರವಾಡದ ಪರಿಸರಕ್ಕೆ ಹಿಂದಿರುಗುವ ಹಂಬಲಗಳನ್ನು ಪರೋಕ್ಷವಾಗಿ ವ್ಯಕ್ತಪಡಿಸಿದ್ದನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ.

ಪ್ರೊ॥ ಮಾಲತಿ ಪಟ್ಟಣಶೆಟ್ಟಿ
೩, ಗಣೇಶ ಅಪಾರ್ಟ್‌ಮೆಂಟ್ಸ್, ರಜತಗಿರಿ, ಧಾರವಾಡ -೫೮೦ ೦೦೪



# ಕವಿತೆ ಹುಟ್ಟಲಿಲ್ಲ

ವೈವಾಹಿಕ ಜೀವನದ
ವರ್ಷಗಳು ಸುಖದಲ್ಲಿ ಸರಿದರೂ
ಗರ್ಭವೊಂದು ಕಟ್ಟದೇ ಪ್ರೀತಿಯ
ಫಲಕ್ಕೆ ಹಾತೊರೆವ ತಾಯಿಯಂತೆ
ನಾನು,
ನರಳಿದ್ದೇನೆ.
ಕವಿತೆಯೊಂದೂ ಜನಿಸದ
ನನ್ನ ಬರಡು ಮನಸ ಸ್ಥಿತಿಯ ಬಗ್ಗೆ
ಹೆದರಿ ಕಂಗಾಲಾಗಿದ್ದೇನೆ,
ವಂಶದ ಕೊನರುವ ಚಿಗುರು ಇರದಿದ್ದರೆ ಹೇಗೆಂಬ
ಚಿಂತೆ ಭ್ರಾಂತಿಯಂತೆ ಕಾಡುತ್ತದೆ,
ಕವಿತೆಗಳು ಹುಟ್ಟದಿದ್ದರೆ ಹೇಗೆ ?
ಓದಿದರೂ ಮನ ಅರಳುತ್ತ ನಗುತ್ತಿಲ್ಲವೇಕೆ ?
ಎಂಬ ದುಗುಡ ನಿತ್ಯ ಹೆದರಿಸುತ್ತಿದೆ
ರಾತ್ರಿ, ಅಪರಾತ್ರಿಗಳಲ್ಲಿ ಬೇತಾಳದಂತೆ
ಖಾಲಿ ಹಾಳೆ, ಪೆನ್ನು, ಮಳೆ, ನೋವುಗಳು
ಪದಕಟ್ಟ, ಹನಿಗಳೂ ಕನೆಯಾಗಿ,
ಪ್ರಾಸ ಹಿಡಿದು ಕಾವ್ಯವಾಗಿ
ನೆಮ್ಮದಿಯ ನಿಟ್ಟುಸಿರ ಸರಿಸುತ್ತಿದ್ದವು,
ಮಗು ಹಡೆದ ಸುಖ ತೃಪ್ತಿ ಈಗಿಲ್ಲ!
ಭಯವಾಗಿದೆ, ಈ ರೀತಿಯ ಶೂನ್ಯಕ್ಕೆಲ್ಲ! !

ಇಂದ್ರಕುಮಾರ್ ಎಚ್. ಬಿ.
ಸಹ ಶಿಕ್ಷಕ
ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ
ಕೊಡಗನೂರು - ೫೭೭ ೫೩೪
ದಾವಣಗೆರೆ ಜಿಲ್ಲೆ

**ಯ**ಕ್ಷಗಾನ ಎಂಬ ಪದ ಕೇಳಿದ ತಕ್ಷಣ ಎಲ್ಲರ ಮನದಲ್ಲೂ ಕೆರೆಮನೆ ಶಂಭು ಹೆಗಡೆಯವರ ಮುಖ ಒಂದು ಕ್ಷಣ ಹಾದುಹೋಗುತ್ತದೆ. ಆ ಹಂತಕ್ಕೆ ಆ ವ್ಯಕ್ತಿ ಏರಿದ್ದು ಸರಳ ಹಾದಿಯೇನಲ್ಲ. ಅವರ ಪೂರ್ವಜರಿಂದ ಬಳುವಳಿಯಾಗಿ ಬಂದ ಯಕ್ಷಗಾನವನ್ನು ಮುಂದುವರೆಸಿದ್ದೂ ಅಲ್ಲದೆ ಜೀವನವನ್ನೆಲ್ಲಾ ಅದರ ಯಶಸ್ಸಿಗೆ ಮುಡಿಪಾಗಿಟ್ಟರು. ಈ ಹಿನ್ನೆಲೆಯಲ್ಲಿ ಒಂದು ಕಡೆ ಅವರೇ ಹೇಳಿದ್ದೇನೆಂದರೆ ''ನಾನು ನನ್ನ ಅನ್ನದ ತುತ್ತನ್ನು, ಹೆಂಡತಿ ಮಕ್ಕಳ ಅನ್ನವನ್ನು ಕಸಿದು ಯಕ್ಷಗಾನಕ್ಕೆ ಬಳಸಿದ್ದೇನೆ. ನನ್ನ ಆದರ್ಶಗಳನ್ನು ಇನ್ನೊಬ್ಬರ ದುಡ್ಡಿನಲ್ಲಿ ಸಾಧಿಸಿಕೊಂಡವನಲ್ಲ. ಬೇರೆ ಮಾಧ್ಯಮಗಳಿಗಿಂತ ಯಕ್ಷಗಾನಕ್ಕೆ ಇಂದು ಯಕ್ಷಗಾನದಿಂದಲೇ ಅಪಾಯ ಬಂದಿದೆ.'' ಈ ಮಾತು ಅವರು ಯಕ್ಷಗಾನಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡ ರೀತಿಯನ್ನು ತಿಳಿಸುತ್ತದೆ.

ಕರ್ನಾಟಕದಲ್ಲಿ ವೈವಿಧ್ಯಮಯ ಜನಪದ ಸಂಸ್ಕೃತಿಗಳ ಸಂಗಮವಿದೆ. ಕನ್ನಡ ನಾಡಿನಲ್ಲಿ ದೊಡ್ಡಾಟ, ಸಣ್ಣಾಟ, ಮೂಡಲಪಾಯ, ಬಯಲಾಟ, ಯಕ್ಷಗಾನ, ಕೃಷ್ಣಪಾರಿಜಾತ, ಸಂಗ್ಯಾಬಾಳ್ಯ ಹೀಗೆ ಅನೇಕ ವಿಧಗಳನ್ನು ಕಾಣಬಹುದು. ಅದರಲ್ಲೂ ಕರಾವಳಿಯ ಕರ್ನಾಟಕದ ವಿಶಿಷ್ಟ ಕಲೆ ಯಕ್ಷಗಾನವನ್ನು ಹೆಚ್ಚು ಪ್ರಚಾರಕ್ಕೆ ತಂದದ್ದಲ್ಲದೆ ದೇಶ ವಿದೇಶಗಳಲ್ಲಿ ಅದಕ್ಕೊಂದು ಸ್ಥಾನ ಕಲ್ಪಿಸಿದವರು ಕಡಲತೀರದ ಭಾರ್ಗವ ಶಿವರಾಮ ಕಾರಂತರು. ಅವರ ಕಾಳಜಿಯನ್ನೆಲ್ಲ ಮೈಗೂಡಿಸಿಕೊಂಡು, ಕಾರ್ಯರೂಪಕ್ಕೆ ಇಳಿಸಿ, ಸಾಧ್ಯವಾದಷ್ಟು ಹೆಚ್ಚು ಜನರಿಗೆ ಆ ಕಲೆಯ ರುಚಿಯನ್ನು ಹೆಚ್ಚಿಸಿದ್ದಲ್ಲದೆ, ತಂಡವೊಂದನ್ನೂ ಕಟ್ಟಿ ಯಕ್ಷಗಾನಕ್ಕೆ ಒಂದು ಘನತೆ, ಗೌರವ ತಂದವರೆಂದರೆ ಕೆರೆಮನೆ ಶಂಭು ಹೆಗಡೆ.

ಇವರ ತಂದೆ ಯಕ್ಷಗಾನ ಕಲಾವಿದನಾಗಿ ಕರ್ನಾಟಕಕ್ಕೆ ನಾಟಕ ಅಕಾಡೆಮಿಯ ರಾಷ್ಟ್ರಮಟ್ಟದ ಮೊದಲನೆಯ ಪ್ರಶಸ್ತಿ ತಂದ ಅಭಿಜಾತ ಕಲಾವಿದರಾದ ಶಿವರಾಮ ಹೆಗಡೆ, ತಾಯಿ ಮೂಕಾಂಬಮ್ಮನವರ ಪುತ್ರ (೧೯೩೮). ನಟವರ ಮಹಾಬಲ ಹೆಗಡೆಯವರ ಸೋದರರೂ ಹೌದು. ಹಾಗಾಗಿ ವಂಶಪಾರಂಪರ್ಯವಾಗಿ ಬಂದ ಕಲೆ, ಗುರು ಪರಂಪರೆ, ಅವಕಾಶಗಳನ್ನು ಪಡೆದು ಸದುಪಯೋಗಪಡಿಸುತ್ತಾ ಹುಟ್ಟು ಪ್ರತಿಭೆಯಾಗಿ ಬೆಳೆದರು. ಇವರ ತಂದೆಯೇ ಶಂಭುರವರನ್ನು ಒಬ್ಬ ಪರಿಪೂರ್ಣ ಕಲಾವಿದನಾಗುವಂತೆ ತರಬೇತಿ ನೀಡಿ ಬೆಳೆಸಿದರು.

# ತೆರೆಮರೆಗೆ ಸರಿದ ಕೆರೆಮನೆ ಶಂಭು ಹೆಗಡೆ



ತಾರುಣ್ಯದಲ್ಲೇ ತಾನೊಬ್ಬ ಉತ್ತಮ ಕಲಾವಿದ ಎಂಬುದನ್ನು ಸಾಬೀತುಪಡಿಸಿದ ಇವರು ತಮ್ಮ ಗುರು ಮಾಯಾರಾವ್‌ರವರಿಂದ ಕೋರಿಯೋಗ್ರಫಿ ಶಿಕ್ಷಣ ಪಡೆದರು. ರಂಗ ನಿರ್ದೇಶಕರಾಗಿ ಯಶಪಡೆಯುವಲ್ಲಿ ಈ ಶಿಕ್ಷಣ ಅವರಿಗೆ ಸಾಕಷ್ಟು ಬಲ ನೀಡಿತು. ಇದರ ಜೊತೆಗೆ ದೇಶದ ವಿವಿಧ ರಂಗಪ್ರಕಾರಗಳನ್ನು ಹಾಗೂ ಸಂಸ್ಕೃತಿಯನ್ನು ಅಧ್ಯಯನ ಮಾಡಿ, ಅಲ್ಲಿನ ಉತ್ಕೃಷ್ಟ ಅಂಶಗಳನ್ನು ಯಕ್ಷಗಾನದಲ್ಲಿ ಅಳವಡಿಸಿಕೊಂಡರು. ಅಂತಹ ಜ್ಞಾನವನ್ನು ಯಕ್ಷಗಾನಕ್ಕೆ ಸಮರ್ಥವಾಗಿ ಬಳಸಿದ್ದರಿಂದಲೇ ಯಕ್ಷಗಾನ ಮತ್ತೆ ಜನಾಕರ್ಷಣೆ ಪಡೆಯಲು ಪ್ರಾರಂಭಿಸಿತು. ತಾವೇ ವೇಷಧಾರಿಯಾಗಿ, ಅನೇಕಬಾರಿ ಮೇಳದ ಸಂಘಟಕರಾಗಿ, ಸದಾ ಕಲೆಯ ಬಗ್ಗೆ ಚಿಂತಿಸುತ್ತಾ, ಅದರ ವಿಸ್ತರಣೆಗೆ ಗುರುವಾಗಿ ಮಿಂಚಿದವರು.

ತಮ್ಮ ಪೂರ್ವಜರಿಂದಲೇ ಪಡೆದ ಕಲಾ ಶಿಕ್ಷಣ, ಆಧುನಿಕ ವಿದ್ಯೆ, ರಂಗ ವಿಜ್ಞಾನದ ಉನ್ನತ ಶಿಕ್ಷಣಗಳನ್ನು ಪಡೆಯುತ್ತಾ ತಮ್ಮ ಸಾಧನೆಯಿಂದ ಹಾಗೂ ಪ್ರಯೋಗಶೀಲತೆಯಿಂದಾಗಿ ಮಾದರಿ ಸಾಧಕರೆನಿಸಿದರು. ಕಲೆ, ಪ್ರತಿಭೆ, ಸದಭಿರುಚಿ, ಚಿಂತನಶೀಲತೆ, ಸಂವಹನ ಕೌಶಲ, ಸತತ ಪರಿಶ್ರಮಗಳ ಸರದಾರ ಶಂಭು ಹೆಗಡೆಯವರು. ೧೯೭೪ರಲ್ಲಿ ತಂದೆ ಸ್ಥಾಪಿಸಿದ್ದ ಇಡಗುಂಜಿ ಮೇಳಕ್ಕೆ ಪುನರ್ಜನ್ಮ ನೀಡಿದ ಹೆಗ್ಗಳಿಕೆ ಇವರದ್ದೇ. ಅಲ್ಲಿಂದ ತಮ್ಮ ಜೀವಿತದ ಕಟ್ಟಕಡೆಯ ಕ್ಷಣದವರೆಗೂ ಮತ್ತೆ ಹಿಂದಿರುಗಿ ನೋಡಲೇ ಇಲ್ಲ. ಮೇಳದ ವಿಧಾನ, ಪ್ರದರ್ಶನ, ಕಥೆಗಳು, ಪಾತ್ರ, ಬಣ್ಣ, ರಂಗಸ್ಥಳ, ಬೆಳಕು, ಪ್ರೇಕ್ಷಕರು ಕೂಡುವ ಸ್ಥಳ, ಹೀಗೆ ಎಲ್ಲದರಲ್ಲೂ ಸುಧಾರಣೆಯ ಹಾದಿ ಹಿಡಿದರು. ಅದರ ಜೊತೆಗೆ ತಮ್ಮ ಹೊಸತನವನ್ನು ಸೇರಿಸುವುದನ್ನು ಮರೆಯಲಿಲ್ಲ. ಆರ್ಥಿಕ ಸಂಕಷ್ಟದಲ್ಲೂ ಮೇಳಗಳನ್ನು ಯಶಸ್ವಿಯಾಗಿ ಮುನ್ನಡೆಸಿದ್ದು ಅವರ ಸಂಘಟನಾ ಸಾಮರ್ಥ್ಯಕ್ಕೆ ಸಾಕ್ಷಿ. ಇವರ ಈ ಕಠಿಣ ಶ್ರಮದ ಫಲವಾಗಿ ಪ್ರೇಕ್ಷಕರು ಮತ್ತೆ ಯಕ್ಷಗಾನದ ಕಡೆಗೆ ಮುಖಮಾಡಲು ಸಾಧ್ಯವಾಯಿತು.

## ಪರಮೇಶ್ವರಯ್ಯ ಸೊಪ್ಪಿಮಠ

ಹೆಗಡೆಯವರ ಆಟಗಳು ನೋಡುಗರಲ್ಲಿ ಹುಚ್ಚು ಹಿಡಿಸುತ್ತಿದ್ದವು. ಎಷ್ಟು ವರ್ಷ ಕಳೆದರೂ ಮಾಸದ ಅವರ ಅಭಿನಯದ ಪಾತ್ರಗಳು ಪ್ರೇಕ್ಷಕ ಪ್ರಭುವಿನ ಮನದಲ್ಲಿ ಸದಾ ಜೀವಂತ. ವೇಷಧಾರಿಯಾಗಿ ಅವರು ಸಾಧಿಸಿದ್ದು ಬಾನೆತ್ತರದಷ್ಟು. ಯಾವುದೇ ಪಾತ್ರವಿರಲಿ ಅದಕ್ಕೆ ತಕ್ಷಣ ಹೊಂದಿಕೊಳ್ಳುತ್ತಿದ್ದರು. ನಳ, ಸಾಲ್ವ, ಶ್ರೀರಾಮ, ಹರಿಶ್ಚಂದ್ರ, ರಾವಣ, ಕೀಚಕ, ಕಂಸ, ಹನುಮಂತ, ಕೃಷ್ಣ, ಕರ್ಣ, ದುರ್ಜಯ, ಬಾಹುಕ, ಅಂಬೆ, ಚಂದ್ರಮತಿ ಹೀಗೆ ಮೇರು ಪಾತ್ರಗಳಿಗೆ ಜೀವ ತುಂಬುವುದರಲ್ಲಿ ಅವರಿಗೆ ಅವರೇ ಸಾಟಿ. ಶಂಭು ಹೆಗಡೆಯವರ ಅಭಿನಯದಲ್ಲಿ



*ಚಿತ್ರ ಕೃಪೆ : ಹಿಂದು ದಿನಪತ್ರಿಕೆ*

ಮಾತು, ಚಲನೆ, ನೃತ್ಯಗಳು ರಸಭರಿತವಾಗಿರುತ್ತಿದ್ದವು. ಪೌರಾಣಿಕ ಕಥಾನಕಗಳನ್ನು ಮಾತ್ರ ಅಳವಡಿಸುವ ಸ್ಪಷ್ಟ ನಿರ್ಧಾರದಿಂದ ಕೊನೆವರೆಗೂ ಹಿಂದೆ ಸರಿಯಲಿಲ್ಲ. ಜನರ ಆಕರ್ಷಣೆಗಾಗಿ ಕಲೆಯೊಂದಿಗೆ ಎಂದಿಗೂ ರಾಜಿ ಮಾಡಿಕೊಳ್ಳುವ ಮನೋಭಾವ ತೋರಿಸಲಿಲ್ಲ.

ಯಕ್ಷಗಾನ ಕಲೆಯಲ್ಲಿ ಇವನ್ನು ಅಳವಡಿಸಿಕೊಳ್ಳಲು ಸಾಧ್ಯವಿಲ್ಲ ಎನ್ನುವ ಅನೇಕ ಪ್ರಸಂಗಗಳನ್ನು ಇವರು ಸಾಧ್ಯ ಮಾಡಿ ತೋರಿಸಿದರು. ಇವರ ಕನಸು ಹೆಚ್ಚು ನನಸಾಗುವಂತೆ ಮಾಡಿದ್ದು ಇಡಗುಂಜಿ ಮೇಳ. ಉತ್ತಮ ಅಭಿರುಚಿ ಇಟ್ಟುಕೊಂಡು ಯಕ್ಷಗಾನಕ್ಕೆ ಹೊಸ ಭಾಷ್ಯ ಬರೆಯಲು ಈ ಮೇಳ ಅವರಿಗೆ ಸಾಕಷ್ಟು ನೆರವಾಯಿತು. ಅದರಿಂದಾಗಿ ದೇಶ-ವಿದೇಶಗಳಿಂದ ಪ್ರಶಂಸೆಗಳು ಬಂದಿದ್ದು ಪ್ರಯತ್ನಕ್ಕೆ ಸಂದ ಪ್ರತಿಫಲ. ಇವರ ನೇತೃತ್ವದಲ್ಲೇ ಮೇಳ ಬೆಳ್ಳಿಹಬ್ಬ ಆಚರಿಸಿಕೊಂಡಿದ್ದು ಅವರ ಜೀವನದ ಮಹತ್ತರ ಘಟನೆ. ಪುತ್ರ ಶಿವಾನಂದರಿಗೆ ಆ ಮೇಳವನ್ನು ಮುನ್ನಡೆಸುವ ಜವಾಬ್ದಾರಿಯನ್ನು ಕೆಲ ವರ್ಷಗಳ ಹಿಂದೆಯೇ ನೀಡಿದ್ದು, ಮೇಳ ನಿಲ್ಲಬಾರದು ಎಂಬ ಅವರ ದೂರದರ್ಶಿತ್ವ.

ಸಂಸ್ಕೃತಿ ಬಗ್ಗೆ ಹೋರಾಟ ಮಾಡುವವರು ಶಂಭು

ಹೆಗಡೆಯವರನ್ನು ನೋಡಿ ಕಲಿಯಬೇಕು. ಅವರ ಅರ್ಥಪೂರ್ಣ ಚಿಂತನೆ, ಪಾಂಡಿತ್ಯ, ಕನ್ನಡದಲ್ಲಿ ಅವರಿಗಿದ್ದ ಪ್ರಭುತ್ವ. ಇದಕ್ಕೆ ಎಂಥವರಾದರೂ ತಲೆಬಾಗಲೇಬೇಕು. ವಸ್ತುವಿನ ಆಯ್ಕೆ, ವಿಂಗಡಣೆ, ಬೆಳೆಸುವ ಕ್ರಮ, ಅದಕ್ಕೆ ಅವಶ್ಯವಾದ ಭಾಷೆ, ಭಾವನೆ, ಮಾತು, ನಡುವೆ ಹಾಸ್ಯ ಪ್ರಸಂಗ, ಭಾಷಣಗಳು, ಉಪನ್ಯಾಸದಂತೆ ಅವರ ಕಥಾ ಪ್ರಸಂಗಗಳು ಪ್ರೇಕ್ಷಕರನ್ನು ಹೊಸಲೋಕಕ್ಕೆ ಕೊಂಡೊಯ್ಯುತ್ತಿದ್ದವು. ಕೇವಲ ಮೆಚ್ಚುಗೆಯ ಮಾತುಗಳನ್ನಾಡದೆ ತಮ್ಮ ನಿಲುವನ್ನು ಬಿಡದಿರುವ ಅವರ ಮಾತುಗಾರಿಕೆ ಎಲ್ಲಾ ಭಾಷಣಕಾರರಿಗೂ ಅನುಕರಣೀಯ.

ಪ್ರೇಕ್ಷಕರಿಂದ ತಾನು ಬೆಳೆದವ ಎಂಬ ವಿನೀತ ಭಾವನೆಯನ್ನು ಎಂದೂ ಮರೆಯಲಿಲ್ಲ. ಸರಳ ಸಂಪನ್ನ, ಮಿತಮಿತ ಮಾತು, ಹೊಸ ಕನಸುಗಳ ಹರಿಕಾರನಾಗಿ ಅವರು ಬದುಕಿದ ರೀತಿ ಕಲಾವಿದರಿಗೆಲ್ಲಾ ದಾರಿದೀಪ. ''ಚಟವೆಂದರೆ ಕಲೆ ಮಾತ್ರ'' ಎಂಬ ಅವರ ನುಡಿ ಸದಾ ನೆನಪಿಡುವಂತಹದ್ದು. ತಮ್ಮ ವಿಶಿಷ್ಟ ಕ್ರಿಯಾಶೀಲತೆಯನ್ನು ಬದುಕಿನುದ್ದಕ್ಕೂ ಕಳೆದುಕೊಳ್ಳದೆ, ಅನ್ವೇಷಣೆಗಳನ್ನು ಕೈಗೊಳ್ಳುತ್ತಾ ಕನ್ನಡದ ಹೆಮ್ಮೆಯ ಪುತ್ರರಾದರು. ಉತ್ತುಂಗದ ಶಿಖರವನ್ನೇರಿ, ವಿಶ್ವವ್ಯಾಪಿ ಹೆಸರನ್ನು ಪಡೆದರೂ ಹಳ್ಳಿಗನಾಗಿಯೇ ಬದುಕಿದ ಅವರ ಬದುಕು ಇಂದಿನ ಯುವಕರಿಗೆ ಆದರ್ಶ.

ಇವರಲ್ಲಿ ಜನಪದ ವಿಶ್ವವಿದ್ಯಾಲಯವೇ ವಿಲೀನಗೊಂಡಂತಿತ್ತು. ಹಾಗಾಗಿ ಇವರ ಬಗ್ಗೆ ಎರಡು



...ಸಂಕ್ರಾಂತಿಯಂದು
ಎಳ್ಳು–ಬೆಲ್ಲ ತಿಂದು ಈ ಪಕ್ಷಕ್ಕೆ ಸೇರಿದ್ದೀರಿ.
... ಯುಗಾದಿಗೆ
ಬೇವು–ಬೆಲ್ಲ ತಿಂದು ಯಾವ ಪಕ್ಷ ಸಾರ್ ... ??

ಅಧ್ಯಯನಗಳು ನಡೆದಿವೆ. ಎರಡೂ ಪಿಎಚ್.ಡಿ. ಪಡೆದಿವೆ. ಅಸಂಖ್ಯಾತ ಸೆಮಿನಾರುಗಳು, ಲೇಖನಗಳು ಇವರ ಹೆಸರಿನಲ್ಲಿ ನಡೆದಿವೆ. ೫೦೦ಕ್ಕೂ ಹೆಚ್ಚು ವಿವಿಧ ಬಗೆಯ ಬಿರುದು-ಸನ್ಮಾನಗಳು ಹುಡುಕಿಕೊಂಡು ಬಂದಿವೆ.

ಕನ್ನಡ ಜಾನಪದ ಲೋಕದ ಅದ್ಭುತ ಪ್ರತಿಭೆ ಶಂಭು ಹೆಗಡೆಯವರು ಈಗ ನಮ್ಮನ್ನೆಲ್ಲಾ ಅಗಲಿದ್ದಾರೆ. ಅವರ ಅಗಲಿಕೆಯ ಕ್ಷಣವೂ ಸದಾ ನೆನಪಿನಲ್ಲಿರುವಂತಹದ್ದು. ಯಕ್ಷಗಾನದ ಸೀತಾವಿಯೋಗ (ಲವಕುಶರ ಕಾಳಗ) ಪ್ರದರ್ಶನಗೊಳ್ಳುತ್ತಿತ್ತು. ಕೆರೆಮನೆ ಶಂಭು ಹೆಗಡೆಯವರ ಆರಾಧ್ಯ ದೈವ ಇಡಗುಂಜಿ ಗಣಪತಿ ಸಾನ್ನಿಧ್ಯದಲ್ಲೇ ಈ ಆಟ ನಡೆಯುತ್ತಿತ್ತು. ರಾಮನ ಪಾತ್ರಧಾರಿಯಾಗಿ ಇವರು ಪಾತ್ರದಲ್ಲಿ ತನ್ಮಯರಾಗಿದ್ದರು. ಪ್ರಸಂಗದಲ್ಲಿ ರಾಮನ ಮಕ್ಕಳಾದ ಲವ ಕುಶರ ಜೊತೆಯ ಕೊನೆಯ ದೃಶ್ಯದ ಹಾಡು ''ಎಳಿ ಪೋಗುವ ನಾವು ಮುನಿವನಿದ್ದೆಡೆಗೆ....'' ಅದಕ್ಕೆ ಅಭಿನಯಿಸುವಾಗಲೇ ಎದೆನೋವು ಕಾಣಿಸಿಕೊಂಡಿತು. ಪ್ರತಿಯೊಬ್ಬ ಕಲಾವಿದನೂ ಬಯಸುವಂತೆ ಸಾವಿರಾರು ಅಭಿಮಾನಿಗಳ ಎದುರು ಪ್ರದರ್ಶನ ನೀಡುತ್ತಲೇ ಇಹಲೋಕ ತ್ಯಜಿಸಬೇಕು, ಎಂಬ ಆಶಯದಂತೆ ಶಂಭು ಹೆಗಡೆಯವರು ನರ್ತಿಸುತ್ತಲೇ ರಂಗವಿದಾಯದ ಜೊತೆ ಇಹಲೋಕಕ್ಕೂ ವಿದಾಯ ಹೇಳಿದ್ದು ಅಚ್ಚರಿ. ಹೆಗಡೆಯವರು ತಮ್ಮ ಜೀವನದ ಪರದೆಯಿಂದ ನಿರ್ಗಮಿಸಿರಬಹುದು. ಆದರೆ ಲಕ್ಷಾಂತರ ಅಭಿಮಾನಿಗಳ ಹೃದಯದಲ್ಲಿ ಅವರು ಸದಾ ಅಮರ.

**ಪರಮೇಶ್ವರಯ್ಯ ಸೊಪ್ಪಿಮಠ**
ಶಿಕ್ಷಕರು, ಕೆ.ಪಿ.ಓ.ಆರ್. ಕಾಲೋನಿ, ಹಗರಿಬೊಮ್ಮನಹಳ್ಳಿ
ಬಳ್ಳಾರಿ (ಜಿಲ್ಲೆ)-೫೮೩೨೧೨

# ಗ್ರಹಣಗಳ ಸುತ್ತ ಪರಿಭ್ರಮಣ

ಆರೇಳು ತಿಂಗಳ ಹಿಂದೆ ಅಂದರೆ ಆಗಸ್ಟ್ ೧, ೨೦೦೮ರಂದು ಸೂರ್ಯಗ್ರಹಣ ಸಂಭವಿಸಿತು. ಗ್ರಹಣದ ಹಿಂದಿನ ದಿನ ಒಬ್ಬ ಸ್ನೇಹಿತರ ಮನೆಗೆ ಹೋಗಿದ್ದೆ (ಅವರು ವಿದ್ಯಾವಂತರು, ಪರದೇಶದಲ್ಲಿದ್ದು ಈಗ ನಿವೃತ್ತ ಜೀವನಕ್ಕೆ ಇಲ್ಲಿ ಬಂದು ನೆಲೆಸಿದವರು.) ಆಗ ಅಲ್ಲಿಗೆ ಒಬ್ಬ ಹುಡುಗ ೨ ಹುಲ್ಲುಕಡ್ಡಿ ಹಿಡಿದು ಬಂದು 'ಇಷ್ಟೇ ಇರುವುದಂತೆ' ಎಂದು ಕೊಟ್ಟು ಹೋದ. ಅದು ಏನು ? ಅವರಿಗೆ ಆ ಸಪೂರದ ಹುಲ್ಲುಕಡ್ಡಿ ಯಾವುದಕ್ಕೆ ಬೇಕಾಗಬಹುದು ಎಂದೆಲ್ಲ ನಾನು ತಲೆಕೆಡಿಸಿಕೊಂಡೆ. ಎಷ್ಟು ಚಿಂತಿಸಿದರೂ ಆ ಕಡ್ಡಿ ಏಕಿರಬಹುದು ಎಂದು ಹೊಳೆಯಲೇ ಇಲ್ಲ. ನಿಜವಾಗಿಯೂ ಇಷ್ಟು ಕಷ್ಟಪಡುವ ಅಗತ್ಯವೇ ನನಗೆ ಇರಲಿಲ್ಲ. ಆ ಕಡ್ಡಿ ಏಕೆ ? ಅದರಿಂದ ಏನು ಉಪಯೋಗ ಎಂದು ಅವರನ್ನೇ ನೇರ ಕೇಳಬಹುದಿತ್ತು. ಆದರೆ ಅನವಶ್ಯಕವಾಗಿ ಹೆಚ್ಚು ಮಾತಾಡುವ ಜಾಯಮಾನವೇ ನನ್ನದಲ್ಲ ಎಂದು ಅವರನ್ನು ನಾನು ಏನೂ ಕೇಳಲಿಲ್ಲ.

ಮಾರನೇ ದಿನ ನಮ್ಮ ಬಲಗೈ ಬಂಟಿ ಸಿದ್ದಮ್ಮ, 'ಅವ್ವ, ೨ ದರ್ಬೆ ಹುಲ್ಲು ಕೊಡಿ' ಎಂದು ಕೇಳಿದಳು. ಆಗ ನನ್ನೊಳಗಿದ್ದ ಟ್ಯೂಬ್‌ಲೈಟ್ ಜಗ್ಗನೆ ಝಗಝಗಿಸಿತು. ಯುರೇಕ ಎಂದು ಸಂಭ್ರಮಿಸಬೇಕೆನಿಸಿತು ! ನಿನ್ನೆ ನಾನು ಸ್ನೇಹಿತರ ಮನೆಯಲ್ಲಿ ನೋಡಿದ ೨ ಕಡ್ಡಿ, ದರ್ಬೆಹುಲ್ಲು ಎಂದು ಆಗ ತಿಳಿಯಿತು.

''ನಿನಗೇಕೆ ದರ್ಬೆ ಹುಲ್ಲು? ಹೋಮ ಏನಾದರೂ ಮಾಡಿಸುತ್ತೀಯ ?'' ಎಂದು ಕೇಳಿದೆ.

''ನಾನೇಕೆ ಹೋಮ ಸುಡಲಿ ? ಇಂದು ಗ್ರಾಣ ಅಂತೆ. ಅದಕ್ಕೆ ಹುಲ್ಲುಕಡ್ಡಿ ಬೇಕು'' ಎಂದಳು.

''ಗ್ರಹಣಕ್ಕೂ ಹುಲ್ಲುಕಡ್ಡಿಗೂ ಏನು ಸಂಬಂಧ'' ಎಂದೆ.

''ಗ್ರಾಣದ ದಿನ ಹಾಲು, ಸಾರು ಏನೇ ಇದ್ದರೂ ಎಲ್ಲದಕ್ಕು ದರ್ಬೆ ಕಡ್ಡಿ ಹಾಕಿಟ್ಟರೆ ಅದನ್ನು ನಾವು ಮತ್ತೆ ಉಪಯೋಗಿಸ ಬಹುದಂತೆ. ಇಲ್ಲವಾದರೆ ಆ ಪದಾರ್ಥ ಉಪಯೋಗಿಸುವಂತಿಲ್ಲ. ಅದನ್ನು ಚೆಲ್ಲಿ ಬೇರೆಯೇ ಮಾಡಬೇಕು'' ಎಂದಳು.

ಉಪದೇಶ ಕೊಡಲು ಒಬ್ಬಳು ಸಿಕ್ಕಿದಳಲ್ಲ ಎಂಬ ಸಂತೋಷದಲ್ಲಿ, ''ನೀನೇನು ದರ್ಬೆ ಹಾಕಬೇಡ. ಏನಾಗುವುದಿಲ್ಲ. ದರ್ಬೆ ಹಾಕದೆಯೇ ಅದನ್ನು ಉಪಯೋಗಿಸು. ಮಧ್ಯಾಹ್ನ ಊಟ ಮಾಡು. ನಾವು ದರ್ಬೆ ಏನೂ ಹಾಕಿಲ್ಲ. ಹಾಗೆಯೇ ಅದನ್ನು ಊಟ ಮಾಡುತ್ತೇವೆ. ಹಾಕಲು ಇಲ್ಲಿ ದರ್ಬೆಯೇ ಇಲ್ಲ. ನಿನ್ನನ್ನು ಯಾರಾದರು ದರ್ಬೆ ಹಾಕಿದೀಯ ಎಂದು ಕೇಳಿದರೆ ಹಾಕಿದ್ದೇನೆ ಎನ್ನು. ಧೈರ್ಯವಿದ್ದರೆ ದರ್ಬೆ ಎಲ್ಲ ಹಾಕಲ್ಲ, ಹಾಗೆಯೇ ಉಪಯೋಗಿಸುತ್ತೇನೆ, ಏನಾಗಲ್ಲ ಎಂದು ಹೇಳು'' ಎಂದು ಭಾಷಣ ಕೊಟ್ಟೆ.

ಅವಳು ಆಯಿತವ್ವ ಎಂದು ಒಪ್ಪಿಕೊಂಡು ಹೋದಳು. ಮನೆಗೆ ಹೋದ ಮೇಲೆ ಏನು ಮಾಡುತ್ತಾಳೋ ಎಂಬ ಕುತೂಹಲ ನನಗಿತ್ತು. ಅದಕ್ಕೆ ಮಾರನೇ ದಿನ ಅವಳು ಬಂದ ಕೂಡಲೇ, ''ನಿನ್ನೆ ದರ್ಬೆ ಹಾಕಿದ್ದೆಯಾ ?'' ಎಂದು ಕೇಳಿದೆ.

''ಹಾಕಿಲ್ಲ. ನೀವು ಹೇಳಿದ್ದಿರಲ್ಲ, ಏನಾಗಲ್ಲ ಊಟ ಮಾಡು ಎಂದು. ಅದಕ್ಕೆ ಧೈರ್ಯದಿಂದ ಹಾಂಗೆ ಊಟ ಮಾಡಿದೆ'' ಎಂದಳು. ಸದ್ಯ ನನ್ನ ಭಾಷಣ ಫಲಕೊಟ್ಟಿತಲ್ಲ ಎಂದು ಸಮಾಧಾನವಾಯಿತು. ಇದೇ ವಿದ್ಯಾವಂತ ಮಂದಿಯಾದರೆ ಕೇಳುತ್ತಿದ್ದರೆ ಎನಿಸಿತು.

ಗ್ರಹಣದ ಹಿಂದಿನ ದಿನ ಅಲ್ಲಲ್ಲಿ ದರ್ಬೆ ಮಾರಾಟವೂ ಭರ್ಜರಿಯಾಗಿ ನಡೆಯುತ್ತಿತ್ತು. ನನ್ನ ಇನ್ನೊಬ್ಬ ಸ್ನೇಹಿತೆಯ ಪಕ್ಕದ ಮನೆಯವರಿಗೆ ಬರೀ ೨ ಕಡ್ಡಿ ದರ್ಬೆ ಸಿಕ್ಕಿದ್ದಂತೆ. ಅದನ್ನು ಚಿಕ್ಕ ಚಿಕ್ಕ ತುಂಡು ಮಾಡಿ ಎಲ್ಲದಕ್ಕು ನೀರಿನ ಸಮೇತ ಹಾಕಿ ಧನ್ಯರಾದರಂತೆ. ಶೀತಲ ಯಂತ್ರದೊಳಗೆ ಒಂದು ಕಡ್ಡಿ ದರ್ಬೆ ಇಟ್ಟುಬಿಡಿ. ಮತ್ತೆ ಎಲ್ಲದಕ್ಕೂ ಹಾಕುವ ಪ್ರಮೇಯ ಇಲ್ಲ ಎಂದು ತಮಾಷೆಗೆ ಅವರಿಗೆ ಹೇಳಿದಳಂತೆ. ಅವರದನ್ನು ನಂಬಿ ಹಾಗೆಯೇ ಮಾಡಿದರಂತೆ !

ಗ್ರಹಣದ ದಿನ ಬೀದಿ – ರಸ್ತೆಗಳಲ್ಲಿ ಜನವಾಗಲಿ ವಾಹನ ಸಂಚಾರವಾಗಲಿ ಇಲ್ಲವೇ ಇಲ್ಲ. ಏನೋ ಗರಬಡಿದಂತೆ ಖಾಲಿ ಖಾಲಿ. ಶಾಲಾ ಕಾಲೇಜಿಗೂ ರಜೆ ಕೊಟ್ಟಿದ್ದರು. ಇಂಥ ನಂಬಿಕೆಗೆ ಏನನ್ನಬೇಕು ?

ಎಂಥ ಮೌಢ್ಯವಿದು ನಮ್ಮ ಜನರದು. ಎಲ್ಲ ದೇವಸ್ಥಾನಗಳಲ್ಲಿ ಶಾಂತಿ ಹೋಮ ಹವನದ್ದೇ ಹೊಗೆ. ಆ ನಕ್ಷತ್ರಕ್ಕೆ ಕೆಟ್ಟದು, ಈ ನಕ್ಷತ್ರದವರು ಹೊರಗೆ ಹೋಗುವಂತೆಯೇ ಇಲ್ಲ, ಹಾಗೆ ಹೀಗೆ ಎಂದು ದೇವರಿಗೆ ಎಡತಾಕಿದ್ದೇ ತಾಕಿದ್ದು. ಆ ದಿನ ಕಳೆದುಹೋಯಿತು. ಏನೂ ಅನಾಹುತ ನಡೆಯಲಿಲ್ಲ. ಅದರ ನಂತರ ಚಂದ್ರಗ್ರಹಣ ಬಂತು. ಆಗಲೂ ಅಷ್ಟೆ. ನಿದ್ರೆ ಮಾಡಿದರೆ ಎಲ್ಲಿ ದೋಷ ಬರುತ್ತದೊ ಎಂದು ಜನ ಆ ದಿನ ಇಡೀ ರಾತ್ರಿ ಎಚ್ಚರವಿದ್ದು ಜಾಗರಣೆ ಮಾಡಿ ಕಂಟಕ ತಪ್ಪಿಸಿಕೊಂಡರಂತೆ.

ವಿದ್ಯೆಯಿಂದ ಏನು ಉಪಯೋಗ ಎಂಬ ಪ್ರಶ್ನೆ ನನ್ನ ಕಾಡಿತು. ನಮ್ಮ ಮಾವ ಪ್ರೊ॥ ಜಿ. ಟಿ. ನಾರಾಯಣರಾವ್ ಇದ್ದಿದ್ದರೆ 'ಗ್ರಹಣ ಬರಿ ಕಣ್ಣಲ್ಲಿ ನೋಡಬೇಡಿ. ಗ್ರಹಣದಿಂದ ಏನೂ ದೋಷವಿಲ್ಲ. ವಿಪತ್ತು ಸಂಭವಿಸುವುದಿಲ್ಲ. ಗ್ರಹಣವೆಂದರೆ ನೆರಳು ಬೆಳಕುಗಳ ಹಿಡಿವಾಟದಲ್ಲಿ ವ್ಯಕ್ತಿಗಾಗಲೀ ದೇಶಕ್ಕಾಗಲೀ ಯಾವ ಗಂಡಾಂತರವೂ ಇಲ್ಲ. ನಮ್ಮ ವರ್ತಮಾನ ಭವಿಷ್ಯಗಳನ್ನು ಗ್ರಹಣ ನಿರ್ಧರಿಸುವುದಿಲ್ಲ. ಸೂರ್ಯಗ್ರಹಣ ಅಥವಾ ಚಂದ್ರಗ್ರಹಣ ವ್ಯಕ್ತಿಯ ಬುದ್ಧಿ ಗ್ರಹಣಕ್ಕೆ ಕಾರಣವಾಗಬಾರದು, ಬುದ್ಧಿ ಪ್ರಜ್ವಲನೆಗೆ ಪ್ರೇರಕವಾಗಬೇಕು' ಎಂದು ಲೇಖನ ಬರೆದು ಜನರನ್ನು ಬಡಿದೆಚ್ಚರಿಸು ತ್ತಿದ್ದರು. ಆದರೆ ಈಗ ಅವರಿಲ್ಲ. ಜನರ ಮೌಢ್ಯ ದಿನೇ ದಿನೇ ಹೆಚ್ಚುತ್ತಿದೆ. ಮಾವ ಅಲ್ಲಿಂದಲೇ 'ಲೋ ಮುಟ್ಠಾಳರ, ನೀವು ಯಾವಾಗ ಇಂಥ ಮೌಢ್ಯಕೂಪದಿಂದ ಹೊರ ಬರುತ್ತೀರಿ ? ನನಗಂತು ಬರೆದು ಬರೆದೂ ಸಾಕಾಯಿತು. ಯಾವ ಪ್ರಯೋಜನವೂ ಆಗಲಿಲ್ಲ. ಹಾಗಂತ ಬರೆಯದಿದ್ದರೆ ನನಗೆ ಸಮಾಧಾನವಿರಲಿಲ್ಲ. ಎಲ್ಲಾದರೂ ಒಂದಿಬ್ಬರು ಎಚ್ಚರಗೊಂಡರೂ ಸಾಕು' ಎನ್ನುತ್ತಿರಬಹುದು.

ಗ್ರಹಣಗಳ ಬಗ್ಗೆ ಅತ್ರಿಸೂನು ಉವಾಚ ಹೀಗಿದೆ :

*ಗ್ರಹಣವೆಂಬುದೇನು ? ಗಗನದಲಿ ಸಂಭವಿಪ*
*ಸಹಜಮಾದೊಡೆ ವಿರಳ ಘಟನೆ–ದ್ಯುತಿ ಛಾಯೆ*
*ಸಹಯಾನದಲಿ ಪ್ರಕಟಮಾಗುವಾ ಹಿಡಿವಾಟ*
*ಇಹಪರವ ಚಿಂತಿಸದೆ ನೋಡದನು ಅತ್ರಿಸೂನು*

*ಧರಣಿ ತರಣಿಯ ತಡೆಯೆ ಚಂದ್ರ ಮರೆಯಾಗುವನು*
*ಪೆರರವಿಗೆ ತೆರೆ ಪಿಡಿಯೆ ಹಗಲೊಡೆಯ ಕ್ಷಣಮಾಯ*
*ಮರುಳಾಗದಿರು ಬಾನ ಬಯಲಾಟವಿದನರಿತು*
*ನೆರೆ ಜಾಣಮತಿಯಾಗು ಸುಖಿಯಾಗು ಅತ್ರಿಸೂನು.*

**ರುಕ್ಮಿಣಿಮಾಲಾ**
ಮನೆ ಸಂಖ್ಯೆ ೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತಿಪುರ, ಮೈಸೂರು - ೫೭೦ ೦೦೯

ಸಗಣಿ ಹಾಕಿ ಸಾರಿಸಿದ ನುಣ್ಣಗಿನ ತಂಪು ನೆಲದ ಮ್ಯಾಲ ನೆಲಕ್ಕ ಅಂಟಿಕೊಂಡು ಸುಮ್ಮನೆ ಕೂತಿರಬೇಕೆಂದು ಅವ್ವ ಆಸೆ ಪಟ್ಟರೂ ಮನೆ ಮುಂದಿನ ಬೇವಿನಗಿಡದ ಕೆಳಗಿನ ಮಣ್ಣು ಕಲ್ಲಿನೊಳಗ ಹುಡುಗರು ಆಡುವ ಆಟಕ್ಕ ಹೋಗಿ ಸೇರಿಕೊಂಡೆ, ಆಟದೊಳಗ ಮೈಮರೆತಾಗ; ಒಮ್ಮೆಲೆ ಉದ್ದಾನ ಅಂಗಿ, ಇಳಿಬಿಟ್ಟುಕೊಂಡಿದ್ದರೂ ಕೆಳಗೊಂದು ಚಡ್ಡಿ ಎಂಬೊದು ಬೇಕೆಂದು ಅರಿವಾಗಿ ಮನೆಗೆ ಓಡಿ ಬಂದಿದ್ದೆ.

ಅವ್ವ ಮತ್ತೊಂದು ಬಾಣಂತನಕ್ಕ ಬ್ಯಾನಿಯಿಂದ ಮುಲುಗುಡುತ್ತಿದ್ದಳು. ಅದು ಏನಂತ ಆಗ ತಿಳಿದಿರದಿದ್ದರೂ ಆಕಿಯ ಮೈದಡವುತ್ತ ನಾನಿದ್ದೀನಿ ಎಂಬೊ ಅರಿವು ಮೂಡಿಸಿದ್ದೆ. ''ಅಕಿ ಸಂಗಮ್ಮಾಯಿಗಿ ಕರಿ ಮಗ'' ಎಂದು ನರಳಿದಾಗ ಕೇರಿಯ ಆ ಸಂಗಮ್ಮನೆಂಬೊ ಸೂಲಗಿತ್ತಿಗಿ ಕರೆದು ತಂದೆ. ಅವತ್ತು ತಂಗಿ ಅನ್ನಿಸಿಕೊಳ್ಳುವ ಕೂಸು ಅವ್ವನ ಹೊಟ್ಟೆಯಿಂದ ಕಡೀಗಿ ಬಂದು, ಅವ್ವನ ಹೊಟ್ಟೆಯ ಮ್ಯಾಗ ಗೀರುಗಳು ಮೂಡಿ ಅವ್ವನ ತುಂಬಿದ ಒಡಲು ಸಗಣಿ ಬಾಚಿದ ನೆಲದಂಗ ಗುರುತು ಉಳಿಸಿಕೊಂಡು ಮೊದಲಿಗಿಂತ ಬ್ಯಾರೆ ಅನ್ನುವ ಹಂಗಾಯಿತು.

ನನ್ನ ಬೆನ್ನಿಗೆ ಹುಟ್ಟಿದ ಒಂದು ಕೂಸು ತೀರಿಹೋದ ಭಯದಿಂದ ಭೂಮಿ ಮ್ಯಾಲ ತಿಪ್ಪಿ ಹಂಗ ''ಶಾಸವತ ಆಗಿರು'' ಅಂತ ''ತಿಪ್ಪಿ'' ಅನ್ನೊ ಹೆಸರಿನಿಂದ ಅವ್ವ ತಂಗಿಗಿ ಕರಿಯಲಿಕ್ಕಿ ಸುರುವುಮಾಡಿದಳು. ತಿಪ್ಪಿ ಹುಟ್ಟಿ ಬಂದಾಗಿನಿಂದ ನನಗೇನು ಅಂಥ ಖುಷಿ ಆಗಲಿಲ್ಲ. ದಿನ ಮಾಸ ಕಳೆದ್ಹಂಗ ನಾನು ತಿಪ್ಪಿಗಿ ಕೈಹಿಡಿದು ಜಗ್ಗುವ, ಚಿವುಟುವ; ಮತ್ಸರದ ಗುಣದ ಅಣ್ಣನೆಂದು ತೋರಿಸಿಕೊಟ್ಟೆ. ಇದಕ್ಕೆ ಕಾರಣ : ತಿಪ್ಪಿ ಹುಟ್ಟಿದಾಗಿನಿಂದ ಮನೆಯಲ್ಲಿ ರುಚಿಯಾಗಿ ಉಣ್ಣಲು ತಿನ್ನಲು ಸಿಗದೆ ಬಡುವಾಗಿದ್ದೆ. ಇದನ್ನು ತಿಳಿದು ಅವ್ವ ಅವತ್ತು ತಿಪ್ಪಿಗಿ ನೋಡಿಕೊಂಡಿರಲು ಹೇಳಿ ಹೊರಹೋಗಿದ್ಲು. ಅವ್ವ ಹಿಂದ ಯಾರ ಮುಂದೊ ಅಂದ ಮಾತು ಕೇಳಿಸಿಕೊಂಡದ್ದು ಈಗ ನೆನಪಾಯ್ತು. ''ಭಾಸಿಂಗ ಕಟ್ಟಿಕೊಂಡ ಈ ಮನಿಗಿ ಬಂದಮ್ಯಾಲ ಭಾಸಿಂಗ ಇಳಿಸಿ ಕೊಳುಗಂಬಕ್ಕ ಕಟ್ಟಿದಂದಿನಿಂದ ನಾನು ಬ್ಯಾರೆಯಲ್ಲ ಈ ಕಂಬ ಬ್ಯಾರೆಯಲ್ಲ; ಛತ್ತಿನ ಭಾರ ಕೊಳುಗಂಬದ ಮ್ಯಾಲ ಹೇರುವಂಗ ಇರ ಇರುತ್ತ; ಹಳೆಯ ತಲೆಗಳೆಲ್ಲ ಕಣ್ಮರೆಯಾಗಿ ಮನೆಯ ಭಾರ ಎಲ್ಲ ಇವ ನನ ಮ್ಯಾಲ ಹೊರಸಿ ತಣ್ಣಗ ಕುಂತಬಿಟ್ಟಾನ'' ಹಿಂಗ...

# ಕೊಳುಗಂಬ

■ ಜ್ಯೋತಿ ಬಿ. ಕುಲಕರ್ಣಿ



ತೊಳೆದ ಮುತ್ತಿನಂತೆ ಅಪ್ಪ ಯಾವಾಗಲೂ ಬಿಳಿಯ ಧೋತ್ರ, ಮೇಲೊಂದು ಗಂಜಿ ಹಾಕಿದ ಶರ್ಟ ಹಾಕಿಕೊಂಡು ಶೋಕಿ ಮಾಡುತ್ತಿದ್ದುದ್ದು ಊರಿಗೆ ಗೊತ್ತಿದ್ದ ಮಾತು. ಮನಿಯೊಳಗ ಗಂಜಿಗೆ ಗತಿ ಅದೋ ಇಲ್ಲ ಅನ್ನೊ ಉಸಾಪರಿ ಅವನಿಗೆ ಬೇಕಾಗಿರಲಿಲ್ಲ. ಈಕಿ ಮಾತ್ರ ಹಳೆಯ ನೂಲಿನ ಸೀರೆಯ ಹರಿದ ಸೆರಗಿಗೆ ಗಂಟು ಹಾಕಿ ತಲಿಮ್ಯಾಲ ಹೊಚ್ಚಿಕೊಂಡು, ಮನಿ, ದನ, ಕರ, ಎತ್ತು, ನಾಯಿ ಅಂತ ಹೊತ್ತು ಸಾಲದ ಹಾಂಗ ದುಡಿಯುತಿದ್ಲು. ನಾನು ನನ್ನ ಮಾಯದ ಚಡ್ಡಿ ಸಿಗಿಸಿಕೊಂಡು ಅದರ ಬಕ್ಕಣದ ತುಂಬ ಗೋಲಿಗಳನ್ನು ತುಂಬಿಸಿಕೊಂಡು ಅವುಗಳನ್ನು ''ಒಂದಕ್ಕೆ ನಾಲ್ಕಾಗಿಸುವ'' ಕನಸಿನಲ್ಲಿರುತ್ತಿದ್ದೆ.

ಅವತ್ತ ಅಪ್ಪ ಯಾಕೊ ಮನಿಗೆ ಲಗು ಬಂದಿದ್ದ. ಹಾಂಗ ನೋಡಿದ್ರ ನಿತ್ಯ ಹೊಲಕ್ಕ ಹೋಗತಿರಲಿಲ್ಲ. ಅವತ್ತು ಹೊಲದಿಂದ ಬಂದಿದ್ದಕ್ಕ ಹೊಟ್ಟಿ ಕೆರೆದಿತ್ತು ಕಾಣಸ್ತದ. ಉಣ ಬಡಿಸಲಿಕ್ಕಿ ಅವ್ವ ಮನಿಯೊಳಗ ಇರಲಿಲ್ಲ. ಅವನು ತುದಿಗುಂಡಿಯಿಂದ ಕಟ್ಟಿ ತುದಿಗಿ ಕೂತು ಆಕಿ ಹೊರಗಿನಿಂದ ಬರುವದೆ ಸಿಟ್ಟಿನಿಂದ ಕಾಯುತ್ತಿದ್ದ. ಅವನ ಸಿಟ್ಟು ಬುದ್ಧಿಯನ್ನು ಮೇಯ್ದುಬಿಟ್ಟಿತ್ತು.

ಅವ್ವ ತಲಿಮ್ಯಾಲ ಮೂರು ಮಾನ ಜ್ವಾಳದ ಗಂಟಿಟ್ಟುಕೊಂಡು ಮನಿಯೊಳಗ ಬರಬೇಕೆಂತ ಮೊಣಕಾಲ ಬಗ್ಗಿಸಿ ತಲಬಾಗಿಲು ತಲಿಗಿ ಹತ್ತಧಂಗ ಚೀಲದ ಗಂಟನ್ನು ಕಟ್ಟಿಯ ತುದಿಗೆ ಇಳುಹುವುದೆ ತಡ ''ಎಲ್ಲಿ ಹೋಗಿದ್ದೆ ಹರಿಗ್ಯಾಡಲಿಕ್ಕ ?'' ಅಂಬೋ ಮಾತು ಬಂತು ಅಪ್ಪನಿಂದ ಬಾಣಧಾಂಗ. ಇಂತಹ ಚುಚ್ಚುಮಾತಿಗೆ ಮನಸ್ಸನ್ನು ಕಲ್ಲುಮಾಡಿ ಕೊಂಡ ಅವ್ವ ಕರಗಲಿಲ್ಲ. ''ಹಸುವಾಗಿದ್ರ ಎರಡ ರೊಟ್ಟಿ ಉಂಡು ಕುಂದ್ರಬಾರ್ದ ಸುಮ್ನ! ಮನಿಗಿ ಬಂದ ಕೂಡ್ಲೆ ಕಾಲಕೆದರಿ ಜಗಳ ಸುರು ಮಾಡ್ತಿದಿ'' ''ನಿನ್ನ ರೊಟ್ಟಿ ಬುಟ್ಟ್ಯಾಗ ಇರ್ಲಿ. ಮೊದಲು ಯಾವನ ಬಲ್ಲಿ ಹೋಗಿದ್ದಿ ಹೇಳು ?'' ''ಸದಾಶಿವನಿಗಿ ಒಂದೇ ಧ್ಯಾನ ಅಂತ! ಅಸರಂತ ನಿನ್ನ ತಲ್ಯಾಗ ಇಂಥಾ ವಿಚಾರನ! ನೀ ಎರಡು ಮೂರು ಸಂಬಂಧ ಇಟಗೊಂಡು, ಉಳಿಕಿದವರು ಹಂಗ ಅಂತ ಧ್ಯಾನಸ್ತಿ; ಸರಿ ಅಕಡಿ ಮಂದಿಗಿ ಬೇಡಿ ಕಾಡಿ ದೀಡಿಯಿಂದ ಬೀಜಕ್ಕನೂ ಆಗತವಾವು ಊಟಕ್ಕನೂ ಇಲ್ಲಂತ ಜ್ವಾಳಾ ತಂದೀನಿ.'' ''ಆಹಾಹಾ! ಮಹಾ ಪತಿವ್ರತಿ; ತಂದದ್ದಕ್ಕ ಎರಡರಷ್ಟ ಕೊಡತೀವಿ ಅಂದ್ರ ಜೀವದ ಗೆಳ್ಯಾರು ಕೊಟ್ಟಿಲ್ಲ. ನಿನ್ನಂಥಾ ಹೆಣ್ಣ ಭಾರಿಗೀಗಿ ಯಾವ ಕೊಟ್ಟ ಅದು ಹೇಳು ? ಪತಿ ಭಕತಿಯೊಳಗ ಶಿರೋಮಣಿ ನೀನು. ನಿನ್ನ ವ್ರತಾ ಖರೆ ಅಂದ್ರ ವಲಿಮ್ಯಾಲ ಎಣ್ಣೆ ಕಾಸಿ ಇಟ್ಟೇನಿ; ಬಾ ಅದರಾಗ ಕೈ ಇಡು'' ಅಂದ. ಅಕಿ ಒಳಹೋಗಲಿಲ್ಲ ಮೈಮ್ಯಾಲ ಆವೇಶ ಬಂದಹಾಂಗ ಅಕಿಯನ್ನು ಒಳಗ ಎಳೆದೊಯ್ದು ''ಆ ಸೀತಾನ್ಹಾಂಗ ಪತಿವ್ರತಿಯಾಗಿದ್ದರ ಈ ಕಾಯದ್ದ ಎಣ್ಣ್ಯಾಗ ಕೈ ಆಡಿಸಿ ಆ ಎಂಟಾಣೆ ಬಂದಿ ಹೊರಗ ತೆಗಿತಿ. ಇಲ್ಲಂದ್ರ ನೀನು ನಿನ್ನ ಹಾದರ ಒಪ್ಪಿಧಂಗ'' ಅಂದು ನಿಂತುಬಿಟ್ಟ. ನಾನು ಅವ್ವ ಅಂತ ಚೀರಿ ಚ್ವಣ ವರಿಸಿಕೋತ ಅವ್ವನ ಸೀರೆಯ ಸೆರಗಿನೊಳಗ ಅಡಗಿದ್ದೆ. ಅವ್ವ ಮೈಮೇಲೆ ದೆವ್ವ ಬಂದವಳ ಹಂಗ ನನ್ನ ರಟ್ಟೆ ಹಿಡಿದು ಬಾಜು ಒತ್ತಿ ಒಲಿಮುಂದ ಹಾಯ್ದುನಿಂತು ಬಾಗಿದ್ಲು. ''ಯವ್ವಾ ಬ್ಯಾಡೆ. ಯವ್ವಾ – ಯವ್ವಾ...'' ಅನ್ನುವ ನನ್ನ ದನಿಯೊಂದಿಗೆ ಅಳು ಕಿತ್ತಿ ಬಂದುಬಿಟ್ಟಿತು. ತಿಪ್ಪಿನೂ ಒಳಗ ಅಂಬೆಗಾಲಿಟ್ಟು ಬಂದ್ಲು. ಅವ್ವಗ ಅವಚಿ ಕೊಂಡೆವು. ಆದ್ರ ಅವ್ವ ಅವಡುಗಚ್ಚಿ ಅಳುವನ್ನು ತಡೆದುಕೊಂಡಿದ್ಲು. ಎರಡೂ ಕಣ್ಣಲ್ಲಿ ಕಣ್ಣೀರ ಧಾರೆ ಧಾರೆಯಾಗಿ ಹರಿಯುತ್ತಿದ್ದವು. ನಮ್ಮ ಅವ್ವನ ಕಣ್ಣಲ್ಲಿ ಕಣ್ಣೀರು ಧಾರೆ... ನಮ್ಮ ಕಣ್ಣೀರು ತೊಡಿಯಲಿಕ್ಕಿ ಬರಧಾಂಗ ಆಕಿಯ ಕೈಗಳು ಕೆಂಪಗೆ ಬುರು, ಬುರು ಊದಿಕೊಂಡು ಕೈತುಂಬ ಹತ್ತಿ ಹಣ್ಣಿನಂಗ ಗುಳ್ಳೆಗಳು. ಅವುಗಳನ್ನು ನೋಡಿಕೊಳ್ಳುತ್ತ ಅವ್ವ ಇಬ್ಬರನ್ನು ಎರಡು ಕಡೆಗೆ ತಬ್ಬಿಕೊಂಡು ಸಪ್ಪಳಿಲ್ಲದೆ ನೆಲ ವದ್ದೆ ಮಾಡುತ್ತಿದ್ದಳು. ಅವ್ವನ ಗಲ್ಲದ ಮ್ಯಾಲ ಜಿನುಗುತ್ತಿದ್ದ ಹನಿಗಳಿಗೆ ಲೆಕ್ಕವಿಲ್ಲ. ಒರಿಸಲು ಹೋದ ನನ್ನ ಕೈಗಳು ಆ ಬೆಚ್ಚಗಿನ ಕಣ್ಣೀರಲ್ಲಿ ಹಸಿ,

ಹಸಿಯಾದವು. ನಾನು ಒರಿಸಿಧಂಗೆ ಕೊನೆ ಇಲ್ಲಧಾಂಗ ನನ್ನೆದೆಗೆ ತಿಕ್ಕಿ ಅಳುವಾಗ ಆಕೆಯ ಹಣೆಯ ಕುಂಕುಮ ನನ್ನ ಎದೆಯನ್ನು ಕೆಂಪು ಮಾಡಿತ್ತು.

ಇದಾದ ಮ್ಯಾಲ ಅವ್ವನಿಗಿ ರೊಟ್ಟಿಪಲ್ಯ ಮಾಡಲಿಕ್ಕಿ ಆಗಧಂಗ ಆದಾಗ ಒಂದೆರಡು ದಿನ ನೆರೆ ಹೊರೆಯವರು ಬಂದು ಅಡಿಗಿ ಮಾಡಿಕೊಟ್ಟರು. ತಮ್ಮ ಮನ್ಯಾಗಿನ ಚಟ್ನಿ ರೊಟ್ಟಿ ನಮ್ಮಗೂಡ ಹಂಚಿ ತಿಂದರು. ಅವ್ವ ಇಂಥ ಗಂಡನ ಕೂಡ ತನ್ನ ಪತಿವ್ರತಾ ಧರುಮ ಸಾಬೀತು ಮಾಡುವುದು ಎಷ್ಟು ಸರಿ ಅಂತ ನಮ್ಮ ಮುಂದ ಅಂದಾಡಿಕೊಳ್ಳುತ್ತಿದ್ದಳು. ಅಂದ ನಮಗವು ಖಾಲಿ ಶಬ್ದಗಳು, ಅರ್ಥ ಹೊಳೆದಿರಲಿಲ್ಲ. ಇದಾದ ಮ್ಯಾಲ ಅಪ್ಪ ತೂರಾಡುತ್ತ ತೂರಾಡುತ್ತ ಮನೆಗೆ ಬರುತ್ತಿದ್ದ. ಅದ್ಯಾವ ದ್ವೇಷ ಹೆಪ್ಪುಗಟ್ಟಿ, ಮಡುಗಟ್ಟಿ ಅವನ ಮನಸ್ಸಿನಲ್ಲಿ ಮನೆ ಮಾಡಿತ್ತೋ? ಆಕಿಯನ್ನು ಕಂಡರೆ ಸೊಕ್ಕು ಉಕ್ಕಿ ಆಕಿಯ ಮೈ ಮುಖ ಎನ್ನದೆ ಥಳಿಸಿ ಸೋತು ಬೆಂಡಾಗಿ ಹಾಸಿಗೆ ಸೇರುತ್ತಿದ್ದ. ''ಅವ್ವ ತಪ್ಪಿಸಿಕೊ'' ಅಂದ್ರ ''ತಪ್ಪಿಸಿಕೊಂಡ್ರ ಭಾಳ ಧಾಂದಲೆ ಮಾಡತಾನ'' ಎಂದು ತನ್ನನ್ನು ತಾನು ಒಪ್ಪಿಸಿಕೊತಿದ್ಲು. ಹೀಂಗ ಹಿಗ್ಗಾ ಮುಗ್ಗಾ ಹೊಡದ ಮುಗಿಸಿದ ಮ್ಯಾಲ ''ಮಲಗೋ ಮಗಾ ನನ್ನ ಕಣ್ಣೀರ ಬತ್ತಾವ. ಅಳಂಗಿಲ್ಲ'' ಅಂತಿದ್ಲು. ಇಷ್ಟು ಅವ್ವಗ ಹೊಡೆಯೊ ಅಪ್ಪ ನನಗ ಹೊಡೆದುದ್ದು ಕಡಿಮೆ. ಅದಲ್ಲದೆ ಕುಡಿದು ಮತ್ತಾರಿಗೂ ಜಗಳ ಮಾಡೋದು, ಹೊಡ್ಯೋದು ಇರಲಿಲ್ಲ. ಕುಡಿದಾಗ ದಾರಿ ಒಳಗ ಬರುವಾಗ ದೊಡ್ಡ ಮಂದಿಗಳ್ಯಾರಾದ್ರು ಕಂಡ್ರ ಜೋಲಿ ಹೊಡಿಲಾರ್ದ ತನ್ನ ತಾ ಸಂಬಾಳಿಸಿಕೊಂಡು ''ರಾಂ ರಾಂ'' 'ನಮಸ್ಕಾರ'... ಅನ್ನುತ್ತಿದ್ದ.

ರೂಪಿನಲ್ಲಿ ಕೆಲಸದಲ್ಲಿ, ಅಷ್ಟೇಕೆ ದೇಹದ ಶಕ್ತಿಯಲ್ಲಿ ಕೆಲಸದ ಕುಸುರಿತನದಲ್ಲಿ ಹಾಂಗ ನೋಡಿದರ ಅವ್ವನದೆ ಮೇಲುಗೈ, ಆಕಿಗೆ ತುಳಿದು ಪಾತಾಳಕ್ಕೆ ಒತ್ತಬೇಕೆಂದು ಅವ ಹುನ್ನಾರ ಮಾಡಿದಷ್ಟು ಆಕಿ ಉತ್ಸಾಹದಿಂದ ನಮಗ ಬೀದಿಪಾಲು ಮಾಡಬಾರದೆಂಬ ಛಲದಿಂದ ನಿತ್ಯ ಮುಂಜಾನೆ ಮತ್ತೆ ಚಿಗಿದು ಬನ ಎಲ್ಲ ಹೂ ಬಿಟ್ಟಂಗ ಉಲ್ಲಾಸದಿಂದ ಅಂಗಳ ಉಡುಗಿ ನೀರು ಹೊಡೆದು ತಂಗಿ ತಿಪ್ಪಿಗಿ ನೋಡಿಕೋ ಅಂತ ಹೇಳಕೊಂತ ಕರ ಬಿಟ್ಟು, ದನ ಹೊಡೆದು ಒಲೆ ಆರಿಸಿ ಕಟ್ಟಿಕೊಂಡ ಬುತ್ತಿ ತಲಿಮ್ಯಾಲ ಇಟ್ಟಕೊಂಡು ಆಸುಪಾಸಿನ ಹೊಲದ ಹೆಂಗಸರ ಜೊತೆಗೂಡಿ ಹೊಲಕ್ಕೆ ಹೋಗಿ ಹಳ್ಳದ ಹೋಳಿನ ಹೊಲದ ಒಂದೊಂದೆ ಕೆಲಸಗಳನ್ನು ಮಾಡುತ್ತಿದ್ದಳು.

ಆ ಸಲ ಬ್ಯಾಸಗಿನೂ ಬಂತು. ನಮ್ಮೂರ ಬ್ಯಾಸಗಿ ಕಾಲ ಭಾಳ ದೊಡ್ಡದು. ನಾಲ್ಕೈದು ತಿಂಗಳು ಭೂಮಿಮ್ಯಾಲ ಹಸಿರಿನ ಹೆಸರ ಇರೋದ ಕಾಣಂಗಿಲ್ಲ. ನಮ್ಮಂಗ ಕಟ್ಟಿ ಮ್ಯಾಗ ಬದುಕುವವರು ಹೊಟ್ಟಿ ಮ್ಯಾಗ ಆಗಾಗ ತಣ್ಣೀರ ಬಟ್ಟಿ ಹಾಕಿಕೊಳ್ಳಬೇಕಾಗತದ. ಅವ್ವನ ಬತ್ತಲಿಕ್ಯಾಗ ಇದಕ್ಕೂ ಒಂದು ಬಾಣ ಉಳಿದಿತ್ತು.

ತುತ್ತಿನ ಚೀಲಕ್ಕ ತುತ್ತು ಕಡಿಮಿ ಬೀಳತೊಡಗಿದವು. ಆದರ ಮ್ಯಾಲ ಮತ್ತೊಂದು ಮಗದೊಂದು ಹುಟ್ಟಿದರ, ಅನ್ನುವ ಚಿಂತಿನೂ ಇತ್ತು. ಅಂಥಾ ದಿನದಾಗ ''ಮಕ್ಕಳು ನಿಲ್ಲುವ'' ಅಪರೇಷನ್ ಮಾಡಿಸಿಕೊಂಡು ''ಐನೂರು'' ರೂಪಾಯಿ ಸಿಗತಾವ ಅನ್ನವ ಸಕ್ಕರೆಯಂಥ ಮಾತು ಅವ್ವನ ಮನಸಿಗಿ ನಾಟಿತು.

ಅವ್ವ ದಿಡಗಿಲೆ ನಡಿಯ ಹೋಗಿ ತೊಡರೆ ಬಿದ್ದಂಗ ಹೊಟ್ಟೆ ಕತ್ತರಿಸಿ, ಹೊಲಿಸಿಕೊಂಡು ಬಂದು ಸುಸ್ತಾಗಿ ಮಲಗಿಬಿಟ್ಟಾಗ ಆಕಿಯ ಮೈಯ ಬೆವರ ವಾಸನೆ ನಮಗೆ ಹಿತವೆನಿಸಿ, ಆನಿಸಿ ಮಲಗಿದರೆ ಸಾಕು ಹಸಿವನ್ನು ಅಲ್ಲೆ ಹೂಳಬಹುದೆಂಬ ಪಾಠ ಕಲಿತುಕೊಂಡೆ. ಆಗೊಮ್ಮೆ ಈಗೊಮ್ಮೆ ಅವ್ವನ ಮುಖದಲ್ಲಿ ನಗಿ ಹೂ ಅರಳಿಸಲಿಕ್ಕಿ ಹಳ್ಳದ ಗುಂಬ ಒಡ್ಯಾಡುತ್ತ ಆ ಬ್ಯಾಸಿಗ್ಯಾಗ ಸ್ವಲ್ಪ ನೀರಿಲ್ಲಿ ಹೊಯ್ದಾಡುವ ಮೀನುಗಳನ್ನು ಗಪ್ಪಂತ ಹಿಡಿದು ತಂದು, ಒಂದು ಹೊತ್ತಿನ ಕೂಳಿನ ಚಿಂತಿ ಕಳಿದಿದ್ದು ನೋಡಿ ಖುಷಿ ಪಡುತ್ತಿದ್ದೆ.

ಹಂಗ ಒಂದ ಬಾರಿ ಅಪ್ಪನಿಗೆ ''ಊಟದ ವ್ಯಾಳ್ಯಾ ಆಗ್ಯಾದ. ಊಟಕ್ಕ ಬರಬೇಕು'' – ಅಂತ ಒದರುತ್ತ ಕಿರುಚುತ್ತ ಕರೆಯಲಿಕ್ಕಿ ಹೋದೆ. ಮಲ್ಲವ್ವನ ಮನಿಯಲ್ಲಿ ಕುಂತಿದ್ದ. ನನ್ನ ನೋಡಿ ಮುಖ ಕಳೆ ಇಲ್ಲದಂಗಾತು. ಅದನ್ನು ಮರೆಸಲಿಕ್ಕಿ ''ಇಕಿ ಮಲ್ಲವ್ವ ಅಲ್ಲಲೆ ನನ್ನ ಮಲ್ಲಿಕಾ'' ಅಂತ ನಕ್ಕ. ನಾನು ದಿಟ್ಟಿಸಿ ಆ ಮಲ್ಲವ್ವನನ್ನು ನೋಡಿದಾಗ ಆಕಿ ಹಲ್ಲುಕಿರಿಯುತ್ತ ಅಪ್ಪನ ತಲೆಕೂದಲಲ್ಲಿ ಕೈ ಆಡಿಸುತ್ತಿದ್ದಳು. ನನಗೂ ಆ ಖೌದಿಯ ಮ್ಯಾಲೆ ''ಕುಂದ್ರ ಬಾ'' ಎಂದು ಕರೆದಾಗ ಅಲ್ಲಿಂದ ನಾ ದೌಡಾಯಿಸಿದ್ದೆ.

ಅದಾದ ಮೂರು ತಿಂಗಳಿಗೆ, ಎದುರು ಮನೆಯ ನಿಂಗಮ್ಮನ ಮನಿಯೊಳಗ ಮಾವಿನಕಾಯಿ ಅಡಿ ಹಾಕ್ಯಾರ ಅನ್ನೊ ಸಮಾಚಾರ ಹತ್ತಿ ಕಣ್ಣರಳಿಸಿಕೊಂಡು ಸಾವಕಾಶ ಹೆಜ್ಜೆ ಹಾಕಿ ಹುಡುಗರು ನಾವು ಕಾಲಿಟ್ಟಾಗ ಅಲ್ಲಿ ಅಪ್ಪ!.

''ಯಾಕಲೆ ಅವ್ವ ಕಳಿಸಿದಳೇನು ?''

''ಇಲ್ಲ ?''

''ಮತ್ತೆ ?''

''...''

ಓಡಿ ಬಂದದ್ದೊಂದೆ ನೆನಪು. ಇಂತಹ ಘಟನಾಗಳು ಆದಮ್ಯಾಲ ಅಪ್ಪ ಇರುವ ಜಾಗದಲ್ಲಿ ಹೋಗುವುದು, ಕೂರುವುದು, ನಿಲ್ಲುವುದು ನಿಂತುಹೋಯಿತು.

ಈ ಎಲ್ಲ ಚಟಗಳಿಗೆ ಅವ್ವನ ಡಾಬದ ಮೇಲಿನ ಬಾಳಿ ಗಂಟು ಖಾಲಿ ಆಗುತ್ತಲೆ ಇರುತ್ತಿತ್ತು. ನನ್ನ ಕಣ್ಣ ಮುಂದಿನ ಈ ಸಂಸಾರದ ದೊಂಬರಾಟಕ್ಕ ನಾನು ಬಾಯಿಮುಚ್ಚಿ ನಿಂತು ನೋಡುವವನಾದೆನಲ್ಲಪ್ಪೊ ಅಂತ ಒಳ ಒಳಗೆ ದುಃಖ ಪಡುತ್ತಲೆ ದೊಡ್ಡವನಾಗುತ್ತ ಹೋದೆ. ದೊಡ್ಡವನಾದಂತೆ ಮಾತುಗಳು ಕಡಮೆ. ನಮ್ಮವ್ವಗ ಹಣಿಯ ಹಣಚಿಬೊಟ್ಟ ಸಕಲ ಸಿಂಗಾರ. ತಾನು ಗಂಡನಿರೊ ಮುತ್ತೈದಿ ಎಂದು ಕಾಸಿನಗಲ ಕುಂಕುಮ ಹಚ್ಚಿ, ಕೈ ತುಂಬ ಬಳಿ ಏರಿಸಿಕೊಂಡು ಒನಪಿನಿಂದ ಓಡಾಡಿದಕಿನೆ ಅಲ್ಲ! ನಮ್ಮವ್ವಗ ಹಣಿಯ ಹಣಚಿಬೊಟ್ಟೆ ಸಕಲ ಸಿಂಗಾರ. ಮುಂದೊಂದು ದಿನ ಕಿವಿಗೆ ಬೆಂಡೋಲೆ ಕಂಡೆನೆಂಬೊ ಭರವಸೆಯೊಳಗ ಕಿವಿಯ ತೂತುಗಳು ಮುಚ್ಚದಿರಲೆಂತ ಬೇವಿನ ಕಡ್ಡಿಗಳನ್ನು ಸಿಗಿಸಿಕೊಂಡಿದಿಲ್ಲ. ನಾಲ್ಕು ಹೊಟ್ಟೆ ತುಂಬಿಸೊ ಹೆಣಗಾಟ ಸಣ್ಣದಿತ್ತ? ಕಾಳಿಗಾಗಿ ದುಡಿಬೇಕು. ಒಲಿ ಉರಿಯಲಿಕ್ಕಿ ಕುಳ್ಳುಸ, ಕಟಗಿ, ತೌಡು ಮನಿಗಿ ತಂದು ಒಟ್ಟಬೇಕು. ಅಸರಂತ ಇದರಲ್ಲಿ ಮುಳುಗಿದಾಕಿಗಿ ಅಪ್ಪ ಸುಖ ಕೊಡಲಿಲ್ಲದಕ್ಕ ಹಳಹಳಿಸಲಿಕ್ಕಿ ಪುರುಸೊತ್ತೆಲ್ಲಿತ್ತು?

ನಮ್ಮ ಊರೆಂಬ ಊರಲ್ಲಿ ಮುಂಜಾನಿ ಜನ ಎದ್ದು ನಾಲ್ಕು ತಾಸು ಅಡಾಡುಡಿಯೊಳಗ, ತೊಳಿ, ಬಳಿ, ಬಡಿಕಟ್ಟು ಅಂತ ಗದ್ದಲ ಎಬ್ಬಿಸಿ ನಂತರ ಹೊಲ ನೆಲದ ಕೆಲಸಕ್ಕ ಅಡವಿ ಸೇರಿಕೊಂಡ್ರ ವಾಪಾಸ್ಸಾಗೋದು ಸಂಜಿಕಿನೆ. ''ಸೂರಿಯಾ ಪಚ್ಚಿಮದಾಗ ತಾಯಿ ಹೊಟ್ಯಾಗ ಹೋದನಕಾ'' – ಅಂತ ಕತ್ತಲಕಾವಳಾದಾಗ ಜನ ದೀಪ ಹಚ್ಚಿ ನೋಡತಾರ, ಪಾಪ! ಪುರುಸೊತ್ತಿಲ್ಲದ ಜನ

ಊರ ಸರಕಾರಿ ಸಾಲಿಗೆ ಹೋಗುವ ತಂಗಿ ತಿಪ್ಪವ್ವ ಮನೆಯಲ್ಲಿ ಊಟಕ್ಕಿಲ್ಲದೆ ಭಾಳ ತರಾಸ ನಡೆದಿರುವುದಕ್ಕ ಕೇರಿಯ ಕೆಲಸಕ್ಕ, ವಾರಿಗಿ ಪೋರಿಗೋಳ ಜೊತಿಗಿ ಹೋಗಿದ್ಲು. ಅವತ್ತು ಅಕಿಗಿ ಮನಿಗಿ ಬರಲಿಕ್ಕ ತಡಾ ಆಗಿತ್ತು. ಯಾರ ಜೊತೆಗೂ ''ಗುದುಮುರುಗಿ'' ಮಾಡಿಕೊಂಡು

ಮೈ ಎಲ್ಲ ಕೆಸರು, ರಾಡಿ ಆಗಿ ಮೈ ನೋಯಿಸಿಕೊಂಡು ಮೈ ಎಲ್ಲ ಹೊಲಸಾದುದರಿಂದ ಅಳಕುತ್ತಲೆ ಮನಿಗೆ ಬಂದಳು.

ಅವ್ವ ಒಲಿಮುಂದ ಕುಂತು ರೊಟ್ಟಿ ಬಡಿತಿದ್ದಳು. ಒಲಿಯ ಕಿಚ್ಚು, ಉರಿ ನಾ ಮ್ಯಾಲ ತಾ ಮ್ಯಾಲ ಎಂಬಂಗ ನಾಲಿಗಿ ಚಾಚಿ ಕಾಯ್ದ ಹಂಚಿಗಿ ಮುಟ್ಟುತ್ತಿದ್ದವು. ತಿಪ್ಪಿಯ ಅಳುಮಾರಿ ಕಂಡು ''ಏನಾಯ್ತು ಮಗ ?'' ಎಂದು ಕೇಳಲಿಕ್ಕಿ, ಅಲ್ಲಿತನಕ ಒಳ ಒಳಗ ನುಂಗಿದ ಅಳು ಅಬ್ಬರಿಸಿ ಬಂತು. ಸಣ್ಣ ಹುಡುಗಿ ಬಾಯಲ್ಲಿ ಬಿಕ್ಕಳಿಸಿ ಬಿಕ್ಕಳಿಸಿ ಜೊಲ್ಲು ಕೂಡಿಕೊಂಡಿತ್ತು. ಏನೋ ಹೇಸಿಕೊಂಡು ಹೇಸಿಕೊಂಡು ಅಡಿಗಿ ಮನಿ ಎಂದ ಲಕ್ಷಕ್ಕ ತೂಗಳ್ಳದೆ ಉಗುಳಿತು. ಸಾಲಿಗಿ ಹೋಗೊ ಶ್ಯಾಣ್ಯಾ ಪೋರಿ ಹಿಂಗ ಯಾಕ ಮಾಡ್ಲಿಗತ್ತದಂತ ಅವ್ವ ಕಕ್ಕಾಬಿಕ್ಕಿಯಾದ್ಲು.

ಕೇರಿ ಬಾಜು ನಿಂತ ನೀರು ಮಲೆತು ಕೊಳಕಾಗಿತ್ತು. ಅದರಲ್ಲೆ ಬಿದ್ದು ಬಂದ್ಲೇನಂತ ವಿಚಾರದಾಗಿದ್ಲು. ಆದ್ರ ಆದದ್ದೆ ಬೇರೆ. ಅಕಿಯಗಿಂತ ಎರಡರಷ್ಟು ವಯಸ್ಸಿದ್ದು, ಮದಿವ್ಯಾಗಿ, ಹೆಣ್ತಿನ ನೋಡಲಾರದಕ್ಕ ಆಕಿ ಓಡಿ ಹೋಗಿದ್ಲು. ಈಗ ಈ ಸುವ್ವರ ನನ್ನ ಮಗ ಇಂಥ ಹೊಲಸು ತಿನ್ನುವ ಕೆಲಸ ಮಾಡಿದ್ದು.

ಹಿಂದೆ ಒಂದು ಸಲ ಶಾಲೆ ಒಳಗ ಲಂಗದಲ್ಲಿ ಕೆಂಪು, ಕೆಂಪಗ ಕಾಣಿಸಿ ಅತ್ತಗೊಂತ ಬಂದುದ್ದು ಮನೆಮಂದಿ ನಾವು ಮರೆತಿರಲಿಲ್ಲ ಅದಾಗಿ ಆರು ತಿಂಗ್ಳು ಆಗಿತ್ತು. ಅವ್ವ ''ಏನಾಯ್ತು ನಿನಗ ಸುಮ್ಮ ಸುಮಕೆ ಅತ್ತರ ನನಗ ಹೆಂಗ ಗೊತ್ತಾಗಬೇಕೆ ? ಜರಾ ಬಾಯಿ ಬಿಟ್ಟು ಹೇಳು'' ಎಂದು ಒಲೆ ಉರಿ ಕಡಿಮೆ ಮಾಡಿ, ನೆಗ್ಗಿದ ಸಿಲವಾರದ ಬೋಗಣಿಯಲ್ಲಿ ಕೈ ತೊಳೆದು, ಹಸಿ ಕೈಯಿಂದಲೆ ಮಗಳ ಕಣ್ಣೀರ ತೊಡೆಯುತ್ತ ''ಏನಾಯ್ತು... ? ಏನಾಯ್ತು... ?'' ಅಂತ ದಿಗಿಲಿನಿಂದ ಕೇಳಿದಳು. ಅಳುವೊಂದೆ ಉತ್ತರವಾಗಿತ್ತು!.

ಅವತ್ತ ಅಪ್ಪ ಮಗಳ ಈ ಅವಸ್ಥೆಗೆ ಮೂಕ ಪ್ರೇಕ್ಷಕನಾಗಿದ್ದ. ತಾ ಅಸರಂತ ಕಾಲಾ ಕಳಿತಿದ್ದ ಆ ಕಟ್ಟಿಗೋಳ ಮ್ಯಾಗ, ಅಂದ್ರ ಆ ಸೋಮಾರಿ ಚ್ಯಾವಡಿ ಗೋಳೊಳಗೆ ತನ್ನ ತಿಪ್ಪಿಯ ಕಥಿನೆ ಚರ್ಚಾ ಆದಾಗ, ಮನಸಿಗಿ ಭಾಳ ಬ್ಯಾಸರ ಮಾಡಿಕೊಂಡಿದ್ದನೇನೊ ? ಒಳ ಒಳಗ ದುಃಖ ನುಂಗಿದ. ಅದೆಲ್ಲ ಎದುರಿಸಲಾರದ್ದಕ್ಕ ಮರುದಿನ ಮನಿಯೊಳಗ ಬಿದ್ದುಕೊಂಡಿದ್ದ. ನಾನು ಕಂಡಂಗ ಅಪ್ಪ ಎಂದೂ ಇಲ್ಲದೆ ಮನಿಯೊಳಗ ಇರಲಿಕ್ಕ ಸುರು ಮಾಡಿದ. ಒಂದಿನ ರಾತ್ರಿ ಹಿತ್ತಲದೊಡ್ಡಿಯ ದನದ ಕೊಟ್ಟಿಗೆಯ ಜಂತಿಗಿ ಉರುಳು ಬಿಗಿದುಕೊಂಡದ್ದು ರಾತ್ರಿ ಕಾಲ್ಮಡಿಗಿ ಹೋದ ಅವ್ವ ನೋಡಿ ಹೌಹಾರಿದಳು !



ಮನುಷ್ಯ ತನ್ನ ಎದುರಿಗೆ ತಾನೆ ಬೆತ್ತಲಾಗಲು ಅಂಜುತ್ತಾನೆ. ಹಾಗೆ ಒಂದು ಸಲ ತನ್ನ ಇರವು ಸರಿ ಇಲ್ಲ ಎಂಬೊ ಅರಿವು ಮೂಡಿತೊ ಮುಗಿಯಿತು. ಪಶ್ಚಾತ್ತಾಪದೊಳಗ ಕುದಿಯತೊಡಗುತ್ತಾನೆ. ಹೀಂಗ ಅಪ್ಪನೂ ಪಶ್ಚಾತ್ತಾಪದಾಗ ಕುದ್ದು ಕುದ್ದು ಆತ್ಮಗಳ ಜಾತ್ರಿಗಿ ಸೇರಿಬಿಟ್ಟ ಅಂತ ನಾವು ತಿಳಿದೆವು. ಆದ್ರ ಊರೆಂಬ ಊರು ''ಮಗಳ ಮರ್ಯಾದೆ ಹೊಯ್ತೆಂದು ಉರುಳು ಹಾಕಿಕೊಂಡ'' – ಅಂತ ಪ್ರಚಾರ ಸುರು ಮಾಡಿತು. ಜನ ಬುಗು ಬುಗು ಬಂದು ಸೇರಿದರು. ಎಲ್ಲರ ಕಣ್ಣಲ್ಲಿ ಕೆಟ್ಟ ಕುತೂಹಲ.

ಪೊಲೀಸರು ಊರ ಪಂಚರು ಸೇರಿ ಹೆಣದ ಪಂಚನಾಮಾ ಮಾಡಿದ ಮ್ಯಾಲ ಅದನ್ನು ಅಲ್ಲಿಯೆ ಇರಲಿ ಅಂತ ಇಟ್ಟು, ''ಇಂತಹ ಹೊಲಸು ಕೆಲಸ ಮಾಡಿದ ಅವ ಹುಡುಗಿಗಿ ತಾಳಿ ಕಟ್ಲಿ'' ಅಂತ ಹುಡುಗಿಯ ಉದ್ಧಾರ ಮಾಡ್ಲಿಕ್ಕೆ ಮಾತು ಸುರುಮಾಡಿದ್ರು. ಹುಡುಗಿಗಾಗ್ಲಿ ಅವ್ವನಿಗಾಗ್ಲಿ ಒಂದು ಮಾತು ಕೇಳಲಿಲ್ಲ. ಹುಡುಗಿ ಅಂದ್ರ ಮಡಕೆ ಅಂಬೊ ಭಾವ ಬೇರೂರಿದ್ದಾಗ ಬೇರೆ ಮಾತಿಗೆ ಅವಕಾಶ ಎಲ್ಲಿತ್ತು ?

ಮನಿಗಿ ಕೀಲಿ ಜಡಿದು ಪರಾರಿ ಆದ ಪರಭ್ಯಾಗ ಹುಡುಕೊದಕ್ಕ ಊರ ದಳಪತಿ ಓಡಾಡಿದ. ಪಂಚಾಯ್ತಿ ಕಟ್ಟಿ ಹಿಂದಿನ ಪಂಪ್‌ಹೌಸಿನಲ್ಲಿ ಅಡಗಿ ಕುಂತ ಪರಭ್ಯಾ ಹೊರಬಂದ. ತಪ್ಪು ಒಪ್ಪಿಕೊಂಡ ಹಾಂಗ ತಿಪ್ಪಿಯ ಬಲ್ಲ್ಯಾಕ ಬಂದು ತಲಿಕೆಳಗ ಹಾಕಿ ನಿಂತಿದ್ದ. ನನ್ನ ಕಾಲಾನ ರಕ್ತ ತಲಿಗೆ ಏರಿ ಉರಿದಿತ್ತು.

ಅಪ್ಪನ ಭಾಗಾದಿಯೊಬ್ಬ ಬಂದು ಅವ್ವನ ಕೊರಳ ತಾಳಿಗೆ ಕೈಹಾಕಿದಾಗ ಅವ್ವ ಯಾವ ಅಬ್ಬರ ಮಾಡದೆ ಅಳು ನಿಲ್ಲಿಸಿ ತಾಳಿ ತೆಗೆದು ಕೈಯಾಗ ಕೊಟ್ಟಳು. ತಾಳಿಯ ಬಟ್ಟಲು ಸತ್ತು ಬಿದ್ದ ಅಪ್ಪನ ಬಾಯಾಗ ಹಾಕಿದರು. ಉಳಿದಿದ್ದೊಂದು ತಾಳಿ ಬಟ್ಟಲು ಕಾಡುತ್ತಿದ್ದ ಪೊಲೀಸರ ಜಾಬಿಗೆ ಹಾಕಿದಾಗಲೆ, ಹೆಣ ಎತ್ತುವ ಪರವಾನಗಿ ಸಿಕ್ಕಿತು. ಹೆಣ ಹರಿದು ಚೆಂಚಿ ಮಾಡದೆ, ಅಲ್ಲಲ್ಲಿ ಕತ್ತಿ ಹಾಕಿಕೊಟ್ಟಿದ್ರು.

ಹೋದ ವರ್ಷ ಕಡ್ಲಿ ರಾಶಿ ಆದಮ್ಯಾಲ ಅವ್ವ ಕೊರಳಾಗಿನ ತಾಳಿ ಬಟ್ಟು ಹೀಂಗ ಪರಸಂಗ ಬುಂದುದಕ್ಕ ಮಾರಿದ್ದಕ್ಕ ಮತ್ತ ಮಾಡಿಸಿಕೊಂಡಿದ್ಲು. ಅಪ್ಪ ''ಈಗ್ಯಾಕ ?'' ಅಂದು ಜಗಳ ಮಾಡಿದ್ದ ''ನೀ ಸತ್ರ ಬಾಯ್ಯಾಗ ಹಾಕಲಿಕ್ಕ'' ಅಂತ ನಾ ನಡುವ ನಿಂತು ಒದರಿದಾಗ ''ಹೀಂಗನಬಾರ್ದು ಅಪ್ಪಗ''! ''ನೀ ಅವಗ ಕೊಡೊ ಮರ್ಯಾದಿ ಕೊಡಬೇಕಲ್ಲ, ಅವ ಏನಂದ್ರೂ ಮಾಡಿದ್ರು ಸೌ ಖೂನಿ ಮಾಫದ ಮಗಾ!'' ಅವ್ವ ಹೀಂಗಂದಾಗ ನಾ ತಣ್ಣಗಾಗಿದ್ದೆ. ಆಗ ಈ ನಡುಗಂಬದ ಶಕ್ತಿ ಅಗಾಧ ಅನಿಸಿತು!

ಊರ ಜನ-ಜಾತ್ರೆಯ ನಡುವ ಅಪ್ಪನ ಹೆಣ ಮೆರವಣಿಗಿ ಮಾಡಿಕೊಂಡು ಸೇರಬೇಕಾದ ಮಣ್ಣ ಕುಣಿಗೆ ಸೇರಿತು. ಅಪ್ಪನ ಮಣ್ಣಾದ ನಾಲ್ಕನೆಯ ದಿನ ಮತ್ತ ಪಂಚರು ಸೇರಿದರು. ಹುಡುಗನಿಗೆ ಶಲ್ಯ ಮುಂಡಾಸು ಕಟ್ಟಿ ಹುಡುಗಿಗೆ ತಾಳಿ ಬಿಗಿಸಿದರು. ಪಂಚಾಯ್ತಿಗೆ ಕೂತ ಊರಮಂದಿ ''ಈಗ ಲಗ್ನ ಆಂಧಗಾಯಿತು'' – ಎಂದು ಒಪ್ಪಿಗೆ ಕೊಟ್ಟು. ಎಲ್ಲರು ಬಸ್ಟ್ಯಾಂಡಿನ ಛಪ್ಪರದ ಹೊಟಲ್ಲಿನಿಂದ ತರಿಸಿದ ಮಂಡಾಳ ವಗ್ಗರಣಿ ಚೊಂದೆದ ಕಾಳು ತಿಂದು ಮನಿಗಿ ಹೋದ್ರು.

ಮದುವೆಯಾದ ಪರಭ್ಯಾನ ಎರಡು ಕಣ್ಣುಗಳು ವಿಲಕ್ಷಣವಾಗಿ ಮಿಂಚುತ್ತಿದ್ದವು. ಅವನು ಸ್ವಲ್ಪ ಕುಡಿದು ಬಂದ ಹಾಗಿತ್ತು. ತಿಪ್ಪಮ್ಮಗ ತನ್ನ ತೊಗರಿ ಕಟ್ಟಿಗೆಯ ಕೇರುಕಟ್ಟದ ಗುಡಿಸಲಿಗೆ ಕರೆದುಕೊಂಡು ಹೋದ.

* * *

ತಿಪ್ಪಿ ಲಗ್ನದ ಮೊದಲು ಕೇರಿಯ ಏರಿಯಾ ಮ್ಯಾಲ ಅನುಭವಿಸಿದ ಅನುಭವಕ್ಕೂ ಆ ಮ್ಯಾಲಿನ ನಿತ್ಯ ರಾತ್ರಿಯ ಅನುಭವಕ್ಕೂ ಹೆಚ್ಚು ಅಂತರ ತಿಳಿಯದೆ ನಿತ್ಯ ಅಳುತ್ತಿದ್ದಳು. ಆ ಗುಡಿಸಲಿನ್ಯಾಗ, ಗುಡಿಸಿ, ಸಾರಿಸಿ ಅದನ್ನು ಮನಿ ಅಂತ ಖಳೆ ತಂದುಕೊಡಲು ಈ ಮೊದಲು ಯಾರು ಪರಭ್ಯಾಗ ಹತ್ರದವರು ಇರಲಿಲ್ಲ. ತಿಪ್ಪಿಯೇ ಹೋದ ಮೇಲೆ ಕೈಯೊಳಗ ಭಾರಿಗೆ ಹಿಡಿದು ನಿಂತಳು. ಒಂದು ದಿನಕ್ಕೆ ಎಲ್ಲ ಹೆಂಗ ಸ್ವಚ್ಛ , ಝುಳ ಝುಳ ಮಾಡೀತು ಆ ಪೋರಿ ?

ಆ ಜಿರಲೆ, ಜೇಡ, ನೊರಜು ಉಣ್ಣಿ ಗುನಿಗಳ ಜೊತೆಗೆ ಪರಭ್ಯಾನೂ ಸೇರಿಕೊಂಡು ಅಸರಂತ ಬ್ಯಾಸರ ನೀಡಿ ಜೀವಭಾರ ಆಧಂಗ ಬದುಕು ಪ್ರಾರಂಭ ಆಯ್ತು. ಅಂತಹುದ್ರಾಗ ತಿಂಗಳೊಪ್ಪತ್ತಿನೊಳಗ ಆ ಎರಡು ಜೀವದಾಕಿ ಆದಳಪ್ಪೋ ಅನ್ನುವಾಗ ಪರಭ್ಯಾನ ಪಲ್ಯಾನ್ ಬದಲಾಯ್ತು. ಆತ ಮತ್ತೆ ನಾಪತ್ತೆಯಾದ. ಹೀಂಗ ನಿತ್ಯ ಅಳುವವರಿಗೆ ಪಂಚಾಯ್ತಿ ಏನು ಮಾಡೀತು, ಎಂದು ನಾನು ಅವ್ವ ಸುಮ್ಮನಿದ್ದೆವು.

ಒಂದು ದಿನ ಅವ್ವ ಊರಲ್ಲಿ ಈ ಸಣ್ಣ ಪೋರಿಯನ್ನು ಮನಿಯೊಳಗ ಕೂಡಿಸಿಕೊಂಡು ಕೂತ್ರ ನಗುವವರ ಮುಂದ ಹಲ್ಲುಮುರಿದುಕೊಂಡು ಕೂತ್ಹಂಗಾಗತದ. ಸುಮ್ನ ಊರು ಬಿಟ್ಟು ಪ್ಯಾಟಿಗಿ ಹೋಗಿ ಹಳೆಯದನ್ನು ಮರತು ಬದುಕು ಮಾಡಾಣ ಅಂತ ತೀರುಮಾನ ಮಾಡಿ ಹೇಳಿಬಿಟ್ಟಳು. ಮನೆಯೊಳಗಿನ ಕಂಚಿನ – ತಾಮ್ರದ ಸಣ್ಣ ಸಾಮಾನುಗಳ ಜೊತೆಗೆ ಸಿಲವಾರದ ಹಂಡೆ-ಭಾಂಡೆಗಳನ್ನು ಜೋಡಿಸಿಕೊಂಡು ಬಸ್ಸಿನ ಟಾಪಿಗೆ ಹಾಕಿ, ಬಂದು ಪಟ್ಟಣಕ್ಕ ಇಳಿದೆವು. ಮನೆಯೊಳಗ ಇದ್ದ ಸೊಲುಪ ಹಿಟ್ಟು, ಬ್ಯಾಳಿ, ಅಕ್ಕಿ , ಎಣ್ಣೆ ಎಲ್ಲ ತಂದಿದ್ದಳು. ಬಸ್ಟ್ಯಾಂಡಿನ ಬಾಜು ರಸ್ತೆಯ ಒಂದು ಮಗ್ಗಲದಾಗ ಟಾರ್ಪಾಲಿನ ಒಂದು ಸಣ್ಣ ಗುಡಿಸಲು ಹಾಕಿ ತಾತ್ಪುರ್ತಿಕ ಅಂತ ತಳ ಊರಿದೆವು. ಮೂರು ಕಲ್ಲು ಗುಂಡು ಹಾಕಿ ಅವ್ವ ರೊಟ್ಟಿ ಬಡಿಯಲಿಕ್ಕಿ ಕೂತಳು. ಯಾರೊ ಬಂದು ''ರೊಟ್ಟಿ ಮಾಡಿ ಮಾರಾಕ ಈ ಗುಡಸ್ಲಾ ಹಾಕಿರೇನೆಂದಾಗ'' ತಿಪ್ಪಿ ಮುಸಿ, ಮುಸಿ, ನಕ್ಕಳು. ಅವ್ವ ''ಹೌಂದೆಪ್ಪ ಐದು ರೂಪಾಯಿಗೊಂದು ರೊಟ್ಟಿ ಸ್ವಲುಪ ಪಲ್ಯ ಸಿಗತದ ನೋಡು'' ಎಂದು ಯಾಪಾರ ಸುರು ಮಾಡಿಬಿಟ್ಲು. ಹೀಂಗ ಅವ್ವ ಯಾವ ನೀರಿಗಿ ಬಿದ್ದರೂ ಈಜಿ ಬಿಡ್ತಾಳ. ನಿಂತಲ್ಲಿ ಕೂಳಗಂಬ ಆಗಿ ಎಷ್ಟೆ ವಜ್ಜೆ ಇದ್ರು ಹೆಗಲಕೊಟ್ಟು ನಿಂತಬಿಡ್ತಾಳ.

**ಜ್ಯೋತಿ ಬಿ. ಕುಲಕರ್ಣಿ**
ನಂ- ೧ - ೧೭೩ /೧ಎ, ಮೇಲಿನ ಕೇರಿ, ಬ್ರಹ್ಮಪೂರ, ಗುಲ್ಬರ್ಗಾ - ೫೮೫ ೧೦೧

# ಸೋಲಲೊಲ್ಲದ ಸರದಾರ

ನಿನ್ನೆ ಮಧ್ಯಾಹ್ನ ಸರಿಯಾಗಿ ತಿಂದುಂಡು ಮಲಗಿದಾಗ ಹದಿನಾರಾಣೆ ಸರಿಯಾಗಿದ್ದವನಿಗೆ ಬೆಳಿಗ್ಗೆ ಎದ್ದು ನೋಡಿದರೆ ಕೈ-ಕಾಲುಗಳಲ್ಲಿ ವಿಪರೀತ ನೋವು. ಸನಾತನ್‌ನ ವಿಷಯದಲ್ಲಿ ಇದು ಹೊಸದೇನಲ್ಲ. ಆಗಾಗ ಅವನಿಗೆ ಈ ತೊಂದರೆ ಇದ್ದದ್ದೆ. ಶುಂಠಿ ಮತ್ತು ಒಳ್ಳೆ ಮೆಣಸು ಹಾಕಿ ಚೆನ್ನಾಗಿ ಕುದಿಸಿದ ಕಷಾಯ ಕುಡಿದುಬಿಟ್ಟರೆ ಎಲ್ಲಾ ಸರಿಯಾಗಿಬಿಡ್ತದೆ. ಆದರೆ ನಿನ್ನೆ ಕುಡಿದ ಆ ಕಷಾಯವೂ ಕೈಕೊಟ್ಟುಬಿಟ್ಟಿತು. ಹಾಗಾಗಿ ಇಂದು ನೋವು ಒಂದಂಶವೂ ಕಡಿಮೆಯಾಗಿಲ್ಲ. ಬದಲಾಗಿ ಇನ್ನಷ್ಟು ಹೆಚ್ಚೇ ಆದ ಅನುಭವ. ಕೆಲವು ದಿನಗಳಿಂದ ವಾಸಿಯಾಗಿದೆಯೆಂದೆನಿಸುತ್ತಿದ್ದ ಗಂಟುನೋವು ಕೂಡ ಇದೇ ಸಂದರ್ಭವನ್ನು ನೋಡಿ ಮರುಕಳಿಸಿದಂತಿದೆ. ಜತೆಯಲ್ಲಿ ತಲೆನೋವು ಕೂಡ ಸೇರಿಕೊಂಡಿದೆ. ಅಬ್ಬಾ ! ಯಾರೋ ತಲೆಯೊಳಗಡೆ ಸುತ್ತಿಗೆಯಿಂದ ಎತ್ತೆತ್ತಿ ಬಾರಿಸುತ್ತಿರುವ ಅನುಭವ. ಇವೆಲ್ಲ ನಿದ್ದೆ ಸರಿಯಾಗಿ ಮಾಡದೇ ಇದ್ದುದರ ಪರಿಣಾಮವಿರಬಹುದು. ಒಂದು ಗ್ಲಾಸ್ ದೇಸಿ ಏರಿಸಿದರೆ ಸರಿಹೋಗಬಹುದು ಎಂದು ಅವನಂದುಕೊಂಡ. ಹಾಗಾಗಿ ಸಂಜೆ ಆಗುತ್ತಿದ್ದಂತೆ ಶರಾಫತ್ ಖಾನ್‌ನ ಗಡಂಗಿನ ಕಡೆಗೆ ಪಾದ ಬೆಳೆಸಿದ. ಒಂದು ಗ್ಲಾಸ್ ಎಂದಿದ್ದದ್ದು ಎರಡು ಬಾಟ್ಲಿಗೆ ಬಂದು ಮುಟ್ಟಿತು. ಆದರೆಲ್ಲಿ? ಒಂದು ನಯಾಪೈಸೆಯಷ್ಟು ನೋವು ಕಡಿಮೆಯಾದಂತನಿಸಲಿಲ್ಲ. ಅಮಲು ಏರುತ್ತಿರುವುದು ಅನುಭವಕ್ಕೆ ಬರುತ್ತಲೆ, ಇನ್ನು ನೋವು ಕಡಿಮೆಯಾಗುವುದು ಅಷ್ಟರಲ್ಲೇ ಇದೆ ಎಂದು ತನ್ನ ಗಲ್ಲಿಯತ್ತ ಹೆಜ್ಜೆ ಹಾಕತೊಡಗಿದ.

ನಿನ್ನೆ ರಾತ್ರಿಯಿಂದಲೇ ಮೈ ಸುಡ್ತಾ ಇದೆ. ಅದೆಂಥ ಜ್ವರವೋ ಏನೋ, ಆರು ಫೂಟಿನ ದೃಢಕಾಯನನ್ನು ಹಿಡಿದು ಉರುಳಿಸ್ತಿದೆ. ಅದ್ಹೇಗೋ ತನ್ನ ಡ್ಯೂಟಿ ಮುಗಿಸಿ ಬೆಳಗಾಗುತ್ತಲೆ ಸನಾತನ್ ಮನೆಯ ಕಡೆಗೆ ನಡೆದ. ಬೇರೆ ದಿನವಾಗಿದ್ದರೆ ಅವನು ಬಂಗಾಲಿ ರೆಫ್ಯೂಜಿ ಬೇಚು ಸಾಹಾನ ಅಂಗಡಿಯ ಕಡೆಗೆ ಹೋಗ್ತಿದ್ದ. ಅಲ್ಲಿ ನಾಲ್ಕೈದು ಜನರ ಜತೆ ಹರಟೆ ಹೊಡೀತಾ ಒಂದು ಪ್ಲೇಟ್ ತಿಂಡಿ ಜತೆ ಒಂದು ಗ್ಲಾಸ್ ಚಾ ಕುಡೀತ್ತಿದ್ದ. ಅದಾದಮೇಲೆ ಮೂರು-ನಾಲ್ಕು ಕಡೆ ಕಟ್ಟೆ ಪೂಜೆ ಮಾಡಿ, ಮೂರು-ನಾಲ್ಕು ಬೀಡಿ ಸೇದಿ ಮನೆ ಮುಟ್ಟುವಾಗ ಎಂಟೂವರೆ-ಒಂಬತ್ತು ಗಂಟೆ ಆಗ್ತಿತ್ತು.



ಆದರಿಂದು ಸನಾತನ್‌ಗೆ ಯಾರ ಜತೆಯೂ ಹರಟುವ ಮನಸ್ಸಿಲ್ಲ. ಹೋಟೆಲ್‌ಗೆ ಹೋಗಿ ಏನನ್ನಾದರೂ ತಿಂದು ಬರೋದಕ್ಕೆ ಮನಸ್ಸು ಕೇಳ್ತಾ ಇಲ್ಲ. ಹಾಗೆ ನೋಡಿದರೆ ನಿನ್ನೆ ರಾತ್ರಿಯಿಂದ ಅವನದು ಉಪವಾಸವೇ ಸರಿ. ಹಿಂದೆಲ್ಲಾ ಆಗಿದ್ದರೆ ಇಷ್ಟು ಹೊತ್ತಿಗವನು ಒಂದು ಕಟ್ಟು ಹುಲ್ಲು ಕೊಟ್ಟರೂ ತಿಂದು ಮುಗಿಸುತ್ತಿದ್ದ, ಆದರಿವತ್ತು ಊಟದ ನೆನಪು ಮಾಡಿದರೆ ವಾಂತಿ ಬಂದ ಹಾಗಾಗುತ್ತಿದೆ. ಅಂತೂ ಸನಾತನ್ ತನ್ನ ಮನೆ ಇರೋ ಗಲ್ಲಿ ತಲುಪಿದ.

ಬಸ್ ಸ್ಟ್ಯಾಂಡಿನಿಂದ ನೇರವಾಗಿ ಅರ್ಧ ಮೈಲು ಹೋದರೆ ನೆಹರೂ ಪಾರ್ಕ್ ಇದೆ. ಪಾರ್ಕ್‌ಗೆ ತಾಗಿಕೊಂಡಿದ್ದ ಇಕ್ಕಟ್ಟಾದ ಮಣ್ಣಿನ ರಸ್ತೆ ಸೀದಾ ಮುನಿಸಿಪಲ್ ಸ್ಕೂಲ್ ತನಕ ಹೋಗ್ತದೆ. ಆ ಶಾಲೆಯ ಪಕ್ಕದಲ್ಲಿರೋ ರಸ್ತೆಯಲ್ಲಿ ಎಡಗಡೆ ಹೊರಳಿದರೆ ಬರೋದೇ ಅವನಿರೋ ಗಲ್ಲಿ. ಅಲ್ಲಲ್ಲೇ ಮುದುರಿಕೊಂಡಿದ್ದ ಹಳೆಯ ಮನೆಗಳಿಂದಾಗಿ ಸಿಟಿಯೊಳಗೇ ಇದ್ದರೂ ಈ ಗಲ್ಲಿಗೆ ಅವರದೇ ಆದ ವೈಶಿಷ್ಟ್ಯವಿದೆ. ಕೆಮ್ಮಣ್ಣಿನ ಸಪೂರ ರಸ್ತೆಯ ಇಕ್ಕೆಲಗಳಲ್ಲಿ ಇಡೀ ಊರಿನ ಕಸ ಎಲ್ಲ ಬಂದು ರಾಶಿ ಬಿದ್ದಿರ್ತವೆ. ಗಲ್ಲಿಯೊಳಗೆ ಪ್ರವೇಶಿಸುತ್ತಿದ್ದಂತೆ ಅಲ್ಲಿಯ ದುರ್ಗಂಧಕ್ಕೆ ಮೂಗಿನ ಹೊರಳೆಗಳು ಒಡೆದುಹೋಗಬೇಕು.

ಸನಾತನ್ ನಿರ್ವಿಕಾರವಾಗಿ ಮುಂದುವರಿದ. ಅವನ ಮೂಗು ಅವನ್ನೆಲ್ಲ ಧಿಕ್ಕರಿಸಿ ಬಿಡುವಷ್ಟು ದುರ್ಗಂಧಕ್ಕೆ ಒಗ್ಗಿಹೋಗಿದ್ದವು. ಈ ಕೆಟ್ಟ ನಾತದಿಂದ ಅವನಿಗೀಗ ವಾಂತಿಯು ಬರುವುದಿಲ್ಲ, ಮತ್ತೆ ಮತ್ತೆ ಉಗುಳಬೇಕೆನಿಸುವುದೂ ಇಲ್ಲ. ಒಂದು ಕ್ಷಣ ಎರಡು ಬೆರಳುಗಳಿಂದ ಮೂಗು ಮುಚ್ಚಿಕೊಂಡು ಮತ್ತೊಂದು ಕ್ಷಣದಲ್ಲಿ ಬಿಟ್ಟುಬಿಡುವುದು ಮಾಮೂಲಾಗಿಬಿಟ್ಟಿದೆ, ಗತಾನುಗತಿಕ.

ಒರಿಯಾ ಮೂಲ : **ಸುಸ್ಮಿತಾ ಬಾಗಚಿ**
ಅನು : **ಡಾ॥ ಮಾಧವಿ ಎಸ್. ಭಂಡಾರಿ**

ಅಲ್ಲಿರುವವರಲ್ಲಿ ಸನಾತನ್ ಕ್ಯಾಕರಿಸಿ ಉಗುಳದೇ ದುರ್ಗಂಧವನ್ನು ಮಾತ್ರ ಸಹಿಸಿಕೊಳ್ಳುತ್ತಾನೆ, ಆದರೆ ಇನ್ನೊಬ್ಬರ ಮನಸ್ಸಿನೊಳಗೆ ಸೇರಿಸಿಕೊಂಡಿರುವ ಅಲ್ಪ-ಸ್ವಲ್ಪ ಕೊಳಕನ್ನೂ ಸಹಿಸಿಕೊಳ್ಳಲಾರ. ಅವರ ಕೇರಿಯಲ್ಲಿರುವ ಜನರ ಮನಸ್ಸಿನಲ್ಲಿ ಅದ್ಹೇಗೆ ಅಷ್ಟೊಂದು ಕೊಳಕು ತುಂಬಿಕೊಂಡಿದೆಯೆಂಬುದು ಅವನ ಪಾಲಿಗೆ ಬಿಡಿಸಲಾಗದ ಕಗ್ಗಂಟಾಗಿ ಉಳಿದಿದೆ. ಮನಸ್ಸು-ಮನಸ್ಸುಗಳ ನಡುವಿನ ಸಂಬಂಧವೇ ಅಲ್ಲಿ ಬೇವಿನಂತಹದು. ಚಿಕ್ಕ-ಚಿಕ್ಕ ವಿಷಯಕ್ಕೂ ದೊಡ್ಡ ಗಲಾಟೆ ಮಾಡೋದು ಮಾಮೂಲು; ತೋಳೇರಿಸಿಕೊಂಡು ಹೋಗುವುದರಲ್ಲಂತೂ ಅಲ್ಲಿರುವವರು ನಿಸ್ಸೀಮರು. ಪ್ರತಿ ಮೂರು-ನಾಲ್ಕು ದಿನಗಳಿಗೊಮ್ಮೆ ಅಲ್ಲಿಗೆ ಪೊಲೀಸರು ಭೇಟಿಕೊಡುವುದು ಸರ್ವೇಸಾಮಾನ್ಯ. ಹಾಗೆಯೆ ಮೂರು-ನಾಲ್ಕು ಜನರನ್ನು ಜೀಪಿಗೆ ಏರಿಸಿಕೊಂಡು ಹೋಗುವುದಂತೂ ಯಾವಾಗಲೂ ಇದ್ದದ್ದೇ.

ಯಾಕಾದರೂ ಇಲ್ಲಿಯ ಜನರು ಮಾತು ಮಾತಿಗೆ ರುದ್ರಾವತಾರ ತಾಳುತ್ತಾರೆ ? ಸನಾತನ್ ಈ ವಿಷಯದಲ್ಲಿ ಯಾರಿಗೆ ಏನು ಹೇಳಬಲ್ಲ? ಅವನ ಮನೆಯವರನ್ನೇ ಸುಧಾರಿಸುವುದು ಅವನಿಂದಾಗದ ಕೆಲಸ. ಯಾವಾಗ ನೋಡಿದರೂ ಗೌಜು-ಗಲಾಟೆ, ಜಗಳ-ಹೊಡೆದಾಟ.

ಮೊದಮೊದಲು ಹೆಂಡತಿಗೆ ಸ್ವಲ್ಪ ತಿಳಿಸಿ ಹೇಳೋದಕ್ಕೆ ಪ್ರಯತ್ನಿಸಿದ. ಆದರೆ ಆದರಿಂದ ಏನೇನೂ ಪ್ರಯೋಜನವಾಗಲಿಲ್ಲ. ಬದಲಾಗಿ ಸಿಟ್ಟಿನ ಜ್ವಾಲೆ ಇನ್ನಷ್ಟು ಭುಗಿಲೇಳತೊಡಗಿತು. ಹಾಗಾಗಿ ಸುಮ್ಮನಿರುವುದೇ ಕ್ಷೇಮವೆಂದು ಭಾವಿಸಿದ. ಈಗಂತೂ ಅವನೂ ಪಾರ್ವತಿಯ ತಾಳಕ್ಕೆ ಸರಿಯಾಗಿ ಹೆಜ್ಜೆ ಹಾಕುವುದನ್ನು ಕಲಿತಿದ್ದಾನೆ. ಅಷ್ಟೇ ಅಲ್ಲ, ಇಬ್ಬರು ಹೆಣ್ಣುಮಕ್ಕಳೂ ಅದನ್ನೇ ರೂಢಿಸಿಕೊಂಡಿದ್ದಾರೆ! ಹಾಗಾಗಿ ಅವನೀಗ ಯಾರನ್ನು ತಡೆಯಬಲ್ಲ, ಯಾರನ್ನು ಸರಿ ದಾರಿಗೆ ತರಬಲ್ಲ!

ದೀರ್ಘ ನಿಟ್ಟುಸಿರು ಬಿಟ್ಟು ಮನೆಯ ಹೊರಗಿರುವ ಪುಟ್ಟ ಜಗಲಿಯ ಮೇಲೆ ಹೋಗಿ ಕುಳಿತ. ಆಗಲೇ ಅಂಗಳ ಗುಡಿಸಿಯಾಗಿದೆ. ಹೊರಗಿನ ಬಾಗಿಲು ಅರ್ಧ ಮುಚ್ಚಿದೆ.

ವಾತಾವರಣವನ್ನು ಸೀಳಿಕೊಂಡು ಒಮ್ಮೆಲೆ ಮನೆಯೊಳಗಿಂದ ಹೊರಗೆ ಬಂದಂಥ ಕೂಗು ಸನಾತನ್‌ನ ಕೃಶಕಾಯವನ್ನು ಹಿಡಿದು ಅಲ್ಲಾಡಿಸಿಬಿಟ್ಟಿತು.

"ಅರೇ, ಓ ಲಕ್ಷ್ಮಿ, ಎಲ್ಲಿ ನೆಗೆದುಬಿದ್ದುಹೋದೆ ?" ತಡಿಕೆಯಿಂದ ಮರೆಮಾಚಿದ ಅಡಿಗೆಮನೆಯೊಳಗಿಂದ ಪಾರ್ವತಿಯ ಕರ್ಕಶ ಸ್ವರ ವಾತಾವರಣವನ್ನು ಸೀಳಿಕೊಂಡು ಹೊರಬಂತು... "ಕಿವಿಯೊಳಗೇನು ಕ್ವಿಂಟಾಲ್ ಹತ್ತಿ ತುಂಬಿಕೊಂಡಿದ್ದೀಯಾ ?"

ಬಹುಶಃ ದಟ್ಟ ಹೊಗೆಯಲ್ಲಿ ಅವಳಿಗೇನೂ ಕಾಣಿಸ್ತಿಲ್ಲ. ಆದರೆ ಹೊರ ಜಗಲಿಯ ಮೇಲಿದ್ದ ಸನಾತನ್‌ಗೆ ಬಾಗಿಲಿನ ಎಡೆಯಿಂದ ಎಲ್ಲವೂ ಸ್ಪಷ್ಟವಾಗಿ ಕಾಣಿಸ್ತಿದೆ. ಚಿಕ್ಕ ಕಿಟಕಿಯಿಂದ ತೂರಿಬರುವ

ಬೆಳಕಿನಲ್ಲಿ ಕನ್ನಡಿಯ ತುಂಡೊಂದನ್ನು ಹಿಡಿದುಕೊಂಡು ಅವನ ಮಗಳು ಲಕ್ಷ್ಮಿ ಕುಳಿತಿದ್ದಾಳೆ; ಅವಳ ಬಲಬದಿಯಲ್ಲಿ ಹರಿದ ಕೌದಿಯ ಮೇಲೆ ಕೈಕಾಲು ಬಡಿಯುತ್ತ ಮೊಮ್ಮಗಳು ಮಾಣಿಕ್ಯ ಆಟವಾಡ್ತಿದ್ದಾಳೆ. ಎಡಗಡೆಯಲ್ಲಿ ತಗಡಿನ ಒಂದು ಡಬ್ಬಿಯಲ್ಲಿ ಲಕ್ಷ್ಮಿಯ ಅಮೂಲ್ಯವಾದ ವಸ್ತುಗಳಿವೆ; ಕಾಡಿಗೆಯ ಚಿಕ್ಕದೊಂದು ಡಬ್ಬಿ, ಮದುವೆಯ ಸಂದರ್ಭದಲ್ಲಿ ಖರೀದಿಸಿದ ಪೌಡರಿನ ಡಬ್ಬಿ, ಹಿತ್ತಾಳೆಯ ಬಳೆಗಳು, ಕಪ್ಪಾಗುತ್ತಿರುವ ಕಾಲ್ಗೆಜ್ಜೆಯ ಜೋಡಿ, ಒಂದೆರಡು ಮಣಿಸರ. ಕೆಲವು ದಿನಗಳಿಂದ ಅದರಲ್ಲಿ ಇನ್ನೂ ಕೆಲವು ವಸ್ತುಗಳು ಸೇರ್ಪಡೆಗೊಂಡಿವೆ – ಕಡಿಮೆ ರೇಟಿನ ತುಟಿಬಣ್ಣ, ಉಗುರಿನ ಬಣ್ಣ, ಸೆಂಟು, ಒಂದೆರಡು ಜತೆ ಗಿಲೀಟಿನ ಬೆಂಡೋಲೆಗಳು. ಬೆಂಡೋಲೆಯೊಂದನ್ನವಳು ಕಿವಿಗೆ ಹಿಡಿದು ಕನ್ನಡಿಯಲ್ಲಿ ನೋಡುತ್ತಿದ್ದವಳು, ಮನದಲ್ಲೇ ಮುದಗೊಂಡು ಮತ್ತದನ್ನು ಜೋಪಾನವಾಗಿ ತಗಡಿನ ಡಬ್ಬಿಗೆ ಸೇರಿಸುತ್ತಿದ್ದಳು.

ಸನಾತನ್‌ಗೆ ಇವೆಲ್ಲವೂ ಗೊತ್ತು. ಆದರವನೇನು ಮಾಡಬಲ್ಲ? ದೇಹದ ದುರ್ಬಲತೆ ಕಣ್ಣುಗಳನ್ನು ಮಂಜಾಗಿಸಿಬಿಡುತ್ತದೆ. ಅವನಿಗರಿವಿಲ್ಲದೆ ಕಣ್ಣುಗಳು ಹನಿಗೂಡಿಬಿಡುವವು. ಅಂಗವಸ್ತ್ರದಿಂದ ಮುಖವನ್ನೊಮ್ಮೆ ಸರಿಯಾಗಿ ಒರೆಸಿಕೊಂಡ.


## Statement about ownership and other particulars about newspaper

FORM IV

| | | |
|---|---|---|
| 1. | Place of publication | : Bangalore |
| 2. | Periodicity of its publication | : Monthly |
| 3. | Printer's Name | : R. S. Rajaram |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 4. | Publisher's Name | : R. S. Rajaram |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 5. | Editor's Name | : G. Ramakrishna |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 6. | Name and address of individuals who own the newspaper and partners and shareholders holding more than one percent of the total capital | : Navakarnataka Publications (P) Ltd., Embassy Centre, Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2009


ಅಲ್ಲಿಯವರೆಗೆ ಪಾರ್ವತಿ ಹೊಗೆಯ ಆವರಣವನ್ನು ದಾಟಿ ಹೊರಗೆ ಬಂದಿದ್ದಳು. ಲಕ್ಷ್ಮಿ ತನ್ನ ಬೆಂಡೋಲೆಯನ್ನು ಕಿವಿಯ ಬಳಿಗೆ ಕೊಂಡೊಯ್ದು ಮುಗುಳುನಕ್ಕು ಮತ್ತದನ್ನು ಒಳಗಿಡುತ್ತಿದ್ದುದು ಇನ್ಯಾರೇ ನೋಡಿದರೂ ಮನಮೋಹಕವಾಗಿ ಕಾಣಬಹುದು, ಆದರೆ ಪಾರ್ವತಿಯ ಹೊಟ್ಟೆಯೊಳಗೆ ಮೆಣಸಿನ ಪುಡಿ ಹಾಕಿ ಕಲಸುತ್ತಿರುವಂತೆ ಭಾಸವಾಗುತ್ತಿತ್ತು. ಈ ವಸ್ತುಗಳು ಎಲ್ಲಿಂದ ಬರುತ್ತವೆಂಬುದು ಅವಳಿಗೆ ತಿಳಿಯದ ವಿಚಾರವೇ? ಮರ್ಯಾದೆಗೆಟ್ಟವಳಿಗೆ, ಎಲ್ಲವನ್ನೂ ಬಿಟ್ಟವಳಿಗೆ, ನಾಚಿಕೆ-ಗೀಚಿಕೆ ಇದ್ದರಲ್ಲವೇ?

''ಏನು ಮಹಾರಾಣಿಯವರು ಮುಂಜಾನೆಯಿಂದ ಸಿಂಗರಿಸಿಕೊಂಡದ್ದಷ್ಟೇನಾ? ಅಡಿಗೆಮನೆಯ ಕಡೆಗೂ ಒಂದಿಷ್ಟು ಕೃಪಾದೃಷ್ಟಿ ಬೀಳಲಿ! ಅಲ್ಲಿ ನಾನೊಬ್ಬಳೆ ಹೊಗೆಯಲ್ಲಿ ಸಾಯ್ತಿದ್ದೇನೆ. ಬಂದು ಒಂದಿಷ್ಟು ಸಹಾಯ ಮಾಡಬೇಕು ಅಂತಾ ಮನಸ್ಸು ಹೇಳೋದಿಲ್ಲವಾ? ಯಾವನಿಗಾಗಿ ಇಷ್ಟೆಲ್ಲ ಸಿಂಗಾರ!'' ಮಾತು ಮುಗಿಯುವಷ್ಟರಲ್ಲಿ ಸೆರಗನ್ನು ಸರಿಯಾಗಿ ಸೊಂಟಕ್ಕೆ ಸಿಕ್ಕಿಸಿಕೊಂಡು ಲಕ್ಷ್ಮಿ ಹೋರಾಟಕ್ಕೆ ಅಣಿಯಾಗಿಬಿಟ್ಟಳು. ''ಬೆಳ್ಳಂ ಬೆಳ್ಳಿಗ್ಗೆ ಅದೇನಾಯ್ತು ಅಂತ ಒದರಾಡ್ತಾ ಇದ್ದೀಯಾ? ನನ್ನಿಂದ ಅಷ್ಟೊಂದು ಅಡಿಗೆ ಮಾಡೋಕೆ ಸಾಧ್ಯವಿಲ್ಲ. ಇಡೀ ಮನೆ ಕೆಲಸ ನಾನೊಬ್ಬಳೇ ಮಾಡಬೇಕಾ? ಅಷ್ಟೊಂದು ಜೀವ ತೇಯೋದರಿಂದಾಗೋ ಲಾಭವಾದರೂ ಏನು? ಒಳ್ಳೆದೇನಾದರೂ ಮಾಡಿದರೆ ಶಾಭಾಸ್‌ಗಿರಿ ಕೊಡ್ತಿಯಾ? ಉಡುಗೊರೆ ಕೊಡ್ತಿಯಾ? ಒಳ್ಳೆಯದೇನಿದ್ದರೂ ಪುನಿಗೆ ಅಂತ ಅಡಗಿಸಿ ಇಡ್ತಿಯಾ! ಯಾಕಂದರೆ ಅವಳು ದುಡಿದು ತಂದು ಸುರಿವವಳು! ಈ ಕರ್ಮದ ಮಗುವೊಂದು ಹಗಲು-ರಾತ್ರಿ ನನ್ನ ಜೀವ ಹಿಂಡತಿದೆ. ಇಲ್ಲದಿದ್ದರೆ ನಾನೂ ದುಡಿದು ತರತಿದ್ದೆ. ಈಗಲೂ ಮೊಹಂತಿಬಾಬುನ ಮನೆಯವರು ಸಿಕ್ಕಸಿಕ್ಕವರ ಹತ್ತಿರ ಹೇಳ್ತಾರಂತೆ, ಲಕ್ಷ್ಮಿ ಕೆಲಸ ಮಾಡಿದಹಾಗೆ ಮಾಡುವವರು ಇನ್ಯಾರೂ ಇಲ್ಲ. ಸ್ವಲ್ಪ ದಿವಸ ತಡಕೊ, ಮಾಣಿಕ್ಯ ಸ್ವಲ್ಪ ದೊಡ್ಡದಾಗಲಿ, ಆಗ ನೀನೇ ನೋಡುವಿಯಂತೆ!... ನಾನೊಂದಿಷ್ಟು ಸಿಂಗಾರ ಮಾಡಿಕೊಂಡರೆ ನಿನ್ನೆದೆಯಲ್ಲೇನು ಉರಿಬೀಳ್ತದೆ?''

ಇದೇ... ಇದೇ... ಶುರು ಆಯ್ತು ಸುಪ್ರಭಾತ! ಏನೋ ಒಂದಿಷ್ಟು ಆರಾಮಾಗಿ ಕಳೆಯೋಣ ಅಂತ ಸನಾತನ್ ಮನೆಗೆ ಬಂದಿದ್ದ. ಆದರೆ ಬೆಳಗಾಗುತ್ತಲೆ ಗೌಜು-ಗಲಾಟೆ ಶುರು ಆಗಿಬಿಡ್ತು. ಬಾಯಿ ಮುಚ್ಚಿಕೊಂಡು ಸುಮ್ಮನಾಗಿ ಅಂತ ಯಾರಿಗೆ ಹೇಳೋದು, ಹೆಂಡತಿಗಾ... ಮಗಳಿಗಾ...?

''ಇಲ್ಲವೇ ಇಲ್ಲ, ನನ್ನೆದೆಯಲ್ಯಾಕೆ ಉರಿ ಬೀಳಬೇಕು? ನಿನಗಿಷ್ಟ ಬಂದಹಾಗೆ ಸಿಂಗಾರ ಮಾಡ್ಕೊ. ತುಟಿಗೊಂದಿಷ್ಟು ಹೆಚ್ಚೇ ಮೆತ್ತಕೋ, ಮೈಮೇಲೊಂದಿಷ್ಟು ಅತ್ತರ ಸುರಕೊ, ಕಿವಿಗೆ ಬೆಂಡೋಲೆ ತೂಗಿಸಿಕೊಂಡು ಗಲ್ಲಿ-ಗಲ್ಲಿಗೆ ಹೋಗಿ ಕುಣಿದಾಡಿ ಬಾ!'' ಇಷ್ಟು ಹೇಳಿದ ಪಾರ್ವತಿ ಸುಮ್ಮನಿರಬೇಕಲ್ಲ. ವ್ಯಂಗ್ಯದ ಬಾಣಗಳು ಇನ್ನಷ್ಟು ಪುಂಖಾನುಪುಂಖವಾಗಿ ಹೊರಬರ್ತಾನೇ ಇದ್ದವು... ''ಅಷ್ಟೇ ಅಲ್ಲ, ಸಾಧ್ಯವಾಗೋದಾದರೆ ಗೇಣು ಉದ್ದದ ನಿನ್ನ ಮಗುವನ್ನೂ ಎತ್ತಿಕೊಂಡು ಹೋಗು. ಇಬ್ಬರೂ ಸೇರಿಕೊಂಡು ಜಗಲಿ ಮೇಲೆ ಥಕ-ಥೈ ಅಂತ ಕುಣಿದಾಡಿ.''

ತಾಯಿ-ಮಗಳ ನಡುವೆ ಈ ರೀತಿಯ ಸಂವಾದವೂ ಸಾಧ್ಯವೇ? ಅಕ್ಕ-ಪಕ್ಕದಲ್ಲಿರೋ ಸಾಕಷ್ಟು ಮನೆಯವರ ಕಿವಿಗಳೆಲ್ಲ ಇತ್ತ ಕಡೆಯೆ ಇರಬಹುದು.

ಲಕ್ಷ್ಮಿ ಮುಖ ಸಿಂಡರಿಸಿದಳು. ''ಏನೋ ಗುರುತು-ಪರಿಚಯ ಇರುವವರ ಹತ್ತಿರ ಸ್ವಲ್ಪ ನಗ್ತಾ ಮಾತಾಡಿಬಿಟ್ಟರೆ ಆಕಾಶ ಕಳಚಿಬಿದ್ದುಬಿಡ್ತದೆ. ನನಗೇನು ಮಾಡಬೇಕು ಅನ್ನಿಸ್ತದೋ ಅದನ್ನೇ ಮಾಡ್ತೇನೆ. ನೀನ್ಯಾರು ಕೇಳೋದಕ್ಕೆ? ಅಷ್ಟಕ್ಕೂ ನೀನೇನ್ಮಾಡಿದ್ದೀಯಾ ನನಗೋಸ್ಕರ?''

ನಿಂತಲ್ಲೇ ಕಾಲು ಹುಗಿದುಹೋದವರಂತೆ ಪಾರ್ವತಿ ಅರೆಕ್ಷಣ ಸ್ತಬ್ಧಳಾಗಿಬಿಟ್ಟಳು. ಒಮ್ಮೆಲೆ ಸಾವರಿಸಿಕೊಂಡು ಕೈಯಲ್ಲಿದ್ದ ಕಸಬರಿಗೆಯನ್ನೆತ್ತಿಕೊಂಡು ಅವಳೆಡೆಗೆ ಧಾವಿಸಿದಳು – ''ಸುಟ್ಟ ಮುಖದವಳೆ, ನಾಚಿಕೆ ಬಿಟ್ಟವಳೆ, ಮರ್ಯಾದೆಗೆಟ್ಟವಳೆ... ಮಾಡೋದು ಮಣ್ಣು ತಿನ್ನೋ ಕೆಲಸ. ವೇದಾಂತ ಬೇರೆ ಮಾತಾಡ್ತೀಯಾ! ಯಾರು ನಿನ್ನನ್ನು ಇಷ್ಟು ದೊಡ್ಡ ಮಾಡಿದ್ದು? ಕುಡುಕ ಜುಗಾರಿ ಆಡೋ ನಿನ್ನಪ್ಪನಾ? ಅವನೋ, ಯಾವಾಗ ನೋಡಿದರೂ ಶೇಂದಿ-ಅಫೀಮು ಅಂತ ಮತ್ತೇರಿಸಿಕೊಂಡು ರಸ್ತೆ ಬದಿಯಲ್ಲಿ ಬಿದ್ದಿರ್ತಾನೆ! ನಾನೇ ಮನೆಮನೆಗೆ ಹೋಗಿ ಕಸಮುಸುರೆ ಮಾಡಿ ಅರೆಹೊಟ್ಟೆ ತಿಂದು ನಿನ್ನ ಹೊಟ್ಟೆ ತುಂಬಿಸಿ, ನಿನ್ನನ್ನ ಸಾಕಿ-ಸಲುಹಿ ದೊಡ್ಡವಳನ್ನಾಗಿ ಮಾಡ್ದೆ, ಮದುವೆ ಮಾಡಿಸ್ದೆ... ನೀನೇನು ಮಾಡ್ದಿ ಅಂತ... ನನ್ನ ಹತ್ರ ಕೇಳ್ತಿದ್ದಿಯಾ...?''

''ಓಹೋ... ಹೋ... ನಿನ್ನ ಪಾದ ತೊಳೆದ ನೀರು ಕುಡಿಬೇಕು, ನನ್ನ ಮದುವೆ ಮಾಡಿ ನನಗೆ ತಾಳಿ ಭಾಗ್ಯ ಕರುಣಿಸಿದ್ದಕ್ಕೆ! ನನಗೆ ಮದುವೆ ಮಾಡು, ಮಾಡು ಅಂತ ನಿನ್ನ ದುಂಬಾಲು ಬಿದ್ದಿದ್ದೆ ನೋಡು!... ಆ ಕರಿ ಮುಸುಡಿನವನು ಎಲ್ಲಿಂದ ಬಂದನಪ್ಪಾ ಅಂತ ನಾನೇ ಅವತ್ತು ನಿನ್ನ ಹತ್ರ ಕೇಳಿದ್ದು, ನೆನಪಾಯ್ತಾ? ಅವನ ಕೈಯಿಂದ ಮಾತ್ರ ತಾಳಿ

ಕಟ್ಟಿಸಿಕೊಳ್ಳೋದಿಲ್ಲ ಅಂತ ಗೋಗರೆದಿದ್ದೆ... ಆಗ ಕೇಳಿದ್ದಿಯಾ ನನ್ನ ಮಾತನ್ನ ?''

ಪಾರ್ವತಿ ಬಿಕ್ಕಿ-ಬಿಕ್ಕಿ ಅಳಲಾರಂಭಿಸಿದಳು – ''ಯಾರಿಗೆ ಗೊತ್ತಿತ್ತು... ಹಡೆದು ಬಾಳಂತನ ಮುಗಿಯೋಷ್ಟರಲ್ಲಿ ಅವನು ಊರುಬಿಟ್ಟು ಹೋಗ್ತಾನೆ ಅಂತ! ಎಲ್ಲಿಗೆ ಹೋಗಿ ಸತ್ತನೋ ಆ ಬುದ್ಧಿಗೇಡಿ! ಅವನ ಹೆಣ ಬಿದ್ದುಹೋಗಲಿ. ಅವನ ಬಾಯಲ್ಲಿ ಹುಳ ಬೀಳಲಿ. ಅವನ ಕೈಕಾಲು ಸ್ವಾಧೀನ ಕಳಕೊಂಡುಬಿಡಲಿ. ಸಾಯೋ ಕಾಲಕ್ಕೆ ಒಂದು ತೊಟ್ಟು ನೀರು ಕೇಳೋರು ಹತ್ತಿರ ಇಲ್ಲದೆ ಹೋಗಲಿ. ಎಲ್ಲರೂ ಛೀ... ಥೂ... ಅನ್ನೋ ಹಾಗಾಗಲಿ. ನನ್ನ ಮಗಳ ಬಾಳಿಗೆ ಕಿಚ್ಚಿಟ್ಟವನ ಮೇಲೆ ಆ ದೇವರು ಕನಿಕರ ತೋರ್‍ಸೋದಕ್ಕೆ ಸಾಧ್ಯವಾ... ?''

ಮಗಳ ಜತೆ ಜಗಳಾಡೋದಕ್ಕೆ ಬಂದ ವಿಚಾರವನ್ನು ಮರೆತ ಪಾರ್ವತಿ, ಹೆಂಡತಿ, ಮೊಮ್ಮಗುವನ್ನು ಬಿಟ್ಟು ಹೋದ ಅಳಿಯನಿಗೆ ಸಹಸ್ರನಾಮ ಹಾಕತೊಡಗಿದಳು.

ಹೀಗಾಗುವುದು ಇಂದಷ್ಟೆ ಅಲ್ಲ. ಇದು ಯಾವಾಗಲೂ ಇದ್ದದ್ದೆ. ಆದರೂ ಯಾಕೋ ಸನಾತನ್‌ಗೆ ಅಸಹ್ಯವೆನಿಸುತ್ತಿತ್ತು. ಅವನು ಅಲ್ಲಿಗೆ ಬಂದು ಆಗಲೇ ಒಂದು ಗಂಟೆಯಷ್ಟಾಗಿತ್ತು. ಒಳಗೆ ಹೋಗುವುದಕ್ಕೆ ಯಾಕೋ ಮನಸ್ಸು ಒಪ್ಪಲಿಲ್ಲ. ಹೊರಜಗಲಿಯ ಗೋಡೆಗೆ ಚಾಚಿಕೊಂಡು ಅಲ್ಲೇ ಸ್ವಲ್ಪ ಒರಗಿಕೊಂಡ. ಬಾಯಲ್ಲಿ ವಿಪರೀತ ಕಹಿ ಅನುಭವ. ಗಂಟಲಲ್ಲಿ ಪಸೆಯೆಲ್ಲ ಆರಿಹೋದಂತಿತ್ತು. ಒಂದೇ ಒಂದು ಗುಟುಕು ಒಣಶುಂಠಿ-ಕಂಕುಳೆಲೆಯ ಕಷಾಯ ಕುಡಿಯೋದಕ್ಕೆ ಮನಸ್ಸು ಹಂಬಲಿಸುತ್ತಿತ್ತು. ಆದರೆ ಬೇಕೆಂದು ಕೇಳೋದಕ್ಕೆ ಅವನು ಒಳಗೆ ಕಾಲಿಟ್ಟರೆ ಸಾಕು, ಪಾರ್ವತಿ ಅವನ ಹದಿನಾಲ್ಕು ಪೀಳಿಗೆಗಳ ಜನ್ಮ ಜಾಲಾಡಿಸದೆ ಬಿಡುವವಳಲ್ಲ. ಎಲ್ಲರಿಗೂ ಹಿಡಿ ಶಾಪ ಹಾಕಿಯೇ ನೆಮ್ಮದಿಯ ನಿಟ್ಟುಸಿರು ಬಿಟ್ಟಾಳು. ಹೆಂಡತಿಯ ಕೈಗೆ ಕೋಲು ಕೊಟ್ಟು ಹೊಡೆತ ತಿನ್ನೋದಕ್ಕೆ ಅವನಂತೂ ಸಿದ್ಧನಾಗಿರಲಿಲ್ಲ.

ನಿಶ್ಚಿತವಾದ ಯಾವುದೇ ಗೊತ್ತುಗುರಿಯಿಲ್ಲದೆ ಅವನಲ್ಲಿಂದ ಎದ್ದು ಬಂದ ದಾರಿಯೆಡೆಗೆ ಮುಖಮಾಡಿ ನಡೆಯತೊಡಗಿದ.

ಅರೆ ತೆರೆದ ಕಿಟಕಿಯ ಮೂಲಕ ಬಾಯೊಳಗಿದ್ದ ಎಲೆಯಡಿಕೆ ಉಗುಳಲು ಬಂದ ಪಾರ್ವತಿ ಕಣ್ಣುಗಳನ್ನು ಕಿರಿದುಮಾಡಿ ನೋಡಿದಾಗ ದೂರದಲ್ಲವ ಹೋಗುತ್ತಿರುವುದು ಕಾಣಿಸಿತು. ಕ್ಯಾಕರಿಸಿ ಉಗುಳಿ ಮತ್ತೆ ಬೊಬ್ಬೆ ಹೊಡೆಯಲಾರಂಭಿಸಿದಳು – ''ಮನೆಯೊಳಗಡೆ ಕಾಲಿಟ್ಟಿಲ್ಲ. ಮತ್ತೆಲ್ಲಿಗೆ ಹೋಗ್ತಿದ್ದೀಯೋ ? ಹೋಗುಹೋಗು, ಅಲ್ಲಿ ಬಾಟ್ಲಿ ಬಾಯ್ತೆರೆದು ಕಾಯ್ತಿರಬೇಕು. ಆ ಕೆಂಪುನೀರು ಕುಡೀದಿದ್ದರೆ ಹೇಗೆ ?... ಹೋಗು... ಹೋಗಿ ಸಾಯಿ... !'' ಧಡಾಮ್ ಎಂದು ಕಿಟಕಿ ಮುಚ್ಚಿ ತನ್ನಷ್ಟಕ್ಕೆ ಬಡಬಡಿಸಲಾರಂಭಿಸಿದಳು – ''ನನಗೆಲ್ಲಿಂದ ಗಂಟುಬಿದ್ದನೋ ಈ ಕುಡುಕ! ಇಲ್ಲಿ ನೋಡಿದರೆ ಮಗಳು ನಾಚಿಕೆ ಮರ್ಯಾದೆಯೆಲ್ಲ ನುಂಗಿ ನೀರು ಕುಡಿದು ರಾಜಾರೋಷವಾಗಿ ನನ್ನ ಮಾನ ಹರಾಜಿಗಿಟ್ಟಿದ್ದಾಳೆ. ಅಲ್ಲಿ ನೋಡಿದರೆ ಅಪ್ಪ ಇಪ್ಪತ್ನಾಲ್ಕೂ ಗಂಟೆ ಮತ್ತೇರಿಸಿಕೊಂಡು ಬಿದ್ದಿರ್‍ತಾನೆ. ಏರ್‍ತಾ ಇರೋ ನೀರು ಮೂಗಿನ ಮಟ್ಟಕ್ಕೆ ಬಂದಾಗಲೇ ಅವನಿಗೆ ಎಚ್ಚರಾಗಬಹುದು.''

ಹೆಂಡತಿಯ ಹೊಟ್ಟೆಯುರಿಸುವ ಮಾತುಗಳೆಲ್ಲ ಸನಾತನ್‌ಗೆ ಸ್ಪಷ್ಟವಾಗಿ ಕೇಳಿಸುತ್ತಿದ್ದವು. ಬೇರೆ ಯಾವುದಾದರೂ ದಿನವಾಗಿದ್ದರೆ ಅಲ್ಲಿಂದಲೆ ಅವನೂ ತಿರುಗೇಟು ಕೊಡುತ್ತಿದ್ದ ಅಥವಾ ಓಡಿಬಂದು ನಾಲ್ಕು ಬಾರಿಸ್ತಿದ್ದ ಇಲ್ಲವೆ ಒದೆ ಕೊಡ್ತಿದ್ದ. ಆದರಿಂದು ಕಿವಿ ಮೇಲೆ ಬಿದ್ದರೂ ಏನೇನೂ ಕೇಳಿಸಲಿಲ್ಲ. ಇನ್ನೂ ಸ್ವಲ್ಪ ದೂರ ಹೋಗುವಷ್ಟರಲ್ಲಿ ಹೆಂಡತಿಯ ಉರಿದುರಿದು ಬೀಳುವ ನುಡಿಯ ಅಬ್ಬರವೂ ಕಡಿಮೆಯಾಗುತ್ತ ಹೋಯಿತು.

ಆದರೆ ಬಾಸುಬಾಬುವಿನ ಅಶ್ಲೀಲ ಚುಚ್ಚುಮಾತುಗಳು ಹಾಗೂ ವ್ಯಂಗ್ಯಭರಿತ ನಗು ಇನ್ನೂ ಅವನ ಕಿವಿಯಲ್ಲಿ ಗುಂಯ್‌ಗುಡ್ತಿವೆ ''ಯಾಕೋ ಸನಾಭಾಯಿ, ನಿನ್ನ ಮಗಳು ಲಕ್ಷ್ಮಿ ಮನೆಯಲ್ಲೆ ವ್ಯಾಪಾರ ಶುರು ಮಾಡಿದ್ದಾಳಂತೆ. ಕೈ ಸಾಕಷ್ಟು ಬೆಚ್ಚಗಾಗ್ತಾ ಇರಬಹುದು !''

ಛೆ !...

ತಲೆಮೇಲೆ ಕೈ ಹೊತ್ತು ಪುಟ್ಟ ಜಲಾಶಯದ ಪಕ್ಕದಲ್ಲಿ ತೆಪ್ಪಗೆ ಕುಳಿತುಬಿಟ್ಟ. ಭಾದ್ರಪದದ ಉರಿ ಬಿಸಿಲು ನೆತ್ತಿಯ ಮೇಲೆ ನೇರವಾಗಿ ಚುಚ್ಚುತ್ತಿತ್ತು. ಆ ಹೊತ್ತಲ್ಲಿ ಅಲ್ಲಿಗೆ ಯಾರ್‍ಯಾರೂ ಬರುವುದಿಲ್ಲ. ಹಗಲಿನ ಹತ್ತು-ಹನ್ನೆರಡು ಗಂಟೆ ಹೊತ್ತಿಗೆ ಸುಡು ಬಿಸಿಲಲ್ಲಿ ಬೇಯೋದಕ್ಕೆ ಯಾರು ತಾನೇ ಬರ್‍ತಾರೆ ? ಅಲ್ಲಿಯ ಆ ಏಕಾಂತದಿಂದಾಗಿಯೆ ಸನಾತನ್‌ಗೆ ಆ ಸ್ಥಳ ಇಷ್ಟವಾಗುವುದು. ಬೆಳಿಗ್ಗೆ ಹೊಟ್ಟೆಗಿಳಿಸಿದ ಚಾ, ರೊಟ್ಟಿಯೆಲ್ಲ ಜೀರ್ಣವಾಗಿ ಹೊಟ್ಟೆ ಚುರುಗುಡುತ್ತಿದ್ದಂತೆ ಸೂರ್ಯ ಪಶ್ಚಿಮಾಭಿಮುಖವಾಗಿ ಸರಿಯತೊಡಗುತ್ತಾನೆ. ಅದೇ ಹೊತ್ತಿಗೆ ಅಲ್ಲೇ ಎರಡು ಬಾರಿ ಮುಳುಗುಹಾಕಿ ಅವನು ಮನೆಯ ಕಡೆಗೆ ಪಾದ ಬೆಳೆಸುತ್ತಾನೆ. ಪಾರ್ವತಿಯ ಕಹಿ ಮಾತುಗಳೊಂದಿಗೆ ರಾತ್ರಿ ನೀರು ಹಾಕಿಟ್ಟ ತಂಗಳನ್ನವನ್ನು ಹೊಟ್ಟೆ ತುಂಬ ತಿಂದು ಆಳ ನಿದ್ದೆಗೆ ಜಾರಿದರೆ ಮತ್ತವನಿಗೆ ಎಚ್ಚರ ಆಗೋದು ಐದೂವರೆ ಆರು ಗಂಟೆಗೆ! ಒಮ್ಮೊಮ್ಮೆ ಪಾರ್ವತಿಯ ಮನಸ್ಸು ಸ್ತಿಮಿತದಲ್ಲಿದ್ದರೆ ಅಲ್ಯೂಮಿನಿಯಮ್ ಲೋಟದಲ್ಲಿ ಹಾಲನ್ನೇ ಕಾಣದ ಚಾ ತಂದು ಎದುರಿಗಿಡುತ್ತಾಳೆ. ಜತೆಗೊಂದಿಷ್ಟು ಚುರುಮುರಿಯೂ ಇರ್‍ತದೆ. ಬಯಸಿದಾಗೆಲ್ಲ ಇದು ಸಿಕ್ಕೇಬಿಡುತ್ತದೆಂಬ ನಂಬಿಕೆಯಿಲ್ಲ. ಅನಂತರ ಅವಳು ಅಲ್ಲೇ ಕಾಲು ಚಾಚಿ ನೂರೆಂಟು ಸಮಸ್ಯೆಗಳಿಂದ ತುಂಬಿರುವ ಪೆಟ್ಟಿಗೆಯ ಬಾಗಿಲು ತೆರೆಯಲಾರಂಭಿಸುತ್ತಾಳೆ. ಹಾಂ... ಹೂಂ... ಎನ್ನುತ್ತ ಸನಾತನ್ ಎಲ್ಲವನ್ನೂ ಕೇಳಿಸಿಕೊಳ್ಳುತ್ತಾನಾದರೂ ಇಂದಿನವರೆಗೆ ಅವನಿಂದ ಯಾವ ಸಮಸ್ಯೆಗೂ ಪರಿಹಾರ ಸಿಕ್ಕಿಲ್ಲ. ಏಳು, ಏಳೂವರೆಯ ಸುಮಾರಿಗೇ ಅವನು ಶರಾಫತ್ ಖಾನ್‌ನ ಗಡಂಗಿಗೊಮ್ಮೆ ಭೇಟಿ ಕೊಟ್ಟು ಬರುವುದು ಮಾಮೂಲು. ಪಾರ್ವತಿ ಸುಳ್ಳು ಹೇಳುವುದಿಲ್ಲ. ಸನಾತನ್‌ಗೆ ಬೇರಾವ ಕೆಟ್ಟ ಚಟ ಇಲ್ಲವಾದರೂ ಕುಡಿತದ ಮಟ್ಟಿಗವನು ಸಾಚಾ ಅಲ್ಲ. ಇತ್ತೀಚೆಗವನು ಹೆಚ್ಚು ಕುಡಿದು ರಸ್ತೆಯ ಬದಿಯಲ್ಲಾಗಲಿ, ಚರಂಡಿಯಲ್ಲಾಗಲಿ ಉರುಳಿ ಬಿದ್ದ ದಾಖಲೆಯಿಲ್ಲ. ಹಾಗಂತ ಕೆಲಸಕ್ಕೆ ಹೋಗೋದನ್ನು ತಪ್ಪಿಸುವಂತಿಲ್ಲ! ಶರಾಫತ್ ಖಾನ್‌ನ ಗಡಂಗಿನಲ್ಲವನು ಒಂದು-ಒಂದೂವರೆ ಗಂಟೆ ಕಳೆಯುತ್ತಾನೆ. ಅಲ್ಲೇ ಅವನ ಇಡೀ ದಿನದ ಪರಿಹಾರವಾಗ್ತದೆ. ಅಲ್ಲಿಂದ ಹಿಂದಿರುಗಿ ಎರಡೇ ಎರಡು ತುತ್ತು ತಿಂದು ಕಾಲನಿಯ ಕಡೆಗೆ ಹೊರಟುಬಿಡ್ತಾನೆ.

ಕಾಲೊನಿ ಅಂದ್ರೆ ಬ್ಯಾಂಕ್ ಕಾಲನಿ!

ಇದು ಶಹರದ ದಕ್ಷಿಣ ಭಾಗದಲ್ಲಿದೆ. ಮೂರು ವರ್ಷದ ಹಿಂದೆ ಅಲ್ಲಿ ಕಟ್ಟಡ ಆಗ್ತಿರುವಾಗ ಪಾರ್ವತಿ ಹಾಗೂ ಮನೆಯಲ್ಲಿನ ಕಿರಿಕಿರಿಯಿಂದ ದೂರವಿರುವುದಕ್ಕಾಗಿ ಸನಾತನ್ ಒಂದು ಚಾದರ ಹೊತ್ತುಕೊಂಡು ಅಲ್ಲಿಗೆ ಹೋಗಿ ಮಲಗ್ತಿದ್ದ. ಅಲ್ಲಿರುವ ಇಬ್ಬರು ಕಾವಲುಗಾರರ ಕಣ್ಣಿಗೆ ಮಣ್ಣೆರಚಿ ಕಬ್ಬಿಣ ಕದ್ದೊಯ್ಯುವುದಕ್ಕೆ ಕಳ್ಳನೊಬ್ಬ ಬಂದಿದ್ದ. ಅಕಸ್ಮಾತ್ತಾಗಿ ಸನಾತನ್‌ಗೆ ಎಚ್ಚರಾಗ್ತಿದ್ದಂತೆ ಕಳ್ಳ ತನ್ನ ಕೆಲಸ ಮುಗಿಸಿಕೊಂಡು ಇನ್ನೇನು ಹೊರಡುವುದರಲ್ಲಿದ್ದ. ಅಷ್ಟು ಹೊತ್ತಿಗೆ ನಿಧಾನವಾಗಿ ಅವನಿದ್ದಲ್ಲಿಗೆ ಹೋಗಿ ತನ್ನ ಚಾದರದ ಸಹಾಯದಿಂದ ಅವನನ್ನು ಹೇಗೆ ಹಿಡಿದಿದ್ದ ಎಂಬುದನ್ನು ಈಗ ಕಲ್ಪಿಸಿಕೊಳ್ಳುವುದಕ್ಕೂ ಅವನಿಂದಾಗ್ತಾ ಇಲ್ಲ. ಆದರಿವನ ಸ್ವರ ಕೇಳಿ ನಿದ್ದೆಯಲ್ಲಿದ್ದ ಕಾವಲುಗಾರರಿಬ್ಬರೂ ದಡಬಡಿಸಿ ಎದ್ದು ಬಂದು ಕಳ್ಳನನ್ನು ಎಳೆದುಕೊಂಡು ಪೊಲೀಸರಿಗೆ ಒಪ್ಪಿಸಿಬಂದರು. ಆ ಘಟನೆಯನ್ನೂ ಸನಾತನ್ ಮರೆತುಬಿಡುತ್ತಿದ್ದನೇನೋ. ಆದರೆ ಮರುದಿನ ಮುಂಜಾನೆ ಕಾಲನಿಯ ಗುತ್ತಿಗೆದಾರರಿಂದ ಇವನಿಗೆ ಕರೆ ಹೋಯಿತು.



ಸನಾತನ್‌ನ ಕೈಮೇಲೆ ಹತ್ತು ರೂಪಾಯಿಯ ನೋಟನ್ನಿಟ್ಟು ಅವರು ಇವನನ್ನು ಹೊಗಳಿದ್ದೇ ಹೊಗಳಿದ್ದು. ಹಾಗೆಯೆ ಕೇಳಿಬಿಟ್ಟರು - ''ಅಂದ ಹಾಗೆ ಸನಾತನ್ ಈಗ ನೀನು ಏನ್ಮಾಡ್ಕೊಂಡಿದ್ದೀಯಾ ?''

ಕೇಳಿಸಿಕೊಂಡವನೆ ತಲೆ ಕೆರೆದುಕೊಳ್ಳಲಾರಂಭಿಸಿದ. ''ಏನೂ ಇಲ್ಲ ಯಜಮಾನರೆ. ಸಣ್ಣ-ಪುಟ್ಟ ಕೆಲಸ ಎಲ್ಲಿಯಾದರೂ ಸಿಕ್ಕರೆ ಮಾಡೋದು. ಇತ್ತಲಾಗಂತೂ ಎರಡು

ತಿಂಗಳಿಂದ ಯಾವ ಕೆಲಸಾನೂ ಇಲ್ಲ.''

''ಸಿಕ್ಕಿದರೆ ಮಾಡ್ತೀಯಾ ?''

ಅದೃಷ್ಟ ಈ ರೀತಿಯಲ್ಲಿ ಖುಲಾಯಿಸಬಹುದು ಅಂತ ಸನಾತನ್ ಕನಸುಮನಸ್ಸಲ್ಲಿಯೂ ಎಣಿಸಿರಲಿಲ್ಲ. ಅವರ ಪ್ರಶ್ನೆಗೆ ಬಾಯ್ಬಿಟ್ಟು ಯಾವ ಉತ್ತರವನ್ನೂ ಕೊಡದೆ ಹೂಂ ಎಂಬಂತೆ ತಲೆಯಾಡಿಸಿದ.

''ಇವತ್ತಿನಿಂದ ನೀನು ಹೊರಗಡೆ ಹಾಕಿರೋ ಇಟ್ಟಿಗೆ, ಕಬ್ಬಿಣ, ಕಲ್ಲು ಮತ್ತೆ ಓ ಅಲ್ಲಿರೋ ಸಿಮೆಂಟ್ ಚೀಲಗಳನ್ನೆಲ್ಲ ನೋಡಿಕೊಳ್ಳಬೇಕು. ಕಾಲನಿ ಆದ ತಕ್ಷಣ ನಿನಗೆ ವಾಚ್‌ಮೆನ್ ಕೆಲಸ ಕೊಡ್ತೇನೆ. ಎಂಟು ಗಂಟೆ ಕೆಲಸ. ಡ್ಯೂಟಿ ರಾತ್ರಿ ಮಾತ್ರ. ಹತ್ತು ಗಂಟೆಯಿಂದ ಬೆಳಿಗ್ಗೆ ಆರು ಗಂಟೆಯವರೆಗೆ. ಒಪ್ಪಿಗೇನಾ ?''

ಸನಾತನ್‌ಗೆ ಏನು ಹೇಳಬೇಕು ಅಂತ ಗೊತ್ತಾಗಲಿಲ್ಲ.

''ನೋಡು, ನರಸಿಂಹ ಮತ್ತು ಅನ್ವರ್ ಮೊದಲಿನಿಂದಲೇ ಇದ್ದಾರೆ. ಅವರಿಬ್ಬರೂ ಮೊದಲೆರಡು ಶಿಫ್ಟ್‌ನ ಡ್ಯೂಟಿಯನ್ನು ಮೊದಲೇ ಆರಿಸಿಕೊಂಡಿದ್ದಾರೆ. ನೀನೇನು ಹೇಳ್ತೀಯಾ ? ಮಾಡ್ತೀಯಾ ಅಥವಾ ಇಲ್ಲವೋ ?''

ಆದರೂ ಯಾಕೋ ಏನೋ ಸನಾತನ್‌ಗೆ ನಂಬಿಕೆಯೇ ಬರಲಿಲ್ಲ. ಒಳಗೊಳಗೇ ಗಿರಿಕಿ ಹೊಡೆಯುತ್ತಿದ್ದ ಮನಸ್ಸನ್ನು ನಿಯಂತ್ರಣಕ್ಕೆ ತಂದುಕೊಂಡು ಹೇಳಿದ, ''ಆಯ್ತು ಯಜಮಾನರೇ, ಖಂಡಿತವಾಗಿಯೂ ಮಾಡ್ತೇನೆ.''

ನಿಧಾನವಾಗಿ ಅರವತ್ನಾಲ್ಕು ಮನೆಗಳಿದ್ದ ಕಾಲನಿಯ ನಿರ್ಮಾಣವಾಯ್ತು. ಒಬ್ಬೊಬ್ಬರಾಗಿ ಬಂದು ಒಕ್ಕಲಾದರು. ಕೊನೆಗೆ ಎರಡೇ ಎರಡು ಮನೆಗಳು ಬಾಕಿ ಉಳಿದಿದ್ದವು. ಅವೆರಡನ್ನು ಸೇರಿಸಿ ಗೆಸ್ಟ್ ಹೌಸ್ ಮಾಡಲಾಯಿತು. ಹೊರಗಿನಿಂದ ಬಂದವರು ಯಾರಾದರೂ ಅಲ್ಲಿ ಅತಿಥಿಗಳ ರೂಪದಲ್ಲಿ ಒಂದೆರಡು ದಿನ ಇದ್ದು ಹೋಗ್ತಾರೆ.

ರಾತ್ರಿ ಎಚ್ಚರವಾಗಿದ್ದು ಕಾವಲುಗಾರಿಕೆ ಮಾಡೋದಕ್ಕೆ ಅವನದೇನೂ ಅಭ್ಯಂತರ ಏರಲಿಲ್ಲ. ಹಾಗೆ ನೋಡಿದರೆ ಅವನಿಗೆ ನಿದ್ದೆಯೂ ಸ್ವಲ್ಪ ಕಡಿಮೆಯೆ. ರಾತ್ರಿಯೆ ಮಲಗಬೇಕೆಂದು ಯಾರಾದರು ಕಾಯಿದೆ ಮಾಡಿದ್ದಾರಾ ? ಸಂಬಳವೂ ಚೆನ್ನಾಗಿದೆ. ಮೂರು ಮನೆಗಳಲ್ಲಿ ಪಾತ್ರೆ ತಿಕ್ಕಿ ಬರುವ ಪಾರ್ವತಿಯ ಸಂಬಳದಲ್ಲಿ ಇಷ್ಟು ಕಾಲ ಅವರ ದಿನ ಹೋಗ್ತಿತ್ತು. ಈಗ ಅವನ ಸಂಬಳವೂ ಸೇರಿದ್ದರಿಂದ ಮನೆಯ ಪರಿಸ್ಥಿತಿಯಲ್ಲೂ ಸುಧಾರಣೆಯಾಯ್ತು. ಮಗಳು ಲಕ್ಷ್ಮಿಯ ಮದುವೆ ಪರಶು ಜತೆ ನಿಕ್ಕಿಯಾಯ್ತು. ಪಾರ್ವತಿಯ ಸಣ್ಣ ತಮ್ಮ ಜದುವಾನೇ ನೆಂಟಸ್ತಿಕೆ ಮಾಡಲಿಕ್ಕೆ ಬಂದಿದ್ದ. ಹುಡುಗ ಸ್ವಲ್ಪ ಕಪ್ಪು. ಆದರೇನಂತೆ, ಇವಳೇನು ರೆಕ್ಕೆ ಕಳಚಿಬಿದ್ದ ಅಪ್ಸರೆಯಲ್ಲವಲ್ಲ! ಪ್ರಾಯವೇಟ್ ಬಸ್ಸಲ್ಲಿ ಕ್ಲೀನರ್ ಆಗಿದ್ದಾನೆ. ಎರಡು ಹೊತ್ತು ಊಟಕ್ಕಾಗುವಷ್ಟು ಸಂಬಳ ಇದೆ. ಮತ್ತಿನ್ನೇನು ಬೇಕು ? ಮನೆಯಲ್ಲಿ ಮತ್ತಿನ್ಯಾರೂ ಇಲ್ಲ ಅನ್ನೋದೇ ಬೇಸರದ ವಿಷಯ. ಅದಕ್ಕೆ ಜದುವಾ ಹೇಳೋದಿಷ್ಟೆ – ''ಒಳ್ಳೆಯದೇ ಆಯ್ತಲ್ಲವಾ, ನಮ್ಮದೇ ಸಾಮ್ರಾಜ್ಯ, ನಮ್ಮದೆ ಕೈ ನಮ್ಮದೆ ಬಾಯಿ.'' ಪರಶು ಫುಟಪಾಥ್ ಮೇಲೆ ಬೆಳೆದು ದೊಡ್ಡಾದವನು. ಅಮ್ಮ ಯಾರು ಅಪ್ಪ ಯಾರು ಅಂತ ಗೊತ್ತಿಲ್ಲ. ಹಾಗಾಗಿ ಹೆಣ್ಣು ಕೊಡೋದಕ್ಕೆ ಸನಾತನ್ ಮೊದಮೊದಲು ಹಿಂಜರಿದ, ಆದರೆ ಪಾರ್ವತಿ ಮತ್ತು ಜದುವಾನ ಮಾತು ಕೇಳಿ ತನ್ನ ಯೋಚನಾ ವಿಧಾನದಲ್ಲೇ ತಪ್ಪಿರಬಹುದೆಂದು ಭಾವಿಸಿದ. ನಿಜ ಹೇಳಬೇಕು ಅಂದ್ರೆ ಲಕ್ಷ್ಮಿಯಂತ ಕರ್‍ರಗಿನ ನರಪೇತಲ ಹುಡುಗಿಯನ್ನು ವರದಕ್ಷಿಣೆಯಿಲ್ಲದೆ ಮದುವೆಯಾಗೋದಕ್ಕೆ ಯಾರು ತಾನೆ ತಯಾರಾಗ್ತಾರೆ ? ಲಕ್ಷ್ಮಿ ಅತ್ತೂ ಕರೆದು ಅದೆಷ್ಟೆ ಗೋಗರೆದರೂ ಅದ್ಯಾವುದನ್ನೂ ಪರಿಗಣಿಸದೆ ಅವಳ ಮದುವೆ ಮಾಡಿಯೇಬಿಟ್ಟರು.

ಆ ಹೊತ್ತಿಗಾಗಲೆ ಸನಾತನ್‌ಗೆ ಇನ್ನೊಂದು ಕೆಲಸ ಸಿಕ್ಕಿಬಿಡ್ತು. ಒಂದಿನ ಬೆಳಿಗ್ಗೆ ಬೆಳಿಗ್ಗೆ ಹದಿನೆಂಟನೆಯ ನಂಬರಿನ ಮನೆಯ ಶ್ಯಾಮಸುಂದರ ಬಾಬು ಹೊಸದಾಗಿ ಖರೀದಿಸಿದ ಮಾರುತಿ ಕಾರನ್ನು ತೊಳೆತಾ ಇದ್ದರು. ಅವರ ಕೈಯಿಂದ ಬಟ್ಟೆ ಕಿತ್ತುಕೊಂಡು ಸನಾತನ್ ಗಾಡಿಯನ್ನ ಲಕಲಕಾ ಅಂತ ಬೆಳಗಿಸಿಟ್ಟ. ತಮಗಾದ ಸಂತೋಷದಿಂದಾಗಿ ಶ್ಯಾಮಸುಂದರ ಬಾಬುರವರು ಎರಡು ರೂಪಾಯಿ ನೋಟು ತೆಗೆದು ಅವನ ಕೈಗಿಟ್ಟರು. ಮಾರನೆಯ ದಿನ ಮುಂಜಾನೆ ಅವನನ್ನು ಹುಡುಕಿಕೊಂಡು ಹೋಗಿ ಆ ಕೆಲಸಕ್ಕಾಗಿ ತಿಂಗಳಿಗೆ ಐವತ್ತು ರೂಪಾಯಿ ಕೊಡ್ತೇನೆ ಎಂದರು. ಅವನ ಪ್ರಾಮಾಣಿಕವಾದ ಕೆಲಸದಿಂದಾಗಿ ನೋಡ್ತಾ ಇದ್ದಂತೆ ಅವನಿಗೆ ಮೂರು ಗಾಡಿ ತೊಳೆಯುವ ಕೆಲಸ ಸಿಕ್ಕಿಬಿಡ್ತು.

ಮೊಟ್ಟಮೊದಲನೆಯ ಬಾರಿ ಸನಾತನ್‌ಗೆ ತಿಂಗಳ ಕೊನೆಯಲ್ಲಿ ಕಿಸೆಯಲ್ಲಿ ಹಣ ಖಾಲಿಯಾಗದೆ ಉಳಿಯುತ್ತಿರುವ ಅನುಭವವಾಯಿತು. ಶ್ಯಾಮಸುಂದರ ಬಾಬುರವರ ಸಲಹೆಯ ಮೇರೆಗೆ ಅವನು ಬ್ಯಾಂಕ್‌ನಲ್ಲಿ ಖಾತೆ ತೆರೆದು ಹಣ ಇಡುವುದನ್ನೂ ಅರಿತುಕೊಂಡ. ಬಾಬುರವರ ಈ ಮಾತು ಎಷ್ಟೊಂದು ಅರ್ಥಪೂರ್ಣವಾದ್ದು ಎಂಬುದರ ಅರಿವು ಸನಾತನ್‌ಗೆ ಬಂದದ್ದು ಆಗಲೇ. ಹಾಗೆ ನೋಡಿದರೆ ಖಂಡಿತವಾಗಿಯೂ ಉಳಿತಾಯ ಮಾಡಿ ಮಿತವ್ಯಯಿಯಾಗಿ ಬದುಕುವುದು ಕೆಟ್ಟದ್ದಂತೂ ಅಲ್ಲ. ಒಂದು ರೀತಿಯಲ್ಲಿ ಅದು ಆಪದ್ಧನವಿದ್ದಂತೆ. ನೋಡ್ತಾ ಇದ್ದಂತೆ ಪುನಿ ಮದುವೆಗೆ ತಯಾರಾಗ್ತಾಳೆ. ಅವಳ ಮದುವೆ... ಮೊಮ್ಮಕ್ಕಳು... ಕಾಯಿಲೆ-ಕಸಾಲೆ ... ಮಾಟ – ಮದ್ದು... ನೆಂಟರಿಷ್ಟರು ... ದಿನ ಕಳೆದಂತೆ ಖರ್ಚು ಹೆಚ್ಚಾಗ್ತದೆಯೆ ವಿನಾ ಕಡಿಮೆಯಾಗೋ ಲಕ್ಷಣವಂತು ಖಂಡಿತ ಇಲ್ಲ. ಹಾಗಾಗಿ ಗಾಡಿ ತೊಳೆಯೋದ್ರಿಂದ ಬಂದ ದುಡ್ಡನ್ನೆಲ್ಲ ಸುಮ್ಮನೆ ಹೋಗಿ ಬ್ಯಾಂಕ್‌ನಲ್ಲಿ ಹಾಕಿಬಿಡ್ತಿದ್ದ. ಮನೆಯಲ್ಲಿ ಹೇಳಿಬಿಟ್ರೆ ಅದರ ಲೆಕ್ಕ ಕೊಡಬೇಕು. ಆ ಉಸಾಬರಿಯೆಲ್ಲ ಯಾಕೆ ಬೇಕು ! ತಾನೊಬ್ಬನೆ ಒಂದೆಡೆ ಕುಳಿತು ಲೆಕ್ಕಮಾಡಿಕೊಂಡು ಸಂತಸಪಡ್ತಿದ್ದ. ಪುನಿಗೀಗ ಹದಿನಾಲ್ಕು ವರ್ಷ. ಮೂರು-ನಾಲ್ಕು ವರ್ಷದಲ್ಲಿ ಅವಳ ಮದುವೆಯಾದರೆ ಒಂದು ಪವನ್ ಚಿನ್ನ ಹಾಕುವುದಕ್ಕಾದರೂ ಅವನ ಹತ್ತಿರ ಹಣವಿದೆಯಲ್ಲ! ಅವಳೊಬ್ಬಳಿಗೆ ಕೊಟ್ಟು ಕೈತೊಳೆದುಕೊಳ್ಳುವಂತಿಲ್ಲ. ಲಕ್ಷ್ಮಿಗೂ ಕೊಡಬೇಕಲ್ಲವಾ ? ಅವಳೆಲ್ಲಿ ಬಿಟ್ಟಾಳು, ಮುಖ ಊದಿಸಿಕೊಂಡು ರಂಪ-ರಾಮಾಯಣ ಮಾಡಿಯಾಳು. ಅದಕ್ಕಾಗಿಯೆ ಇಬ್ಬರಿಗಾಗಿ ಒಂದೇ ತರದ ಒಡವೆ ಮಾಡಿಸಿದರಾಯ್ತು.

ಆ ದಿನ ಗಾಡಿಗಳನ್ನೆಲ್ಲ ಸ್ವಚ್ಛಗೊಳಿಸಿದ ಮೇಲೆ ಗೆಸ್ಟ್‌ಹೌಸಿನ ಜಗಲಿಯ ಮೇಲೆ ಕುಳಿತ ಸನಾತನ್ ಹೀಗೇ ಏನೇನೋ ಯೋಚಿಸುತ್ತಿದ್ದ. ಅನ್ವರ್ ಅವನ ಹತ್ತಿರದಲ್ಲಿಯೆ ಬಂದು ಕುಳಿತುಬಿಟ್ಟ. ಅನ್ವರನದು ಮಧ್ಯಾಹ್ನದ ಶಿಫ್ಟ್. ಅಷ್ಟೇನೂ ವಯಸ್ಸಾಗಿಲ್ಲ ಇನ್ನೂ ತರುಣ. ಮದುವೆ,, ಮಕ್ಕಳು ಎಂಬಂಥ ಕರಕರೆಯೂ ಇಲ್ಲ. ಬೆಳಗ್ಗೆ ಬೇಗ ಬಂದವನು ಅವರಿವರ ಜತೆ ಕುಳಿತು ಹರಟುತ್ತ ಮಧ್ಯಾಹ್ನದ ಹೊತ್ತಿಗೆ ಗೇಟ್ ಬಳಿ ತಲುಪುತ್ತಾನೆ. ಹೆಚ್ಚಾಗಿ ಸನಾತನ್ ಬಳಿ ಕುಳಿತುಕೊಂಡು ಬೀಡಿ ಸೇದುತ್ತಾ ಊರಿನ ಟೆಂಟ್‌ಗಳಲ್ಲಿ ನಡೆಯುವ ಸಿನೇಮಾಗಳ ಬಗ್ಗೆ ಚರ್ಚೆ ಮಾಡ್ತಿರ್ತಾನೆ. ಆ ದಿನವೂ ಎಂದಿನಂತೆ ಸನಾತನ್ ತನ್ನ ಕಿಸೆಯಿಂದ ಬೀಡಿಯೊಂದನ್ನು ತೆಗೆದು ಅನ್ವರ್‌ನೆಡೆಗೆ ಸರಿಸಿದ. ತುಸು ಮುಗುಳುನಕ್ಕು ಬೇಡವೆಂಬಂತೆ ಅನ್ವರ್ ಕೈಯಾಡಿಸಿ ತನ್ನ ಕಿಸೆಯೊಳಗಿಂದ ವಿದೇಶೀ ಸಿಗರೇಟಿನ ಪ್ಯಾಕೇಟೊಂದನ್ನು ಹೊರ ತೆಗೆದ. ''ಇದು ಎಂಥ ಸಿಗರೇಟು ?'' ಸನಾತನ್‌ಗೆ ಕುತೂಹಲ ತಡೆದುಕೊಳ್ಳಲಾಗಲಿಲ್ಲ.

''ನಮ್ಮ ವಠಾರದ ರಹೀಮ್‌ಭಾಯಿ ಇದ್ದಾನಲ್ಲವಾ... ಅರೆ ನಿನಗೆ ರಹೀಮ್‌ಭಾಯಿ ಗೊತ್ತಿಲ್ಲವಾ ? ಅದೇ ಆ ಬೆಳ್ಳಗಿನ ಬೊಕ್ಕುತಲೆಯವನಿದ್ದಾನಲ್ಲವಾ; ನಾಲ್ಕು ವರ್ಷದ ಹಿಂದೆ ಅದೆಲ್ಲೋ ದುಬೈಗೋ ಗಿಬೈಗೋ ಹೋಗಿದ್ದನಲ್ಲವಾ, ಅವನು ಇಷ್ಟು ವರ್ಷಗಳ ನಂತರ ಹಿಂದಿರುಗಿ ಬಂದಿದ್ದಾನೆ, ಅದೂ ಝುಣ ಝುಣ ಝುಣ ಜೇಬುತುಂಬ ಹಣ ತುಂಬಿಸಿ ಕೊಂಡೇ ಬಂದಿದ್ದಾನೆ. ಮಾತು-ಮಾತಿಗೆ ದುಡ್ಡು ಬಿಸಾಕ್ತಾನೆ. ಇದು ಅವನೇ ಕೊಟ್ಟಿದ್ದು.''

''ಏನ ಹೇಳ್ತಾ ಇದ್ದೀಯಾ ? ನಾಲ್ಕು ವರ್ಷದಲ್ಲಿ ಅವನು ಇಷ್ಟೆಲ್ಲ ಗಳಿಸಿದ್ನಾ ?'' ಸನಾತನ್ ಪಾಲಿಗೆ ಇದಂತೂ ನಂಬಲಸಾಧ್ಯವಾದ ಮಾತು. ರಹೀಮ್‌ಭಾಯಿ ಹೇಳ್ತಾ ಇದ್ದ, ಅಲ್ಲಿ ದುಡ್ಡಿನ ರಾಶಿ ಬಿದ್ದುಕೊಂಡಿದೆಯಂತೆ. ಯಾರು ಎಷ್ಟು ಬೇಕಾದರೂ ಎತ್ತಿಕೊಳ್ಳಬಹುದಂತೆ. ಒಟ್ಟಿನಲ್ಲಿ ಹೋದಾಗೊಂದಿಷ್ಟು ದುಡ್ಡುಮಾಡಿಕೊಂಡು ಬರೋದಂತೆ. ನಾನೂ ಹೋಗ್ತಿದ್ದೆ. ಆದರೆ ಹೋಗೋದಕ್ಕೆ ಮೂರು ಸಾವಿರ ಬೇಕಲ್ಲವಾ.''

''ಮೂರು ಸಾವಿರ... ಅಷ್ಟೇನಾ !'' ಸನಾತನ್ ಒಮ್ಮೆಲೆ ಆನಂದತುಂದಿಲನಾದ. ಬ್ಯಾಂಕಿನಲ್ಲಿ ಅವನು ಕೂಡಿಟ್ಟ ಹಣ ಸರಿಸುಮಾರಾಗಿ ಎರಡು ಸಾವಿರದಷ್ಟಾಗಿದೆ.

ಅನ್ವರ್ ಮಾತು ಮುಂದುವರಿಸಿದ – ''ಹಾಂ... ರಹೀಮ್‌ಭಾಯಿ ಹೇಳ್ತಿದ್ದ, ಮೊದಲಿಗೊಂದಿಷ್ಟು ಕಾಗದಪತ್ರ ಆಗಬೇಕಂತೆ. ಆಮೇಲೆ ಹೋಗಬಹುದು.''... ಹೇಳ್ತಾ ಅನ್ವರ್ ಎದ್ದುನಿಂತ. ಹೊರಟವನು ಮತ್ತೆ ಮಾತು ಮುಂದುವರಿಸಿದ – ''ಒಂದು ಬೀಡಿ ಇತ್ತ ಬಿಸಾಕು, ಆ ಬೀಡಿಲಿರೋ ಸುಖ ಈ ಸಿಗರೇಟ್‌ನಲ್ಲಿಲ್ಲ, ಏನಂತಿಯಾ ?'' ಆ ದಿನ ಅನ್ವರ್ ರಹೀಮ್‌ಭಾಯಿ ಹಾಗೂ ದುಬೈ ಬಗ್ಗೆ ಹೇಳಿ ಸನಾತನ್‌ನ ಮನಸ್ಸಲ್ಲಿ ಆಸೆಯ ದೀಪ ಹೊತ್ತಿಸಿಹೋಗಿದ್ದ. ಸನಾತನ್ ಕುಳಿತಲ್ಲೆ ಯೋಚಿಸತೊಡಗಿದ, ಹೇಗಾದರೂ ಮಾಡಿ ತಾನೂ ವಿದೇಶಕ್ಕೆ ಹೋಗಿ ಮೈಮುರಿದು ದುಡಿದರೆ ಮನೆಯ ಪರಿಸ್ಥಿತಿ ಕಾಯಂ ಆಗಿ ಸುಧಾರಿಸಿಬಿಡಬಹುದು. ಮದುವೆಯ ಹೊತ್ತಲ್ಲಿ ಮನೆ ಕಟ್ಟಿಯೆ ಕಟ್ಟುತ್ತೇನೆ ಅಂತ ಪಾರ್ವತಿಗೆ ಮಾತುಕೊಟ್ಟಿದ್ದೆ. ಆ ಮಾತನ್ನೂ ನಡೆಸಿಕೊಡಬಹುದು. ಇಳಿವಯಸ್ಸಿಗಾಗಿಯೂ ಏನಾದರೂ ಕೂಡಿಡಲೇಬೇಕಲ್ಲ? ಗಂಡು ಮಗನಂತೂ ಇಲ್ಲ, ಇನ್ನೇನು ಅಳಿಯನ ಮನೆಯ ಛಾವಣಿ ಅಡಿಯಲ್ಲಿ ಕೊನೆಯ ದಿನಗಳನ್ನ ಕಳೆಯೋದಾ ?

ಛಿ... ಛಿ.

ಊಹೂಂ... ಏನೇ ಆಗಲಿ, ಅವನು ದುಬೈಗೆ ಹೋಗೇಹೋಗ್ತಾನೆ. ಖಾಯಂ ಆಗಿಯಂತೂ ಅಲ್ಲ, ಮೂರು-ನಾಲ್ಕು ವರ್ಷಗಳಮಟ್ಟಿಗೆ. ಆಮೇಲೆ ಹೇಗೂ ಬಂದೇ ಬರ್ತಾನೆ. ಪಾರ್ವತಿಗೆ ಎಲ್ಲವನ್ನೂ ಆದಷ್ಟು ಬೇಗ ಹೇಳಿಬಿಡಬೇಕು. ಅವನ ಮನಸ್ಸು ಚಡಪಡಿಸ್ತಾ ಇತ್ತು. ಆದರೆ ಅವಳು ಎಂಥ ಹೆಂಗಸೆಂದರೆ, ಇವನು ಹೇಳಿದ್ದನ್ನ ಪೂರ್ತಿಯಾಗಿ ಕೇಳದೇನೆ ಬ್ಯಾಂಕ್‌ನಲ್ಲಿಟ್ಟಿದ್ದ ದುಡ್ಡನ್ನ ಮೊದಲು ತಂದು ಬಿಸಾಕು ಎಂದು ಹೇಳಿದರೂ ಹೇಳಬಹುದು. ಹಾಗಾಗಿ ಈಗ ಹೇಳದೇ ಇರೋದೇ ಕ್ಷೇಮ.

ಸಂದರ್ಭ ನೋಡಿಕೊಂಡು ಸನಾತನ್ ಒಮ್ಮೆ ಶ್ಯಾಮಸುಂದರ ಬಾಬು ಅವರ ಹತ್ತಿರ ಮಾತಾಡಿದ. ಕೇಳಿ ಅವರು ನಕ್ಕುಬಿಟ್ರು. ಆದರೆ ಅವನ ದೃಢ ನಿರ್ಧಾರ ಕಂಡು ಆಶ್ಚರ್ಯ ಚಕಿತರಾಗಿಬಿಟ್ಟರು.

''ಇನ್ನು ಕೆಲವೇ ತಿಂಗಳಲ್ಲಿ ಹೋಗೋದಕ್ಕೆ ಹಣವೇನೋ ಆಗಬಹುದು. ಆದರೆ ಪಾಸ್‌ಪೋರ್ಟು, ವೀಸಾ, ವರ್ಕ್-ಪರ್ಮಿಟ್‌ಗೆಲ್ಲ ಎಲ್ಲಾ ಬೇಕು. ಮಾಡ್ತಿಯಾ ?''

''ಹೌದಾ ?'' ಏನೊಂದು ಅರ್ಥವಾಗದೆ ಸನಾತನ್ ಕಿವಿ ತುರಿಸಿಕೊಳ್ಳಲಾರಂಭಿಸಿದ.

''ವಿದೇಶಕ್ಕೆ ಹೋಗೋದಕ್ಕೆ ಅದರದ್ದೇ ಆದ ಕಾಗದಪತ್ರ ಆಗಬೇಕು, ನಿನಗದು ಗೊತ್ತಿಲ್ಲವಾ ?''

ಅರೆ, ಹೌದಲ್ಲವಾ, ಅನ್ವರ್‌ನೂ ಹಾಗೇ ಏನೋ ಹೇಳ್ತಾ ಇದ್ದ. ಆದರವನು ಹೇಳಿಕೇಳಿ ಹಳ್ಳಿ ಗಮಾರ. ಇದೆಲ್ಲ ಹ್ಯಾಗೆ ಅರ್ಥ ಆಗಬೇಕು ? ಸನಾತನನ ಕಳೆಗುಂದಿದ ಮುಖ ನೋಡಿ ಶ್ಯಾಮಸುಂದರ ಬಾಬುರವರಿಗೆ ಪಾಪ ಅನ್ನಿಸಿರಬೇಕು. ಅದಕ್ಕಾಗಿಯೆ ಸಮಾಧಾನದ ದನಿಯಲ್ಲೆಂದರು – ''ನೋಡಪ್ಪಾ, ನೀನು ಮೊದಲು ಹಣದ ವ್ಯವಸ್ಥೆ ಮಾಡಿಕೋ, ಕಾಗದಪತ್ರ ಮಾಡೋ ಬಗ್ಗೆ ಆಮೇಲೆ ನೋಡೋಣ.''

ಅವರ ಮಾತು ಕೇಳಿದ್ದೇ ತಡ ಕೃತಜ್ಞತಾಭಾವದಿಂದ ಅವನ ಮೈ ಪುಳಕಗೊಂಡಿತು.

ಆಮೇಲವನು ಹಗಲಿರುಳೆನ್ನದೆ ಮೈಮುರಿದು ದುಡಿಯಲಾರಂಭಿಸಿದ. ಉಳಿತಾಯದ ಮೊತ್ತವೂ ಗಾತ್ರದಲ್ಲಿ ದೊಡ್ಡದಾಯಿತು.

ಎಲ್ಲವೂ ಸುಸೂತ್ರವಾಗಿ ನಡೆಯುತ್ತಿತ್ತು. ಮೂರು ಹೊತ್ತು ಹೊಟ್ಟೆ ತುಂಬ ಊಟ, ಮನೆಯ ಸದಸ್ಯರಿಗೆಲ್ಲ ಬಟ್ಟೆ-ಬರೆ, ಔಷಧೋಪಚಾರ, ಮದುವೆ ಮಾಡಿಕೊಟ್ಟ ಮಗಳಿಗೆ ಆಗೀಗ ಸಣ್ಣ-ಪುಟ್ಟ ಖರ್ಚಿಗೆ ಚಿಲ್ಲರೆ ಕಾಸು ಇವೆಲ್ಲವನ್ನು ಹೆಚ್ಚೇನೂ ತೊಂದರೆಯಿಲ್ಲದೆ ಸನಾತನ್ ಸುರಳೀತವಾಗಿ ಹೊಂದಿಸಿಕೊಳ್ಳುತ್ತಿದ್ದ.

ತನ್ನ ಮಗುವಿಗೆ ಒಂದೂವರೆ ತಿಂಗಳಾಗುತ್ತಿದ್ದಂತೆ ಒಂದು ದಿನ ಲಕ್ಷ್ಮಿ ಕಣ್ಣೀರು ಸುರಿಸುತ್ತ ತವರು ಮನೆಗೆ ಬಂದಳು. ಅವಳ ಗಂಡ ಪರಶು ಕೆಲವು ತಿಂಗಳ ಹಿಂದೆ ಬೇರೊಬ್ಬಳು ಹುಡುಗಿಯ ಸಹವಾಸ ಮಾಡಿ ಅವಳ ಜತೆಗೆ ಪರಾರಿಯಾಗಿದ್ದಾನಂತೆ. ಏನೋ ಹುಡುಗಾಟ, ಇವತ್ತಲ್ಲ ನಾಳೆ ಪರಶು ಹಿಂದಿರುಗಿಬರಬಹುದು ಅಂತ ಸನಾತನ್ ತಿಳಿದಿದ್ದ. ಹೆಂಡತಿ ಮತ್ತು ಮಗಳ ವ್ಯಾಮೋಹ ಎಳೆಯದೆ ಇರ್ತದಾ ? ದಿನಗಳುರುಳಿದಂತೆ ನಿರಾಸೆಯೊಂದನ್ನು ಬಿಟ್ಟು ಇನ್ನೇನೂ ಕೈಗೆ ಹತ್ತಲಿಲ್ಲ.

ಮಗಳು ಕಣ್ಣೀರಿಡುತ್ತಿದ್ದಳು, ತಂದೆ ಸಮಾಧಾನದಿಂದ ತಲೆ ನೇವರಿಸುತ್ತಿದ್ದ – ''ಮಗಾ, ಅಳಬೇಡ. ನಿನಗೆ ಇಲ್ಲಿ ಯಾವುದಕ್ಕೂ ಕಡಿಮೆ ಮಾಡೋದಿಲ್ಲ. ನಾನೆಲ್ಲ ವ್ಯವಸ್ಥೆ ಮಾಡ್ತೇನೆ. ಆ ಸುಟ್ಟ ಮುಖದವನು ಹೋದರೆ ಹೋಗಲಿಬಿಡು. ನೀನು ಅಳಬೇಡ.''

ಮಗಳಿಗೇನೋ ಸಮಾಧಾನ ಮಾಡಿದ್ದ. ಆದರೆ ಅವನ ಮನಸ್ಸು ಮಾತ್ರ ಅಶಾಂತವಾಗಿತ್ತು. ಅವಳ ಮುಂದಿರುವ ಇಷ್ಟು ದೊಡ್ಡ ಬದುಕನ್ನು ಅವಳು ಹೇಗೆ ಕಳೆಯಬಹುದು ? ಮರುಮದುವೆಯಾಗುವ ರಿವಾಜಂತೂ ಅವರ ಜಾತಿಯಲ್ಲಿಲ್ಲ; ಇದ್ದಿದ್ದರೆ ಇದ್ದದ್ದನ್ನೆಲ್ಲ ಕೊಟ್ಟು ಅವಳ ಮದುವೆ ಮಾಡಿಸಿಬಿಡ್ತಿದ್ದ.

ದಿನ ಕಳೆಯುತ್ತಿದ್ದಂತೆ ಲಕ್ಷ್ಮಿ ಅಳುವುದನ್ನು ನಿಲ್ಲಿಸಿದಳು ! ಸನಾತನ್ ನಿಶ್ಚಿಂತನಾದ. ಆದರೆ ಅದೆಷ್ಟೋ ದುಶ್ಚಿಂತೆಗಳು ಅವನ ತಲೆಯೊಳಗೆ ತುಂಬಿಕೊಳ್ಳಲಾರಂಭಿಸಿದವು. ಅವಾಗಂತೂ ಲಕ್ಷ್ಮಿಯ ಅಂದಿನ ಅಳುವೇ ಅವನಿಗೆ ಹಿತವೆಂದೆನಿಸುತ್ತಿತ್ತು. ಸದಾ ಮಂದಹಾಸ ತುಂಬಿದ ಅವಳ ಮುಖ, ಗಂಟೆಗಟ್ಟಲೆ ಕನ್ನಡಿ ಬಿಟ್ಟು ಕದಲದ ಅವಸ್ಥೆ, ಇವೆಲ್ಲ ಹೊಸದಾಗಿ ಬರುವ ಯಾವುದಾದರೂ ಕೆಡುಕಿನ ಸಂಕೇತಗಳಿರಬಹುದೇ ?

ಸನಾತನ್ ತಲೆ ಚಚ್ಚಿಕೊಂಡ. ಅವನ ಸಂದೇಹ ಆಧಾರರಹಿತವಾಗಿರಲಿಲ್ಲ. ನಿನ್ನೆ ರಾತ್ರಿ ಸರಾಫತ್ ಖಾನ್‌ನ ಅಂಗಡಿಯಲ್ಲಿ ಅಮಲೇರಿದವನಂತೆ ಬಾಸುವಾ ಮಾತಾಡಿದ್ದು ಈಗಲೂ ಅವನ ಕಿವಿಯಲ್ಲಿ ಗುಂಯ್‌ಗುಡ್ತಿದೆ. ''ಲಕ್ಷ್ಮಿ ಏನಾದರೂ ಹೊಸ ಅಂಗಡಿ ತೆರೆದಿದ್ದಾಳಾ ?''

ಓಹ್ !

ಯಾವುದೋ ಡ್ರೈವರನ ಜತೆ ಲಕ್ಷ್ಮಿಯ ಸರಸ-ಸಲ್ಲಾಪ ನಡೀತಿದೆ ಅಂತ ಪಾರ್ವತಿ

ಹೇಳ್ತಿದ್ದಳು. ಆದರೆ ಅವನು ಕೇಳಿಯೂ ಕೇಳಿಸದವನಂತೆ ಸುಮ್ಮನಿದ್ದ. ಆದರೀಗ ಹೊರಗಿನವರೂ ಆಡಿಕೊಳ್ಳೊದಕ್ಕೆ ಆರಂಭಿಸಿಬಿಟ್ಟರು. ಹಾಗಿರುವಾಗ ಸುದ್ದಿ ಸುಳ್ಳಾಗೋದಕ್ಕೆ ಸಾಧ್ಯಾನಾ ?

ಸಾಧ್ಯವಿಲ್ಲ. ಈ ಊರೇ ಬಿಟ್ಟುಬಿಡಬೇಕು. ಯಾರಿಗೆ ಏನು ಬೇಕೋ ಅದನ್ನ ಮಾಡಿಕೊಂಡು ಸಾಯಲಿ. ಮಾನಗೆಟ್ಟ ಮಗಳ ಭಾನಗಡಿ, ಪಾರ್ವತಿಯ ನಂಜುತುಂಬಿದ ನುಡಿಗಳು ಇವೆಲ್ಲವುಗಳಿಂದ ಅವನಿಗೆ ಸಾಕಷ್ಟು ದೂರ ಹೋಗಬೇಕು ಅಂತ ಅನ್ನಿಸ್ತಿತ್ತು. ಸನಾತನ್ ಸಾಗರದಾಚೆಗಿನ ದುಬೈ ಬಗ್ಗೆ ಯೋಚಿಸತೊಡಗಿದ. ಆದಷ್ಟು ಬೇಗ ಬಾಬುರವರ ಹತ್ತಿರ ಹೋಗಿ ಕಾಗದಪತ್ರಗಳ ಬಗ್ಗೆ ಮಾತಾಡಿ ಬರಬೇಕು ಅಂದುಕೊಂಡ.

ಕಾಲುವೆಯ ಪಕ್ಕದಲ್ಲಿ ಅವನು ನಿಂತ.

ಆನಂತರದಲ್ಲಿ ಅವನ ದಿನಗಳು ಬಲುಬೇಗ ಕಳೆಯ ತೊಡಗಿದವು. ಒಂದು ಬಾರಿ ನಿರ್ಧಾರ ಮಾಡಿದ ಮೇಲೆ ಮತ್ತೆ ಮರುಪರಿಶೀಲನೆಗೆ ಅವಕಾಶವೇ ಇರಲಿಲ್ಲ. ಮನೆ, ಕಾಲನಿ, ಕಾರುಗಳ ಸಫಾಯಿ, ಮತ್ತೆ ಮನೆ. ನಿಯಮಿತ ವಾದ, ನಿರ್ಧಾರಿತವಾದ ಬದುಕಿಗೆ ಅವನು ತನ್ನನ್ನು ಒಗ್ಗಿಸಿಕೊಂಡಿದ್ದ. ಒಂದೆರಡು ಬಾರಿ ಅಕ್ಕ-ಪಕ್ಕದವರ ಬಿರುನುಡಿಗಳು ಅವನ ಮನಸ್ಸನ್ನು ಘಾಸಿಗೊಳಿಸಿಲ್ಲ ವೆಂದೇನಲ್ಲ. ಆದರೆ ಆಗೆಲ್ಲ ಅವನ ಕಿವಿಗಳಿಗೆ ಜೀವಂತಿಕೆಯೆಂಬುದೇ ಇರಲಿಲ್ಲ.

ಆ ದಿನ ಮಾಲಿಕರ ಕಾರು ತೊಳೆದು ಸನಾತನ್ ಮನೆಗೆ ಬಂದಾಗ ಅಲ್ಲೊಂದು ಕುರುಕ್ಷೇತ್ರವೇ ನಡೆಯುವಂತಿತ್ತು. ಪಾರ್ವತಿ ಹೊರ ಜಗುಲಿಯ ಮೇಲೆ ಕುಳಿತು ಎದೆ ಚಚ್ಚಿಕೊಂಡು ಅಳುತ್ತ ಆಕಾಶ ಪಾತಾಳ ಒಂದುಮಾಡುತ್ತಿದ್ದಳು. ಅಳುವಾಗ ನಡುನಡುವೆ ಲಕ್ಷ್ಮಿಗೆ, ಅವಳನ್ನು ಬಿಟ್ಟು ಹೋದ ಪರಶುಗೆ, ಮನೆಯ ಯಾವ ವಿಷಯವನ್ನೂ ಕಿವಿಯಮೇಲೆ ಹಾಕಿಕೊಳ್ಳದ ಸನಾತನ್‌ಗೆ ಬಾಯಿಗೆ ಬಂದಂತೆ ಬೈಯುತ್ತಿದ್ದಳು. ಮನೆಯ ಎದುರುಗಡೆ ಹೆಂಗಸರು ಮಕ್ಕಳೆನ್ನದೆ ಚಿಕ್ಕದೊಂದು ಸಮೂಹವೇ ಇತ್ತು. ಏನೆಂದು ಅರ್ಥವಾಗದ ಮಕ್ಕಳು ಅಲ್ಲೇ ಕಿರಿಕಿರಿ ಮಾಡುತ್ತಿದ್ದರು. ಪುನಿ ಸಿಟ್ಟಿನಿಂದ ಕುದಿಯುತ್ತಿದ್ದಳು.

ಸನಾತನ್‌ಗೆ ಎದೆಯಲ್ಲಿ ಬೆಂಕಿ ಬಿದ್ದಂತಾಯ್ತು. ಪುನಿ ಯಾಕಿವತ್ತು ಕೆಲಸಕ್ಕೆ ಹೋಗಲಿಲ್ಲ? ಅವಳು ಯಾವತ್ತೂ ಬೆಳಿಗ್ಗೆ ಬೇಗ ಹೋಗುವವಳು. ಇವತ್ತೇ ಯಾಕೆ ಮನೆಯಲ್ಲಿ ಉಳಿದಳು ? ಯಾಕೆ ಇಷ್ಟೊಂದು ಜನರು ನಮ್ಮ ಮನೆ ಮುಂದೆ ನಿಂತಿದ್ದಾರೆ ? ಪಾರ್ವತಿ ಅಳೋದಾದರೂ ಯಾಕೆ ? ಅವನ ಎದೆ ಜೋರಾಗಿ ಬಡಿದುಕೊಳ್ಳಲಾರಂಭಿಸಿತು. ಮೊಮ್ಮಗಳು ಅಂದ್ರೆ ಅವನಿಗೆ ತುಂಬಾ ಇಷ್ಟ. ಮಾಣಿಕಳಿಗೆ ಏನೂ ಆಗಿರದಿದ್ದರೆ ಸಾಕು. ಆದರವಳು ಪಕ್ಕದ ಮನೆ ಸಾವಿತ್ರಿಯ ಕಂಕುಳಲ್ಲಿದ್ದಾಳೆ. ಹಾಗಿದ್ದರೆ ಆದದ್ದಾದರೂ ಏನು ?

ಸನಾತನ್ ಎದುರಿಗೆ ಬರುತ್ತಿರುವುದನ್ನು ಕಂಡ ಪಾರ್ವತಿ ಮೈಮೇಲೆ ಬಂದವರ ಹಾಗೆ ಮಾಡ ತೊಡಗಿದಳು. ಮೈಮೇಲಿನ ಬಟ್ಟೆ ಅಸ್ತವ್ಯಸ್ತ, ಕೆದರಿದ ಕೂದಲು. ಅವನನ್ನು ನೋಡಿದ್ದೆ ತಡ ದನಿಯನ್ನು ಇನ್ನಷ್ಟು ಏರಿಸಿ ಮನಸ್ಸಿ ಬೈಗುಳಗಳ ಸುರಿಮಳೆಯನ್ನೆ ಸುರಿಸ ತೊಡಗಿದಳು. ಅವಳ ಬೊಬ್ಬೆಯ ಹಿಂದಿರುವ ಮರ್ಮವನ್ನು ಅರ್ಥಮಾಡಿಕೊಂಡ ಸನಾತನ್ ಒಮ್ಮೆಲೆ ಕಕ್ಕಾಬಿಕ್ಕಿಯಾಗಿಬಿಟ್ಟ.

ಕಳೆದೆರಡು ತಿಂಗಳುಗಳಿಂದ ಮಗಳು ಲಕ್ಷ್ಮಿಯ ಹಾವ ಭಾವಗಳಲ್ಲಾದ ಬದಲಾವಣೆ ಕಂಡು ಪಾರ್ವತಿಗೇನೋ ಸಂದೇಹ ಬಂದಂತಿತ್ತು. ಇತ್ತೀಚಿನ ದಿನಗಳಲ್ಲಿ ಅವಳ ಸಂದೇಹ ಸರಿಯಾದದ್ದು ಎಂಬುದಕ್ಕೆ ಪುರಾವೆ ಸಿಕ್ಕಿತ್ತು. ಲಕ್ಷ್ಮಿಗೀಗ ಎರಡು ತಿಂಗಳು. ಹೊಟ್ಟೆಯೊಳಗಿದ್ದುದನ್ನು ಹೊರಹಾಕಲು ಆ ಡ್ರೈವರ್ ಹುಡುಗ ಅದೇನೋ ಮದ್ದು ತಂದುಕೊಟ್ಟಿದ್ದನಂತೆ. ರಾತ್ರಿ ಅದನ್ನು ತಿಂದವಳು ಎಚ್ಚರದಪ್ಪಿ ಬಿದ್ದಿದ್ದಾಳೆ. ಬಾಯಿಂದ ನೊರೆ ಬರುತ್ತಿದೆ.



## ಚಿನ್ನದ ಮುಳ್ಳು

ಬಹಳಷ್ಟು ಆಸೆಪಟ್ಟು
ಮನಸಾರೆ ಇಷ್ಟಪಟ್ಟು
ಬೇಕುಬೇಕೆಂತಲೇ ತುಳಿದ
ಚಿನ್ನದ ಮುಳ್ಳು ನೀ
ಮುರಿದ
ಮುಳ್ಳಿನ ಮೊನೆ
ಉಳಿದುಬಿಟ್ಟಿದೆ
ಹೃದಯದೊಳಗೆ ಹಾಗೇ
ಚೂಪಾಗಿ... !
ಜೋಪಾನ ಮಾಡುತಿರುವೆ
ಇನಿತೂ
ನೋವಾಗದಂತೆ ನೋವಿನಲೇ
ಮುಳುಗಿದ್ದರೂ ನಾ
ಹಗಲಿರುಳು... !

ವಿ. ಹರಿನಾಥ ಬಾಬು
ಸದಾಶಿವನಗರ, ಸಿರುಗುಪ್ಪ - ೫೮೩ ೧೨೧

ಕಣ್ಣುಗುಡ್ಡೆ ಮೇಲಕ್ಕೆ ಹೋಗಿದೆ.

ಆ ಗಲ್ಲಿಯಲ್ಲಿ ಅತ್ಯಂತ ವಯೋವೃದ್ಧನೆಂದರೆ ಜಗಣ್ಣ. ಅವನು ಬಂದು ಸನಾತನ್‌ನ ಮೈದಡವುತ್ತ ಹೇಳಿದ - ''ಅಲ್ಲಯ್ಯ, ತಲೆಮೇಲೆ ಕೈಹೊತ್ತುಕೊಂಡು ಕುಳಿತು ಕೊಳ್ಳೋದರಿಂದ ಏನಾಗ್ತದೆ? ಲಕ್ಷ್ಮಿಯನ್ನು ಮೊದಲು ಆಸ್ಪತ್ರೆಗೆ ಸೇರಿಸು. ಬಚಾವಾದರೂ ಆಗಬಹುದು...''

ಸನಾತನ್ ನಿದ್ದೆಯಲ್ಲಿ ನಡೆದಾಡುವವನಂತೆ ಎದ್ದು ನಿಂತ. ಟ್ಯಾಕ್ಸಿ ತರಿಸಿ ಮಗಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋದ. ಆಗಿಂದ ಹಣ ಅನ್ನೋದು ಹೊಳೆಯ ಹಾಗೇ ಹರಿಯೋದಕ್ಕೆ ಆರಂಭವಾಯ್ತು. ಎಷ್ಟೇ ಕಷ್ಟ ಆದರೂ ಸರಿ ಕೂಡಿಟ್ಟ ಹಣಕ್ಕೆ ಕೈಹಚ್ಚಲೇಬಾರದು ಅಂತ ಅವನು ತೀರ್ಮಾನಿಸಿದ್ದ. ಆದರೆ ಲಕ್ಷ್ಮಿಗಾಗಿ ಹಣ ಖರ್ಚು ಮಾಡದೆ ವಿಧಿಯೇ ಇರಲಿಲ್ಲ. ಅವನ ಕಥೆ ಕೇಳಿ ಶ್ಯಾಮ ಸುಂದರ ಬಾಬುರವರು ಅವನಿಗೆ ಧೈರ್ಯ ಹೇಳಿದ್ದರು : ''ಮೊದಲು ಮಗಳ ಜೀವನ. ಆಮೇಲೆ ವಿದೇಶಿ ಪ್ರಯಾಣ.''

ಹದಿನೈದು ದಿನಗಳಲ್ಲಿ ಸನಾತನ್‌ಗೆ ತನ್ನ ಸೊಂಟ ಮುರಿದೇಹೋದ ಹಾಗಾಗಿತ್ತು. ವಯಸ್ಸು ಮೊದಲಿಗಿಂತ ಹತ್ತು ವರ್ಷ ಜಾಸ್ತಿಯಾದಂತಿತ್ತು. ಇಷ್ಟು ದಿನಗಳ ಅವನ ಆಸೆ, ಅವನ ಕನಸುಗಳು ಎಲ್ಲವೂ ಮುರುಟಿಹೋದ ಅನುಭವ. ಈಗವನು ಕಾರುಗಳನ್ನು ತೊಳೆದರೆ ಕೊಳೆ ಅಲ್ಲಿಯೆ ಮೆತ್ತಿಕೊಂಡಿರುತ್ತದೆ. ಕಿಟಕಿಗಳ ಗಾಜು ಸ್ವಚ್ಛವಾಗಿರುವುದಿಲ್ಲ. ಯಜಮಾನರಿಗೆ ಅವನ ಮೇಲೆ ಎಲ್ಲಿಲ್ಲದ ಕೋಪ. ಬೀಡಿ ಎಳೆಯುವಾಗ ಎಲ್ಲಿಯೋ ಮುಳುಗಿರುತ್ತಾನೆ. ಹಾಗಾಗಿ ಬೆರಳುಗಳ ಸಂದು ಸುಟ್ಟಾಗ ತಟ್ಟನೆ ಬೀಡಿ ಮೋಟನ್ನು ಬಿಸಾಡಿಬಿಡುತ್ತಾನೆ.

ಆ ದಿನ ಎಡಗೈಯಲ್ಲಿ ಬೀಡಿ ಇಟ್ಟುಕೊಂಡು ಗೆಸ್ಟ್ ಹೌಸಿನ ವರಾಂಡದಲ್ಲಿ ಕುಳಿತಿದ್ದನವ. ಅನ್ವರ್ ಬಂದು ಹತ್ತಿರದಲ್ಲಿಯೆ ಕುಳಿತುಕೊಂಡ. ಅವನ ಹಿಂದಿನಿಂದ ನರಸಿಂಹನೂ ಬಂದ. ಸನಾತನ್‌ಗೆ ಇದೇನಪ್ಪ ವಿಚಿತ್ರ ಎಂದೆನಿಸಿತು. ನರಸಿಂಹ ಗೇಟ್ ಬಿಟ್ಟು ಇತ್ತಕಡೆ ಬರಬಾರದಲ್ಲವಾ. ಇಂಥ ಹೊತ್ತಿನಲ್ಲಿ ಅವನು ಬರುವವನೂ ಅಲ್ಲ. ಯಾಕೆ ಬಂದಿರಬಹುದು ? ಒಮ್ಮೆ ಅವನ ಮುಖವನ್ನೇ ದಿಟ್ಟಿಸಿದವನು ಕೇಳಿಯೇ ಬಿಟ್ಟ- ''ಯಾಕಣ್ಣಾ, ಗೇಟ್ ತೆರೆದೇ ಇಟ್ಟುಬಂದಿದ್ದಿಯಲ್ಲ, ಯಾಕೆ ?''

ಗುಸು ಗುಸು ಮಾಡುತ್ತ ಅವನೇನೋ ಹೇಳಿದ. ಆದರದು ಸನಾತನನ ತಲೆಗೆ ಹೋಗಲಿಲ್ಲ. ಕೆಲಕಾಲ ಎಲ್ಲರೂ ಮೌನವಾಗಿಯೇ ಉಳಿದರು. ಒಂದೆರಡು ಬಾರಿ ಅನ್ವರ್ ಗಂಟಲು ಸರಿಪಡಿಸಿಕೊಂಡು ಏನನ್ನೋ ಹೇಳುವ ಪ್ರಯತ್ನ ಮಾಡಿದನಾದರೂ ಏನನ್ನೂ ಹೇಳಲಿಲ್ಲ. ಮುಖದಲ್ಲಿ ಮಾತ್ರ ಹೇಳಲೇಬೇಕೆಂಬ ಕಾತರ ಮನೆಮಾಡಿ ಕೊಂಡಂತಿತ್ತು. ಅಂತೂ ಹೇಳಿದ: ''ಅಂದಹಾಗೆ ಸನಾಭಾಯಿ, ನಿನ್ನ ದುಬೈಗೆ ಹೋಗೋ ಪ್ರೋಗ್ರಾಂ ಏನಾಯ್ತು? ರಹೀಮ್‌ಭಾಯಿಗೆ ನಾನು ಪತ್ರ ಕಳಿಸಿದ್ದೆ. ಅವನಿಂದ ಉತ್ತರ ಕೂಡ ಬಂದಿದೆ. ನೀನೊಂದು ಸಾರೆ ಇಲ್ಲಿಂದ ಹೋಗೋದನ್ನ ನೋಡಿಕೊಂಡರೆ ಮುಂದಿನದೆಲ್ಲ ಅವನು ಸಂಭಾಳಿಸ್ತಾನಂತೆ. ಕೆಲಸ ಸಿಗೋದಕ್ಕೂ ಯಾವ ಪ್ರೊಬ್ಲೆಮ್ ಇಲ್ಲವಂತೆ.''

ಸನಾತನ್ ಎಲ್ಲವನ್ನೂ ಕೇಳಿಸಿಕೊಂಡ. ಆದರೆ ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ. ಅವನು ಪ್ರತಿಕ್ರಿಯಿಸುವು ದಾದರೂ ಹೇಗೆ? ಈಗ ಬಾಕಿ ಉಳಿದಿರುವುದಾದರೂ

ಏನು ! ನರಸಿಂಹ ಅನ್ವರ್‌ನ ಮುಖ ನೋಡಿದ.

''ನಿಮ್ಮ ಲಕ್ಷ್ಮಿ ಈಗ ಹೇಗಿದ್ದಾಳೆ ?''

ಸನಾತನ್‌ನ ಮುಖಭಾವ ವಿಲಕ್ಷಣವಾಗಿತ್ತು. ''ಹಾಗೇ ಇದ್ದಾಳೆ.''

''ಅವಳಿಗಾಗಿ ಸಾಕಷ್ಟು ದುಡ್ಡು ಪೋಲಾಯ್ತಲ್ಲವಾ ?'' ಕೇಳುವಾಗ ಅನ್ವರ್ ತನ್ನ ದನಿಯಲ್ಲಿ ಸಾಕಷ್ಟು ದೈನ್ಯತೆಯನ್ನು ಬೆರೆಸಿದ್ದ.

ಈ ಬಾರಿ ಸನಾತನ್ ದೀರ್ಘ ನಿಟ್ಟುಸಿರುಬಿಟ್ಟ. ''ಇಷ್ಟು ದಿನ ಪರಿಶ್ರಮ ಮಾಡಿ ಕೂಡಿಟ್ಟ ಹಣವೆಲ್ಲ ನೀರಿಗೆ ಹಾಗೆ ಖರ್ಚಾಗಿಹೋಯ್ತು. ಒಮ್ಮೆ ದುಬೈಗೆ ಹೋಗಿ ದುಡಿದು ಒಂದಿಷ್ಟು ಸಂಪಾದಿಸಿಕೊಂಡು ಬಂದರೆ ಮುಂದಿನ ಬದುಕನ್ನ ನಿಶ್ಚಿಂತೆಯಾಗಿ ಕಳೆಯಬಹುದು ಅಂತಿದ್ದೆ. ಆದರೆ ದೇವರ ಮನಸ್ಸಲ್ಲಿ ಬೇರೆಯೇ ಇತ್ತು.''

''ಇಷ್ಟು ಬೇಗ ಸೋಲೊಪ್ಪಿಕೊಂಡರೆ ಹೇಗೆ ?''

''ಇಷ್ಟೊಂದು ಹಣ ಕೂಡಿಡೋದು ತಮಾಷೆನಾ ? ಎಷ್ಟು ವರ್ಷ ಸವೆಸಿದ್ದೇನೆ ಗೊತ್ತಾ? ಹಾಗೆ ಶ್ರಮ ಮಾಡಿ ಮತ್ತೆ ದುಡ್ಡು ಕೂಡಿಸಿದೆ ಅಂತ ಇಟ್ಕೊಳ್ಳಿ. ಅವಾಗ ಇನ್ನೇನಾದರೂ ಆಗಬಹುದು! ವಯಸ್ಸೂ ಆಗ್ತಾ ಬಂದಿದೆಯಲ್ಲವಾ ?''

''ಹಾಗೇಕಂತೀಯಾ ? ವರ್ಷೋಪತ್ತಿನಲ್ಲಿ ನೀನೆಣಿಸಿದ್ದಕ್ಕಿಂತ ಹೆಚ್ಚು ದುಡ್ಡು ಜಮಾ ಆಗ್ತದೆ.'' ಹೀಗೆ ಹೇಳುವಾಗ ನರಸಿಂಹನ ನಾಲಿಗೆ ತಡವರಿಸುತ್ತಿತ್ತು.

ಸನಾತನ್‌ಗೆ ನಗು ತಡೆಯಲಾಗಲಿಲ್ಲ, ಹೆಂಚು ಹಾರುವಷ್ಟು ಜೋರಾಗಿ ನಕ್ಕುಬಿಟ್ಟ - ''ವರ್ಷೋಪತ್ತಿನಲ್ಲ!''

ಸನಾತನ್‌ನ ಅಟ್ಟಹಾಸದ ನಗುವನ್ನು ಕಂಡು ಅವರು ಏನನ್ನು ಹೇಳೋದಕ್ಕೆ ಬಂದಿದ್ದರೋ ಅದನ್ನು ಬಲು ಸಂಕ್ಷಿಪ್ತವಾಗಿ ಹೇಳಿ ''ಯೋಚಿಸಿ ನೋಡು'' ಎನ್ನುತ್ತ ಚುರುಕಾಗಿ ಅಲ್ಲಿಂದ ಕಾಲ್ಕಿತ್ತರು.

ಅಂದು ಸನಾತನ್ ನಾಲೆಯ ಏರಿಯ ಮೇಲೆ ತುಂಬಾ ಹೊತ್ತು ಕುಳಿತಿದ್ದ. ಅವನ ತಲೆ ಮೊಸರಿನ ಗಡಿಗೆಯಾಗಿತ್ತು. ಕಣ್ಮುಂದೆ ರೊಕ್ಕ ಎಣಿಸುವ ಅಷ್ಟೊಂದು ದೊಡ್ಡ ದಾರಿ ಇದೆ. ಆದರೆ ಕೈ ಚಾಚುವ ಸಾಮರ್ಥ್ಯ ಅವನಲ್ಲಿಲ್ಲ. ಒಂದೆಡೆ ದುಬೈಗೆ ಹೋಗುವ ಆಕಾಂಕ್ಷೆ. ಇನ್ನೊಂದೆಡೆ ಅವನಲ್ಲಿರುವ ಮಾನವೀಯ ತುಡಿತ.

ಸನಾತನ್ ತುಂಬಾ ಅಂದ್ರೆ ತುಂಬಾ ಪಾಪದವನು. ಇಷ್ಟು ದೊಡ್ಡ ಆಮಿಷವನ್ನು ದೂರ ತಳ್ಳುವುದು ಅವನಿಂದ ಸಾಧ್ಯವಾಗಲಿಲ್ಲ. ಮರುದಿನ ಮುಂಜಾನೆ ಅನ್ವರ್ ಹಾಗೂ ನರಸಿಂಹನನ್ನು ಕಂಡು ತನ್ನ ಸಮ್ಮತಿಯನ್ನು ಸೂಚಿಸಿದ.

ಸನಾತನ್‌ಗೆ ಅವರು ಕೊಟ್ಟ ಕೆಲಸವಿಷ್ಟೆ, ರಾತ್ರಿಯ ಹನ್ನೊಂದು ಗಂಟೆಯ ಸುಮಾರಿಗೆ ನರಸಿಂಹ ಅಲ್ಲಿಗೆ ಬಂದಾಗ ಕಾವಲುಗಾರನ ಹತ್ತಿರವಿರುವ ಬೀಗದ ಕೈ ಗೊಂಚಲಿನಿಂದ ಗೆಸ್ಟ್ ಹೌಸ್‌ನ ಬೀಗದ ಕೈ ತೆಗೆದು ಅವನ ಕೈಗಿಡುವುದು. ಅಲ್ಲಿಗೆ ಅವನ ಕೆಲಸ ಮುಗಿಯಿತು.

ಅವನ ಗಲ್ಲಿಯ ಕೆಲವು ಹುಡುಗಿಯರನ್ನು ಕರೆದುಕೊಂಡು ಬರುವಂತೆ ಇಲ್ಲಿಯ ಸಾಹುಕಾರರು ತನಗೆ ತಿಳಿಸಿರುವುದಾಗಿ ನಸುನಗುತ್ತ ಧ್ವನಿಯಲ್ಲೊಂದಿಷ್ಟು ದೃಢತೆಯನ್ನು ತಂದುಕೊಂಡು ನರಸಿಂಹ ಹೇಳಿದ - ''ಸನಾಭಾಯಿ, ಯಾರಿಗೂ ಏನೂ ಗೊತ್ತಾಗೋದಿಲ್ಲ. ಎಷ್ಟೋ ಜನರು ಬಂದು ಹೋಗ್ತಾರೆ. ಅವರು ಬಂದಹಾಗೆಲ್ಲ ನೀನು ಒಳಗಡೆ ಬಿಟ್ಟುಬಿಡು. ಒಂದು ರಾತ್ರಿಗೆ ಹತ್ತು ರೂಪಾಯಿ. ಒಂದು ವರ್ಷಕ್ಕೆ ನಿನಗೆ ಬೇಕಾದಷ್ಟು ದುಡ್ಡು ಆಗ್ತದೋ ಇಲ್ಲವೋ ನೀನೇ ಯೋಚನೆ ಮಾಡು.''

ಅದು ಮೊದಲನೆಯ ರಾತ್ರಿ. ಕೃಷ್ಣ ಪಕ್ಷವೇ ಇರಬೇಕು. ದಟ್ಟವಾದ ಕತ್ತಲು ಆವರಿಸಿತ್ತು. ಗೇಟಿನಲ್ಲಿರೋ ಎರಡು ದೀಪಗಳಲ್ಲಿ ಒಂದರ ಫ್ಯೂಸ್ ಹೋಗಿತ್ತು. ಇನ್ನೊಂದರ ಮೇಲೆ ಧೂಳು ಮೆತ್ತಿಕೊಂಡಿದ್ದರಿಂದ ಬೆಳಕು ತುಂಬಾ ಮಂದವಾಗಿತ್ತು. ಅರ್ಧ ತೆರೆದುಕೊಂಡಿದ್ದ ಗೇಟಿನ ಬಳಿ ಸ್ಟೂಲ್ ಮೇಲೆ ಕುಳಿತುಕೊಂಡು ಸನಾತನ್ ಬೀಡಿ ಹಚ್ಚುತ್ತಿದ್ದ.

ದೂರದಲ್ಲಿ ನರಸಿಂಹ ಬರುತ್ತಿರುವುದನ್ನು ಕಂಡವನೆ ಬೀಡಿಯನ್ನು ಬಿಸಾಡಿದ. ಗಲಿಬಿಲಿಗೊಂಡವನ ಮನಸ್ಸಿನ ತಳಮಳ ಹೇಳತೀರದು. ನರಸಿಂಹನ ಹಿಂದೆ ಪ್ಯಾಂಟು-ಶರ್ಟು ಧರಿಸಿದ್ದ ಒಂದಿಬ್ಬರು ಬರುತ್ತಿರುವುದು ಕಾಣಿಸಿತು. ಅವರಿಗಿಂತ ಸ್ವಲ್ಪ ದೂರದಲ್ಲಿ ಇಬ್ಬರು ಹುಡುಗಿಯರು; ಅವರಿಬ್ಬರು ಅವನ ಕಣ್ಣಿಗೆ ಲಕ್ಷ್ಮಿ ಮತ್ತು ಪುನಿಯ ಹಾಗೆ ಕಂಡರು. ಒಮ್ಮೆಲೆ ಹೊಟ್ಟೆಯಲ್ಲಿ ತಳಮಳ ಜೋರಾದಂತಾಯಿತು. ಈ ಇಬ್ಬರು ನರಸಿಂಹನ ಗಲ್ಲಿಯವರಂತೆನಿಸದೆ, ತನ್ನದೆ ರಕ್ತ ಹಂಚಿಕೊಂಡು ಹುಟ್ಟಿದ ಮಕ್ಕಳಂತೆ ಕಂಡರು.

ಸಿಡಿಲಿನಬ್ಬರದಂತೆ ಕೂಗಿಬಿಟ್ಟ – ''ಓಡು, ಓಡು ಇಲ್ಲಿಂದ, ನಾನ್ಯಾರಿಗೂ ಒಳಗಡೆ ಬರೋದಕ್ಕೆ ಬಿಡೋದಿಲ್ಲ''

''ಸನಾಭಾಯಿ ನಾನು ನರಸಿಂಹ! ಬೇರೆ ಯಾರೋ ಬಂದಿದ್ದಾರೆ ಅಂತ ತಿಳಕೊಂಡಬಿಟ್ಯಾ ?'' ನರಸಿಂಹ ನಗುವ ಪ್ರಯತ್ನ ಮಾಡಿದ.

''ಕಳ್ಳ ಬಡ್ಡಿಮಗನೆ... ಹೆಂಗಸರ ದಲ್ಲಾಳಿ ಮಾಡ್ತಿಯಾ ?... ನನ್ನ ಮಗಳ ಮೇಲೆ ಯಾರಾದರೂ ಕಣ್ಣು ಹಾಕಿದರೆ ನಾನವರ ಕಣ್ಣು ಕಿತ್ತುಬಿಡ್ತೇನೆ. ನನಗೆ ಹಣದ ಆಮಿಷ ತೋರಿಸ್ತಿಯಾ ?''

ಸನಾತನನ ದನಿ ತಾರಕಕ್ಕೆ ಏರಿತ್ತು. ಸುತ್ತಲಿರುವ ಹಲವು ಮನೆಗಳ ದೀಪ ಹೊತ್ತಿಕೊಂಡಿತು. ವಿಷಯ ಏನು ಎಂದು ತಿಳಿದುಕೊಳ್ಳೋದಕ್ಕೆ ಸುತ್ತಲಿರುವ ಹಲವು ಮನೆಯವರು ಎದ್ದು ಬಂದರು. ಇಲ್ಲ... ಇನ್ನಿಲ್ಲಿ ನಿಲ್ಲುವುದು ಕ್ಷೇಮವಲ್ಲ ಎಂದು ನರಸಿಂಹ ಓಡಲಾರಂಭಿಸಿದ. ಅವನ ಹಿಂದಿನಿಂದ ಉಳಿದವರೂ ಓಡತೊಡಗಿದರು. ರಾತ್ರಿ ಕತ್ತಲಲ್ಲಿ ಅವರು ಮರೆಯಾದದ್ದು ಕಂಡು ನಿರಾಳಗೊಂಡು ಗೇಟ್‌ಗೆ ಬೀಗ ಹಾಕಿದ.

ಅಂದು ಸನಾತನ್ ಕೂಗಿದ್ದನ್ನು ಕೇಳಿಸಿಕೊಂಡವರು ಹೆಚ್ಚೇನೂ ತಲೆಕೆಡಿಸಿಕೊಂಡಿರಲಿಲ್ಲ. ಆದರೆ ಮಾರನೆಯ ದಿನ ನರಸಿಂಹ ಹಾಗೂ ಅನ್ವರ್ ಮನೆ-ಮನೆಗೆ ಹೋಗಿ ಪ್ರತಿಯೊಬ್ಬರಿಗೂ ಬಿಡಿಸಿ ಹೇಳಿದರು - ''ಅಯ್ಯೋ ನಿಮಗೆ ಗೊತ್ತಿಲ್ಲ, ಅವನು ಮಹಾ ಕುಡುಕ! ತಲೆ ಬೇರೆ ಸರಿಯಿಲ್ಲ, ಹೊರಗಿನಿಂದೇನೂ ಗೊತ್ತಾಗೋದಿಲ್ಲ. ಕುಡಿದದ್ದು ಒಳಗಡೆ ಸೇರಿದ್ದೇ ತಡ ಅವನ ನಿಜ ರೂಪ ಬಯಲಾಗಿಬಿಡ್ತದೆ. ಶುರು ಆಗಿಬಿಡ್ತದೆ, ಗೌಜು-ಗದ್ದಲ, ಬೊಬ್ಬೆ-ಬೈಗುಳ, ಒಂದೋ-ಎರಡೋ... ನಮ್ಮ ವಿಚಾರ ಬಿಡಿ, ಹೇಳಿ-ಕೇಳಿ ನಾವು ಮಡ್ಡು ತಲೆಯವರು. ನಮಗೆ ಅಂತಸ್ತು ಅನ್ನೋದಿಲ್ಲ, ಆದರೆ ಸಾಹುಕಾರ ಮಂದಿಗೆ, ಹೆಂಗಸರಿಗೆಲ್ಲ ಬೈಯ್ಯೋದಂದ್ರೆ...'' ಅವರಿಗೆ ಇನ್ನೇನೂ ಹೆಚ್ಚಿಗೆ ಹೇಳಬೇಕಾಗಿ ಬರಲಿಲ್ಲ.

ಅನಂತರದ ಘಟನೆ ಅತ್ಯಂತ ಸಂಕ್ಷಿಪ್ತವಾದದ್ದು. ಸನಾತನ್ ತನ್ನ ಡ್ಯೂಟಿಯನ್ನು ಚೆನ್ನಾಗಿ ನಿರ್ವಹಿಸೋದಿಲ್ಲ; ಅತಿ ಹೆಚ್ಚು ಕಾಲ ಅಮಲಿನಲ್ಲಿ ತೂರಾಡುತ್ತಿರುತ್ತಾನೆ. ಎಂದು ಕಾಲನಿಯ ಸಾಹುಕಾರರೆಲ್ಲ ಸೇರಿ ರಿಪೋರ್ಟ್ ತಯಾರುಮಾಡಿದರು. ಹಾಗಾಗಿ ಕಾಲನಿಯ ಕಾವಲುಗಾರ ಹುದ್ದೆಯಿಂದ ಅವನಿಗೆ ಬಲುಬೇಗ ಮುಕ್ತಿ ಸಿಕ್ಕಿತು. ಆ ಜಾಗವನ್ನು ತುಂಬಿದವನು ಅನ್ವರನ ಚಿಕ್ಕಮ್ಮನ ಮಗ.

......

ವರ್ಷಗಳುರುಳಿದವು. ಐದೂವರೆ ಗಂಟೆ ಸುಮಾರಿಗೆ ಶ್ಯಾಮಸುಂದರ ಬಾಬೂರವರು ಬ್ಯಾಂಕಿನಿಂದ ಹೊರಬಿದ್ದು ತಮ್ಮ ಕಾರಿನ ಕಡೆ ಹೋಗುತ್ತಿದ್ದರು. ಕಾರಿನ ಪಕ್ಕದಲ್ಲಿ ನಿಂತಿದ್ದ ಮಧ್ಯವಯಸ್ಕನೊಬ್ಬ ಬಗ್ಗಿ ನಮಸ್ಕರಿಸಿದ. ಎಣ್ಣೆ ಕಾಣದೆ ಕಂಗೆಟ್ಟ ತಲೆಕೂದಲು, ಸಣಕಲು ಮುಖದಲ್ಲಿ ಒರಟಾಗಿ ಬೆಳೆದಿದ್ದ ಗಡ್ಡ, ಸುಕ್ಕುಗಟ್ಟಿದ ಪೈರಣ, ಮುದುಡಿಹೋದ ಪ್ಯಾಂಟು. ಬಾಬುರವರಿಗೆ ಗುರುತು ಸಿಗುವದಾದರೂ ಹೇಗೆ ?

''ಸಾಹೇಬ್ರೆ ನಾನು ಸನಾತನ್'' ಮೈ ಪೂರ್ತಿ ಬಗ್ಗಿಸಿ ಹೇಳಿದ.

''ಯಾವ ಸನಾತನ್ ! ಓಹ್... ನಮ್ಮ ಕಾವಲುಗಾರ. ಏನಂತೆ... ಹೇಗಿದ್ದೀಯಾ ? ಈಗೇನು ಮಾಡ್ತಾ ಇದ್ದೀಯಾ ?''

''ಸಾಹೇಬ್ರೆ ಒಂದು ಆಫೀಸಲ್ಲಿ ಪಿಯೋನ್ ಆಗಿದ್ದೇನೆ. ರಾತ್ರಿ ಕಾವಲುಗಾರಿಕೆನೂ ಮಾಡ್ತಿದ್ದೇನೆ. ಮಧ್ಯೆ ಪುರುಸೋತ್ತಾದಾಗ ಕೈಗಾಡಿನೂ ಎಳೀತೇನೆ. ಚಾತಿಂಡಿಗಾಗ್ತದೆ...''

''ಸರಿ... ಸರಿ...'' ಬಾಬುವರು ಹೊರಡಲು ಕಾರಿನ ಬಾಗಿಲು ತೆರೆದರು.

''ಸಾಹೇಬ್ರೆ ಒಂದು ಮಾತು ಹೇಳೋದಿತ್ತು'' ಬಚ್ಚಿಹೋದ ಗಲ್ಲವನ್ನು ಸವರಿಕೊಳ್ಳುತ್ತ ಹೇಳಿದ.

''ಹೂಂ... ಹೂಂ... ಹೇಳು...''

''ಕಳೆದ ಕೆಲವು ವರ್ಷಗಳಲ್ಲಿ ನಾನೊಂದಿಷ್ಟು ಹಣ ಕೂಡಿಟ್ಟಿದ್ದೇನೆ. ದುಬೈಗೆ ಹೋಗಬೇಕು ಅಂತಿದ್ದೇನೆ. ನೀವು ದೊಡ್ಡ ಮನಸ್ಸು ಮಾಡಿ ನನಗೆ ಕಾಗದಪತ್ರ ಮಾಡಿಕೊಟ್ಟಿದ್ದರೆ ತುಂಬಾ ಉಪಕಾರ...''



ಒರಿಯಾ ಮೂಲ : ಸುಚಿತ್ರಾ ಬಾಗಚಿ

ಕನ್ನಡಾನುವಾದ :

ಡಾ॥ ಮಾಧವಿ ಎಸ್. ಭಂಡಾರಿ



# ಪಿತ್ತಾಸುರ

ಮಲ್ಲಿಕಾರ್ಜುನ ಹುಲಗಬಾಳಿ

**ಮುಂ**ಚಿನಿಂದಲೂ ನಮ್ಮದು ಕೆಳ ಮಧ್ಯಮ ಕುಟುಂಬ. ಶಾಲಾ ಮಾಸ್ತರನಾಗಿದ್ದ ನಮ್ಮಪ್ಪನಿಗೆ ಹೇಳಿಕೊಳ್ಳುವಂಥ ಚರಾಚರ ಆಸ್ತಿ ಎಂಬುದು ಇರ್ಲಿಲ್ಲ. ನಾಲ್ಕು ಪ್ಲಸ್ ಎರಡು ಜನರ ದೊಡ್ಡ ಸಂಸಾರ. ಆದರ ಆಯ-ವ್ಯಯಗಳ ಎರಡು ತುದಿಗಳನ್ನು ಸಮಗೂಡಿಸುವ ಜಂಜಾಟದಲ್ಲಿ ಅಪ್ಪನ ಜತೆಗೆ ಅವ್ವಳೂ ಹೈರಾಣಾಗಿದ್ದಳು. ಇನ್ನು ಆಸ್ತಿ ಮಾಡುವುದಂತೂ ದೂರವೇ ಉಳಿಯಿತು. ಈಗಲೂ ಕೂಡ ನಾವು 'ನ' ಆಸ್ತಿಕರು !

ಅದೇ ನಮ್ಮ ಸರೀಕರನೇಕರು ಎದೆಯುಬ್ಬಿಸಿ ಹೇಳಿಕೊಳ್ಳುವಂತೆ, ''ಇದು ನಮ್ಮಜ್ಜನ ತ್ವಾಟ... ಇದು ನಮ್ಮ ಹಿರ್‍ಯಾರು ಕಟ್ಟಿಸಿದ ಮನೀ'' ಎಂದೆಲ್ಲ ಬೀಗುವ ಭಾಗ್ಯ ನಮ್ಮದಾಗಿರಲಿಲ್ಲ. ಉಳಿದವರಂತೆ ಒಂಚೂರಾದರೂ ಪಿತ್ರಾರ್ಜಿತ ಆಸ್ತಿ ನಮಗೂ ಇದ್ದಿದ್ದರೆ... ಎಂದು ಅಪ್ಪನ ಹೊರತಾಗಿ ನಾವು ಮನೆಯವರೆಲ್ಲ ಮೇಲಿಂದ ಮೇಲೆ ಅಂದ್ಕೊಳ್ತಿದ್ದೆವು. ಆದರೆ ಅಪ್ಪ ಆದಕ್ಕಾಗಿ ಎಂದೂ ಹಳಹಳಿಸಿದವನಲ್ಲ.

ಕೇಳಿದವರಿಗೆ, ''ಇವೇ ನಾಲ್ಕು ಹೈವಾಣರು ನಾನು ಮಾಡಿರುವ ಆಸ್ತಿ'' ಎಂದು ನಗೆಯಾಡುತ್ತಿದ್ದ, ನಮ್ಮನ್ನು ತೋರಿಸಿ. ಆದರೆ ಭೌತಿಕವಾಗಿಲ್ಲದಿದ್ದರೂ, ಅಭೌತಿಕವಾಗಿ ಮತ್ತು ಆನುವಂಶೀಕವಾಗಿ ನಮಗೊಂದು ಆಸ್ತಿ ಬಂದಿದೆ. ಹೌದು. ಅದು ಈಗಲೂ ಇದೆ, ಮುಂದೆಯೂ ಖಂಡಿತವಾಗಿ ಇರುತ್ತದೆ. ಅನುಮಾನವೇ ಇಲ್ಲ! ಮಿಕ್ಕುಳಿದ ವಿಷಯಗಳು ಎಂತೆ ಇರಲಿ, ಈ ಆಸ್ತಿಯ ಹಸ್ತಾಂತರ ವಿಷಯದಲ್ಲಿ ಮಾತ್ರ ಯಾವ ಸಂದೇಹಗಳೂ ನನ್ನಲ್ಲಿಲ್ಲ, ನಿಸ್ಸಂದೇಹವಾಗಿಯೂ ಇಲ್ಲ.

''ಅದೇನು ಅಷ್ಟೊಂದು ಗ್ಯಾರೆಂಟಿಯಾಗಿ ಹೇಳುತ್ತೀ ?'' ಎಂದು ನೀವು ಕೇಳಬಹುದು. ಹಾಗಿದ್ದರೆ ಇಲ್ಲಿ ಕೇಳಿ.

ನಮ್ಮದು ಪಿತ್ತ ಸಂತಾನ. ವಂಶವೃಕ್ಷದ ಬೇರುಗಳಿಂದ ಮೊದಲಗೊಂಡು, ಅದರ ತುತ್ತ ತುದಿಯಲ್ಲಿನ ಎಳೆ ಹಸಿರು ಎಲೆಗಳವರೆಗೆ ಪಿತ್ತರಸವು ಪಸರಿಸಿಕೊಂಡಿದೆ, ಗುಪ್ತವಾಹಿನಿಯಂತೆ. ಅಪ್ಪ, ಅಜ್ಜ, ಮುತ್ತಜ್ಜರಾದಿಯಾಗಿ ಮನೆತನದ ಎಲ್ಲರೂ 'ಪಿತ್ತ-ಸೌಖ್ಯ' ಅನುಭವಿಸುತ್ತ ಬಂದವರು. ನಮ್ಮ ಮನೆತನದ ಹಿರಿಯರು ನನಗಿತ್ತಂತೆ, ಮುಂದೆ ನಾನದನ್ನು ನನ್ನ ಮಕ್ಕಳಿಗೆ ಜತನದಿಂದ ಒಪ್ಪಿಸಬೇಕಾಗುತ್ತದೆ. ಆ ನಂತರ ಅವರಾದರೂ ಕೂಡ, ಮೂಲ ಅಸಲಿಗೆ ಒಂದಿಷ್ಟು ಬಡ್ಡಿ ಸೇರಿಸಿ ಮುಂಬರಲಿರುವ ವಂಶದ ಕುಡಿಗಳಿಗೆ ನೀಡುತ್ತಾರೆ. ಹೀಗೆ ತಲೆತಲಾಂತರಗಳಿಂದ ದೇಹಾಂತರಗೊಳ್ಳುತ್ತ ಬಂದಿದೆ. ನಮ್ಮ ಪಾಲಿಗಿದು ಪಿತ್ರಾರ್ಜಿತ ಬಳುವಳಿ.

ಮತ್ತೊಂದು ವಿಶೇಷ. ಈ 'ಪಿತ್ರಾರ್ಜಿತ'ದಲ್ಲಿ ಮನೆಯ ಹೆಣ್ಣುಮಕ್ಕಳಿಗೆ ಹಕ್ಕಿಲ್ಲದಿರುವದು. ಅದ್ಯಾಕೆ ಹೀಗೆ, ಅಂತ ಸ್ತ್ರೀವಾದಿಗಳು ಕೆರಳಬಹುದು. ನನಗೂ ಗೊತ್ತಿಲ್ಲ. ಗಂಡುಗಳಿಗಿರುವ 'ಗುಂಡು-ತುಂಡುಗಳ' ಚಟಸಂಪನ್ನತೆ ಅವರಿಗಿಲ್ಲದಿರುವದು ಕಾರಣವಾಗಿರಬಹುದೆ ? ಪಿತ್ತಾಸಕ್ತರು ಸಂಶೋಧನೆಗೈಯಬಹುದು.

''ಇದು ಕೇವಲ ನಿನ್ನ 'ವಿಶೇಷ'ವೆಂಬಂತೆ ಸ್ವಪರಾಕು ಸಾಕು. ವಾತ-ಪಿತ್ತ-ಕಫಗಳೆಂಬ ಬ್ರಹ್ಮತ್ರಯ ರೋಗಗಳು ಮನುಕುಲದ ಮೇಲೆ ತಮ್ಮ ಯಾಜಮಾನ್ಯ ಸ್ಥಾಪಿಸಿಲ್ಲವೆ ? ಅಯ್ಯಾ, ನಿನ್ನಂತೆ ನಾವೂ ಪಿತ್ತಪ್ಪ ಸಂತಾನಿಗಳೆ! ಅದೇನು ನಾವು ಕಾಣದ್ದೆ ?'' ಅಂತೆಲ್ಲ ನಿಮಗೆ ಪಿತ್ತ ನೆತ್ತಿಗೇರಬಹುದು.

ಇಲ್ಲವೆಂದವರಾರು ಸ್ವಾಮಿ ? ನಾವು ನೀವೆಲ್ಲ ಪಿತ್ತೇಶ್ವರನ ಸುಪುತ್ರರೆ ! ಆದ್ರೂ, ಒಬ್ಬರ ಹಾಗೆ ಮತ್ತೊಬ್ಬರ ಅನುಭವ ಇರಲಾರದು. ಒಬ್ಬೊಬ್ಬರ ಪಾಲಿಗೆ ಒಂದೊಂದು ಥರವಾಗಿ ಕಾಣ(ಡಿ)ಸುತ್ತದೆ. ನನ್ನ ಪಿತ್ತಾನುಭವಕ್ಕೂ ತಮ್ಮದಕ್ಕೂ ಹೋಲಿಸಿ, ಅದರ ಸಾಮ್ಯ-ವೈಷಮ್ಯಗಳನ್ನು ಪರಾಂಬರಿಸುವಂತಾಗಬೇಕು.

ಅದೇನೆ ಇರಲಿ. ಪಿತ್ತಾಸುರನ ಸ್ತುತಿಗೆ ನಾನು ತೊಡಗುವ ಮುನ್ನ, ನನಗಿರುವ ಬಾಯಿ ಚಪಲದ ಬಗ್ಗೆ ಹೇಳಬೇಕೆನಿಸುತ್ತಿದೆ. ''ಕದ್ದಾದರೂ ಸೈ, ಕಸಿದುಕೊಂಡಾದರೂ ಸರಿ, ಕೈಯಲ್ಲೊಂದು ಪುಸ್ತಕವಿರಲಿ'' ಎಂದು ಅದಾರೊ ಒಬ್ಬ ಪುಸ್ತಕಪ್ರೇಮಿ ಹೇಳಿದ್ದಾನಂತೆ. ಆದರೆ, ನನ್ನ ಸಿದ್ಧಾಂತವೆ ಬೇರೆ'' 'ಕಸಿದಾದರೂ ಸರಿ, ಬಾಯಲ್ಲಿ ತಿಂಬೋ ಪದಾರ್ಥ ತುಂಬಿರಲಿ.'' ಮುಗಿಲೆಂಬ ಮುಗಿಲೇ ಮುರ್‍ಕೊಂಡು ತಲೆ ಮೇಲೆ ಬಿದ್ದರೂನು, ಕುದುರೆಯಂತೆ ಸದಾ ಮೆಲಕಾಡಿಸುತ್ತಲೇ ಇರಬೇಕು. 'ಏನಾದದೂ ತಿನ್ನುತ್ತಿರು ತಮ್ಮ' ಎಂಬ ತತ್ವ ನನ್ನದು.

ಹಬ್ಬ-ಹರಿದಿನಗಳು ಬಂದವರಂತೂ ಕೇಳೋದೆ ಬೇಡ. ನನ್ನ ಚಿತ್ತ-ಚಾಂಚಲ್ಯಕ್ಕೆ, ಜಿಹ್ವಾ-ಚಾಪಲ್ಯಕ್ಕೆ ಚಾಲೆಂಜ್ ಮಾಡುವ ರೀತಿಯಲ್ಲಿ ಎಲ್ಲ ಕಡೆಗಳಿಂದ ಹರಿದುಬರುತ್ತದೆ ಕರಿದ ವಾಸನೆ. ಆಗ ದಿನಂಪ್ರತಿ ಹೊಯ್ಕೊಳ್ಳೊಪವನಿಗೆ ಹೋಳಿ ಹುಣ್ಣಿಮೆ ಬಂದಂತಾಗುತ್ತದೆ.

''ಈ ಸುಡಗಾಡು ಚಟದಿಂದಾಗಿನೇ ಪಿತ್ತ ಎಂಬುದು ನಿಮ್ಮ ನೆತ್ತಿ ಏರಿ ಕುಂತ್ಕೊಂಡಿರೋದು'' ಇದು ನನ್ನವಳ ಆರೋಪ. ಸಣ್ಣ ಮಕ್ಕಳಂತೆ ಎಲ್ಲದಕ್ಕೂ 'ತಾ ತಾ' ಅನ್ನುವ ಬದಲು, ಈ ಬಾಯಿಚಪಲಕ್ಕೆ 'ಟಾ ಟಾ' ಹೇಳುವಂತೆ ಅವಳು ಒತ್ತಾಯಿಸುತ್ತಲೆ ಇರ್ತಾಳೆ.

ಪಿತ್ತ ಎಂಬುದು, ನಾನೇ ಬಯಸಿ ಬಯಸಿ ಬರಮಾಡಿಕೊಂಡ ಭಾಗ್ಯವೆಂಬುದು ಅವಳಿಗೇನು ಗೊತ್ತು. ದೇವರ ಉಪಾಸನೆಯಲ್ಲಿ ಮುಳುಗಿರುವವರನ್ನು ನೋಡಿದಾಗಲೆಲ್ಲ ನನಗೆ ಮರುಕ ಹುಟ್ಟುತ್ತದೆ. ಯಾಕಂದ್ರೆ ನಾನೊಬ್ಬ ಅಸುರಾರಾಧಕ, ಪಿತ್ತಾಸುರನೆ ನನ್ನ ಆರಾಧ್ಯದೈವ. ಭಕ್ತ ಕುಂಬಾರದಲ್ಲಿ, ವಿಠ್ಠಲ-ಗೋರಾ ನೆಟ್‌ವರ್ಕ್ ಬಗ್ಗೆ ಅಣ್ಣಾವ್ರು ಹಾಡುವಂತೆ 'ನಾನು ನೀನು ನೆಂಟರಯ್ಯ, ನಮಗೆ ಭೇದವಿಲ್ಲವಯ್ಯ' ಹಾಗಿದೆ ನನ್ನ ಮತ್ತು ಪಿತ್ತಾಸುರನ ಕರುಳಬಳ್ಳಿಯ ನೆಂಟಸ್ತಿಕೆ. ಉಸಿರಿರುವ ತನಕ, ಈತ ಜೊತೆ ಬಿಡಲಾರದ ಪರಮಾಪ್ತ ಬಂಧು. ಖಾಸಾ ಅರ್ಥದಲ್ಲಿ ನಮ್ಮದು ಜನುಮದ ಜೋಡಿ.

ನಿತ್ಯವಲ್ಲದಿದ್ದರೂ, ಆಗಾಗ ನನಗೆ ಅಸುರ ದರ್ಶನವಾಗುತ್ತಿರುತ್ತದೆ. ಆ ವೇಳೆಯಲ್ಲಿ ನನಗಾಗುವ ಸುಖಾನುಭವ ವರ್ಣಿಸಲಸದಳ. ಜಠರ ಗಂಗೋತ್ರಿಯಿಂದ ಪಿತ್ತೋದ್ಭವವಾಗುತ್ತಿದ್ದಂತೆ, ಅದು ದೇಹದ ತುಂಬೆಲ್ಲ ನೆಗೆನೆಗೆಯುತ್ತ ಹರಿಯಲಾರಂಭಿಸುತ್ತದೆ. ನಿಧಾನವಾಗಿ ಈ ಅಂತರಗಂಗೆ ದೇಹಂಗಳದಲ್ಲಿ ರುದ್ರನರ್ತನಗೈಯುತ್ತಾಳೆ. ಅಷ್ಟು ಸಾಕು ಪಿತ್ತಾಸುರನೊಂದಿಗೆ ನಾನು ರೋಮಾಂಚನಗೊಳ್ಳಲು. ಉದರಪ್ರದೇಶದಲ್ಲಿ ವಾಯುಭಾರ ಕುಸಿಯುತ್ತಿದ್ದಂತೆ, ಥಾ.. ಥೈ..., ಥಕ್... ಥೈ... ಪಿತ್ತಾಸುರನ ಕಥಕ್ಕಳಿ. ಇಷ್ಟರಲ್ಲಿಯೆ ಅದು ಕದ್ದಾದರೂ ಸರಿ, ಕಟ್ಟಿಕೊಡುವ ಅಪೂರ್ವಾನುಭವದ ತುಡಿತ ಕಾಣಿಸಿಕೊಳ್ಳುತ್ತದೆ. ಪಿತ್ತಾಸುರನ ಆರಾಧನೆಗೆ ಮೈಮನ ಒಪ್ಪಿಸಿಕೊಳ್ಳುತ್ತೇನೆ.

ಪಿತ್ತರಸದ ಕಲರವ ಆಸ್ವಾದಿಸುವಂತಿರುತ್ತದೆ. ಎದೆಯುರಿತ ಸಣ್ಣಗೆ ಇರಿಯತೊಡಗುತ್ತದೆ. ಗಂಟಲಲ್ಲಿ ಹುಳಿ ತೇಗು ಬಂದು ತಲೆಯೊಂದಿಗೆ ಇಡೀ ಬ್ರಹ್ಮಾಂಡ ಸುತ್ತತೊಡಗುತ್ತದೆ. ಕಾಲು ಬಳ

ಬಳ ಹರಿಯತೊಡಗಿ, ವೈಕುಂಠದ ಹರಿಯು ನೆನಪಾಗುತ್ತಾನೆ. (ಸಂಕಟಕ್ಕೂ ವೆಂಕಟರಮಣಗೂ ನಂಟುಹಾಕಿರುವೆವಲ್ಲ!) ಪಿತ್ತಾಗಮನವಾಗುತ್ತದೆ. ರಣಕಹಳೆ ಮೊಳಗತೊಡಗುತ್ತದೆ.

ಆದರೆ, ನನ್ನವಳ 'ಪಿತ್ತಪ್ರಜ್ಞೆ'ಯೊ ಅದ್ಭುತ! ತನ್ನ ಆರನೆಯ ಇಂದ್ರಿಯದ ಮೂಲಕ. ನನ್ನ ಪಿತ್ತಾವತಾರದ ಮುನ್ಸೂಚನೆ ತಿಳಿದುಕೊಂಡಿರುತ್ತಾಳೆ. ತಕ್ಷಣ ತುರ್ತು ಪರಿಸ್ಥಿತಿ ಹೇರಲಾಗುತ್ತದೆ. ಅವಳ ದೃಷ್ಟಿಯಲ್ಲಿ ಭಯಂಕರನೆನೆಸಿರುವ ಪಿತ್ತಾಸುರನನ್ನು ತಣ್ಣಗಾಗಿಸುವಲ್ಲಿ ದುರ್ಗಿಯಾಗುತ್ತಾಳೆ.

''ಆ ಸುಂಠಿ ಡಬ್ಬಿ ಎಲ್ಲಿಟ್ಟೇರಿ ? ಹೆಸರ ಬ್ಯಾಳಿ ಪಾಯಸಕ್ಕ ಬೆಲ್ಲಾ ತರಸ್ರಿ...'' ಅಂತೆಲ್ಲ ಓಡಾಡುತ್ತ ಹೋಮ್ ಯಜ್ಞದ ತಯ್ಯಾರಿಗಿಳಿಯುತ್ತಾಳೆ. ಸಮರ ಸಿದ್ಧತೆಗೆ ಕುಟುಂಬ ಸೈನ್ಯ ಹುರುದುಂಬಿಸುತ್ತಾಳೆ. ಸೇನಾಪತಿಯ ಆಜ್ಞೆ ಪಾಲಿಸುವ ವಿಧೇಯ ಸೈನಿಕರಂತೆ ನಮ್ಮ ಮಕ್ಕಳಿಬ್ಬರು ಅಮ್ಮನ ಹಿಂದಿನಿಂದ ಓಡಾಡುತ್ತ, ಸನ್ನಿವೇಶಕ್ಕೆ ಸಮರ ಗಾಂಭೀರ್ಯ ತರುತ್ತಾರೆ.

ನನಗೆಂದೆ ಉಪ್ಪು ಖಾರವಿಲ್ಲದ ಸಪ್ಪನೆಯೂಟದ ಹುಕುಂ ಜಾರಿಯಾಗುತ್ತದೆ. ಮತ್ತೆ, ಬೆಳೆ ಸಾರು ಸೇರಿದಂತೆ ಹುಣಸೆಹಣ್ಣು, ಹಸಿಮೆಣಸಿಕಾಯಿ, ಮಿರ್ಚಿ ಬಜ್ಜಿಯೊಂದಿಗೆ ನನಗಿಷ್ಟವಾದ ಇನ್ನಿತರ ಕರಿದ ಮಸಾಲೆ ಪದಾರ್ಥಗಳನ್ನು 'ಗೃಹಪಾರು' ಮಾಡುತ್ತಾಳೆ. ಕಂಡಲ್ಲಿ ಗುಂಡಿಕ್ಕುವ ಹಿಟ್ ಲಿಸ್ಟ್‌ಗೆ ಅವುಗಳನ್ನು ಸೇರಿಸಲಾಗುತ್ತದೆ.

ಈಗ ಒಂದು ಕೈಯಲ್ಲಿ ಸುಂಠಿ ಕಷಾಯ. ಇನ್ನೊಂದರಲ್ಲಿ ಹೆಸರುಬೆಳೆ ಪಾಯಸದೊಂದಿಗೆ ಪ್ರತ್ಯಕ್ಷಳಾಗುತ್ತಾಳೆ ಗೃಹದೇವತೆ. ಈ ಪಿತ್ತಾಸುರನ ಚಿತ್ತವೆ ವಿಚಿತ್ರ. ಅದು ಹುಚ್ಚುಖೋಡಿ ಮನಸ್ಸಿನಂತೆ, ಬೇಡ ಬೇಡವೆಂದದ್ದನ್ನೆ ಬಯಸಿ ಭಕ್ಷಿಸುವಂತೆ ಆಜ್ಞಾಪಿಸುತ್ತಾನೆ. ನಂತರ ಮೈಮೇಲೆ ದೆವ್ವ ಬರಿಸಿಕೊಂಡು, ಎದೆಯೊಳಗೆ ಹುಡುಗತನ, ಹುಂಬತನಗಳು ಲಗ್ಗೆಯಿಡುವಂತೆ ಮಾಡುತ್ತಾನೆ. ಹಾದಿಯ ದೆವ್ವಗೆ ಮನೆ ಹೊಕ್ಕಿಸಿಕೊಳ್ಳುವಂತೆ ಪ್ರೇರೇಪಿಸುತ್ತಾನೆ.

ನನಗೂ, ಪ್ರಾಣ ಹಿಂಡಿದಂತಾಗಿ, ನಾಲಿಗೆ ಮರಗಟ್ಟುತ್ತದೆ. ಅವಳ ಕಣ್ತಪ್ಪಿಸಿ, ಹಾರೂನ್ ಬಾಬುನ ಹೋಟೆಲಿಗೆ ಓಡುತ್ತೇನೆ. ಕಣಿ ಹರಿದ ಹೋರಿಯಂತೆ ಕುರ್ಮಾ ಪುರಿ, ಅಂಡಾ ಕರಿ ಮೊದಲು ಮಾಡಿ, ಕಂಡದ್ದಕ್ಕೆಲ್ಲ ಬಾಯಿ ಹಾಕುತ್ತೇನೆ. ಹಿಟ್ ಲಿಸ್ಟ್‌ನಲ್ಲಿರುವದೆಲ್ಲವೂ ಹಿಟ್ಟಿಟ್ಟಾಗಿ ಹೋಗುತ್ತದೆ. ಮತ್ತೆ ಅಸುರ ವೈಭವ ವಿಜೃಂಭಿಸುತ್ತದೆ.

''ನನ್ ಮಾತಂದ್ರ ಕಾಲಾಗಿನ ಕಸಾ ಮಾಡೀರಿ'' ದೇವಿ ಗುರ್‍ರ್‌ಗುಟ್ಟುತ್ತಾಳೆ. ಪಿತ್ತ ಆಗಿರೋದು ನನಗೆ, ಇವಳಿಗೇಕೆ ಆ ವಿಕಾರ ಭಾವ ? ಗೊತ್ತಾಗೋದೆ ಇಲ್ಲ. ಹೆಂಗಸರ ಸ್ವಭಾವ.

ಮತ್ತೆ ದೇವಾಸುರ ಸಂಘರ್ಷ ಸುರು. ಎರಡನೇ ಮಹಾಯುದ್ಧದ ಘೋಷಣೆಯಾಗುತ್ತದೆ. 'ಹೋಮ್'ಯಜ್ಞದ ಏರ್ಪಾಡಾಗುತ್ತದೆ. ತಮ್ಮ ಬಳಿ ಇರುವ ಹತ್ಯಾರಗಳೊಂದಿಗೆ ಬರುವಂತೆ ಪಕ್ಕದ ಓಣಿಯ ಅಳಲೆಕಾಯಿ ಆಯುರ್ವೇದಾಚಾರ್ಯರಿಗೆ ಬುಲಾವ್ ಹೋಗುತ್ತದೆ. ಉಬ್ಬಸ ರೋಗಗ್ರಸ್ತ ಆಚಾರ್ಯರು ಹೆಜ್ಜೆಹೆಜ್ಜೆಗೆ 'ಹರಿನಾಮ' ಸ್ಮರಿಸುತ್ತ ಧಾವಿಸುತ್ತಾರೆ. ಇಂಥ ಹರಿಭಕ್ತರಿಗೆಲ್ಲ ಹಣಿಯುವವನಲ್ಲ ನಮ್ಮ ಪಿತ್ತಾಸುರ. ಬಂದ ವೇಗದಲ್ಲಿಯೆ ರಣರಂಗದಿಂದ ವಾಪಸ್ಸಾಗುತ್ತಾರೆ ಆಚಾರ್ಯರು. ಕೂಡಲೆ ಸ್ಕೂಟಿಯ ಹೋಮಿಯೋರಾಯರಿಗೂ, ಸೂಟುಬೂಟಿನ ಅಲೋಪತಾದ್ಯರಿಗೂ, ಹಾಗೆಯೆ, ಗಡ್ಡದ ಯುನಾನಿಸಾಬ್‌ರಿಗೂ ಅರ್ಜೆಂಟ್ ಕಾಲ್ ಹೋಗುತ್ತದೆ. ಅವರೆಲ್ಲ ಬಂದು, ತಮ್ಮ ಸಾಮರ್ಥ್ಯ-ಸಖ್ಯಾನುಸಾರ ತಮ್ಮದೆ ಆದ, ಮಂತ್ರ-ತಂತ್ರ ಸೂಜಿ-ಡಬ್ಬಣ, ಕ್ವಾರು-ಕಷಾಯದೊಂದಿಗೆ ಕಟಪಟಿ ಮಾಡುತ್ತಾರೆ. ಹೂಂ... ಹೂಂ... ಅಸುರ ನರ್ತನ ನಿಲ್ಲುವುದಿಲ್ಲ. ಚುಪಾರುಸ್ತುಂನಂತೆ ನಾನು, ಆತನಿಗೆ ಸಾಥ್ ನೀಡಿರುತ್ತೇನಲ್ಲ!

ಕೊನೆಗೆ ಹಸಿರುಡುಗೆಯ ನ್ಯಾಚರೋಪತಯ್ಯಗಳು ಬಂದು, ತಮಗೆ ಗೊತ್ತಿರುವ ಪತಂಜಲಿಯೊ, ಗೀತಾಂಜಲಿಯೊ ಪಠಿಸುತ್ತ, ಕಾಳು-ಕಡ್ಡಿ, ಕರಿಕೆ-ಕಸ ಬಾಯಿಗಿಳಿಸುತ್ತಾರೆ. ತರತರದ ದ್ರಾವಣ ಗಂಟಲೊಳಗೆ ತುರುಕುತ್ತಾರೆ. ನಮ್ಮ ಅಸುರನೊ ಮಹಾ ಕಿಲಾಡಿ. ಆಗೆಲ್ಲ ಮೆತ್ತಗಾದವನಂತೆ ನಾಟಕವಾಡುತ್ತಾನೆ. ''ಅಬ್ಬಾ! ಅಂತೂ ಅಸುರ ಸಂಹಾರವಾಯಿತು'' ಎಂದು ಹಣೆಯ ಮೇಲಿನ ಬೆವರು ಒರೆಸಿಕೊಳ್ಳುತ್ತಾರೆ ಅಯ್ಯಗಳು. ಯುದ್ಧ ಗೆದ್ದ ಖುಷಿ ಅವರಿಗೆ, ಆದರೆ, ಇದೊಂದು ಪೂರ್ಣ ವಿರಾಮವೆ ಇರದ ಯುದ್ಧ ವಿರಾಮ ಅಷ್ಟೆ!

ಮೊದಲಾಗಿದ್ದರೆ, ಅಂಜಿ ಮೆತ್ತಗಾಗುತ್ತಿದ್ದ ಪಿತ್ತಾಸುರ ಕಾಲಕಾಲಕ್ಕೆ ಇವರುಗಳೆಲ್ಲ ಕೊಡುತ್ತ ಬಂದ ದೇಶಿ-ಪರದೇಶಿ ಔಷಧಿ ಕುಡಿದು ಕುಡಿದು ತ್ರಿವಿಕ್ರಮನಂತೆ ಬೆಳೆದುಬಿಟ್ಟಿದ್ದಾನೆ. ತರಹೆವಾರಿ ವೈದ್ಯ ನಾರಾಯಣರೆಲ್ಲ ಒಂದುಗೂಡಿ ಪಿತ್ತಾಸುರನನ್ನು ಆಚೆಗಟ್ಟುತ್ತಾರೆನ್ನಿ, ಅಥವಾ ಹಾಗಂತ ಅವರುಗಳು ಭ್ರಮಿಸುತ್ತಾರೆ.

ಆದರೆ, ಹೊರಬಾಗಿಲಿನಿಂದ ಅಟ್ಟಿದ್ದ ಪಿಶಾಚಿಗೆ ಒಳ ಬರಲು ಕಳ್ಳ ಗವಾಕ್ಷಿಗಳಿಗೇನು ದಾರಿದ್ರ್ಯವೆ! (ನನ್ನ ಮೀರ್ ಸಾಧಕತ್ವದ ಸಾಥ್ ಬೇರೆ ಉಂಟಲ್ಲ!) ಇನ್ನೂ ಹದಿನೈದು ದಿನಗಳಾಗಿರುವದಿಲ್ಲ ಯುದ್ಧ-ವಿರಾಮ ಘೋಷಣೆಯಾಗಿ, ಆಗಲೆ, ಅಸುರ ಸಣ್ಣಗೆ ಬಾಲ ಬಿಚ್ಚತೊಡಗುತ್ತಾನೆ. ಮತ್ತೇ ಜೈಸೆ ಥೇ... ಇದ್ದಂತೆಯೇ ಇರೋ ಸಿದ್ದೇಶ್ವರಾ...! ಈ ಸಮುದ್ರ ಮಂಥನದಲ್ಲಿ ಅಂತಿಮ ಗೆಲುವು ಅಸುರರಿಗೆ ಎಂದು ಮತ್ತೆ ಹೇಳಬೇಕಾಗಿಲ್ಲ.

ಯಾವಾಗಾವಾಗ ಧರ್ಮಕ್ಕೆ ಗ್ಲಾನಿಯಾಗುತ್ತದೆಯೊ ಆವಾಗಾವಾಗ ಅವತರಿಸಿ ಬರುವ ಕೃಷ್ಣ ಪರಮಾತ್ಮನಂತೆ, ಈ ಪಿತ್ತೋದ್ಭವವಾದಾಗೆಲ್ಲ ಅವತರಿಸಿ ಬರುವ ನಮ್ಮ ಅಲೋ-ಹೋಮಿ 'ಪತಿ'ರಾಯರು, ಆಯುರ್ವೇದಾಚಾರ್ಯರು, ಯುನಾನಿ ಸಾಬ್‌ರು ಸೂಜಿ-ಡಬ್ಬಣ, ದ್ರಾವಣ ಸಿಂಚನ ಅಷ್ಟಕ್ಕೂ ಮತ್ತೊಮ್ಮೆ ಸಜ್ಜಾಗಿ ನಿಲ್ಲುತ್ತಾರೆ. ತಂತ್ರ-ಮಂತ್ರ ಪಠಣ ಮರುಕಳಿಸುತ್ತದೆ, ಮರು ಕೇಳಿಸುತ್ತದೆ. ಪುನರಪಿ ರೋಗಂ, ಪುನರಪಿ ಶಮನಂ...! ಶಮನಂ...! ಹಳೆಚಾಳಿಯೆಂಬುದು ಹರಿದ ಹಚ್ಚಡದಂತೆ. ಮತ್ತೆ ಮತ್ತೆ ಪಿಸುಕುತ್ತಲೆ ಹೋಗುತ್ತದೆ, ನಿರಂತರ.

ನನ್ನಂತೆ ನಮ್ಮ ಮನೆಯವರೆಲ್ಲರೂ ಭೋಜನ ಪ್ರಿಯರೆ. ತೊಗರಿಬೇಳೆ ಕಿಚಡಿ, ಜತೆಗೆ ಕಟ್ಟಿನ ಸಾರಿನ ಊಟವೆಂದರೆ ನಮ್ಮ ಅಜ್ಜನಿಗೆ ಬಲುಪ್ರಾಣ! 'ಪ್ರಾಣ ಜಾಯೆ, ಮಗರ್ ಕಿಚಡಿ-ಕಟ್ಟಿನ ಸಾರು ನ ಜಾಯೆ' ಅಂಥ ತಲುಬು ಅವನದು. ಆಹಾ...! ತನ್ನೆರಡೂ ಕಣ್ಣು ಮುಚ್ಚಿ, ನಮ್ಮಜ್ಜ, 'ಸೊರ್ ಸೊರ್', ಶಬ್ದ ರಹಿತ ಕಿಚಡಿಯೊಂದಿಗೆ ಕಟ್ಟಿನ ಸಾರಿನ ಸಾರವನ್ನು ಮನಸಾರೆ ಹೀರುತ್ತಿದ್ದರೆ, ಆ ಶಬ್ದ ಓಣಿಗೆಲ್ಲ ಕೇಳಿಸುತ್ತಿತ್ತು. ''ಗುರಜ್ಜಂದು ಕಿಚಡಿ ಸಾರಿನೂಟ ನಡದಾಂಗ ಕಾಣಸ್ತದರ‍್ರೀ'' ಅಕ್ಕ-ಪಕ್ಕದ ಮನೆಯವರು ಬಂದು ಕೇಳ್ಬೇಕು, ಅಂಥ ಸಶಬ್ದ ಊಟವದು. ಆದೇನು ಪ್ರೀತಿಯೊ ಇಂಥ ಊಟದ



## ಬರೀ ಭೂಮಿ

ಬರೀ ಭೂಮಿ
ನಾನು ಇವರಿಗೆ
ತಮ್ಮ ಕನಸು
ಬಿತ್ತಿ ಬೆಳೆಯಲು
ಬರೀ ಭೂಮಿ
ನಾನು
ತಮ್ಮ ಕನಸನ್ನು ಬಿತ್ತಿ
ನನಸನ್ನು ಕೊಯ್ಯುವರು
ನನ್ನ ಕನಸನೆಂದು ನನ್ನಲ್ಲಿ
ಅವರು ಬಿತ್ತಲೇ ಇಲ್ಲ
ಇವರಿಗೆ ಬರೀ ಭೂಮಿ ನಾನು
ಬೆಳೆ ಬಂದಾಗ ಹಿಗ್ಗು
ಬಾರದಾದಾಗ ಮೊಗ್ಗು
ಇವರ ಅತಿವೃಷ್ಟಿ - ಅನಾವೃಷ್ಟಿ
ಪ್ರವಾಹಕ್ಕೆ ಸಿಕ್ಕ ನಾನು
ಬರೀ ಭೂಮಿ

**ಡಾ|| ರೇಖಾ ಜೋಗುಳ**
೧೫೧, ಶ್ರೀ ರೇಣುಕ ನಿಲಯ, ಶ್ರೀನಗರ
ಹಳಿಯಾಳ ರೋಡ್, ಧಾರವಾಡ -೫೮೦ ೦೦೩

ಮೇಲೆ, ನಮ್ಮ ಅಜ್ಜ ಗುಜ್ಜಗೆ ! ಅಂಥ 'ಭೋಜನಸುಖಿ' ಯನ್ನು ನಾನು ಇವತ್ತಿನವರೆಗೂ ಕಂಡಿಲ್ಲ.

ನಾವು ಮಾಡುವ ಊಟದೊಂದಿಗೆ ನೇರಾನೇರ ಸಂಬಂಧ ಕೆಲ ರೋಗಗಳಿಗಿದೆ. ಪಿತ್ತ ಕೂಡ ಊಟಜನ್ಯ ರೋಗವೆ. ಗೊತ್ತಿದ್ದು ಗೊತ್ತಿದ್ದೂ ಆತ ಕಿಚಡಿ-ಸಾರು ಉಣ್ಣುತ್ತಿದ್ದರೆ ನೋಡಿದವರ ಹೊಟ್ಟೆ ಉರಿಯುತ್ತಿತ್ತು. ಸಮಸ್ತ ವಿಶ್ವವನ್ನೆ ಗೆದ್ದಂತೆ, ತೊಂಬತ್ತರ ಗುರಜ್ಜ, ಹುರಿಮೀಸೆಯ ಮೇಲೆ ಕೈಯಾಡಿಸುವ ಆ ಠೀವಿ ಕಣ್ಣಿಗೆ ಕಟ್ಟಿದಂತಿದೆ. ಉಂಡಾದ ಮೇಲೆ, ಅಡಿಕೆಪುಡಿಯನ್ನು ತನ್ನ ಬೊಚ್ಚ ಬಾಯಲ್ಲಾಡಿಸುತ್ತ, ನಿದ್ದೆಗೆ ಜಾರುತ್ತಿತ್ತು ಅಜ್ಜ. ಅದು ತಾಸೆರಡು ತಾಸು ಮಾತ್ರ. ಮಧ್ಯರಾತ್ರಿಯಾಗುತ್ತಿದ್ದಂತೆ ಅಜ್ಜನ ನರಳಾಟ ಕೇಳಿಬರುತ್ತಿತ್ತು. ''ಅಯ್ಯಯ್ಯೋ... ಶಿವ ಶಿವಾ...!! ಎದೀ ಉರೀಲ್ಕಿತ್ತೇದ್ಯೋ... ಹೊಟ್ಯಾಗ್ ಬೆಂಕಿ ಇಟ್ಟಂಗಾಗ್ತದರ್ಯೋ ಯಪ್ಪಾ... ಸತ್ತನ್ಯೋಪಾ ಸತ್ನೀ...'' ಅಷ್ಟೊತ್ತಿಗಾಗಲೆ, ಪಿತ್ತಾಸುರ ತನ್ನ ಭಸ್ಮಾಸುರ ನೃತ್ಯ ಸುರುಮಾಡಿರುತ್ತಿದ್ದ. ''ಇನ್ನೆಂದೂ ಆ ಕಿಚಡಿ ಕಟ್ಟಿನ ಸಾರದ ಉಸಾಬರಿಗೆ ಹೋಗಾಂಗಿಲ್ಲರ್ಯೋ... ಪೈಲಾ ಶಾಂತಪ್ಪ ಡಾಕ್ಟರ್ನ ಕರೀರ್ಯ್ರೋ'' ಎಂದು ಹಲಬುತ್ತಿದ್ದ.

ಓಣಿಯ ಕೊನೆಯಲ್ಲಿದ್ದ, ದೂರದ ಸಂಬಂಧಿಕನೂ ಆಗಿದ್ದ (ನಮ್ಮ ಮನೆಯಿಂದ ಆತನ ಮನೆ ದೂರವಿದ್ದ ಕಾರಣವೂ ಇದ್ದೀತು !) ಶಾಂತಪ್ಪ ಡಾಕ್ಟರನನ್ನು ಕರೆತರುತ್ತಿದ್ದೆವು.

''ಅಜ್ಜಾ, ಇವತ್ತು ಕಿಚಡಿ-ಕಟ್ಟಿನ ಸಾರ ಮಸ್ತಾಗಿರಬೇಕಲ್ಲಾ...'' ಶಾಂತಪ್ಪ ಡಾಕ್ಟರ್ ನಗೆಯಾಡಿದರೆ,

''ಯಲ್ಲಿ ಮಸ್ತೋ ತಂಮಾ, ಹೌಂದಲ್ಲೊ ಅನ್ನುವಷ್ಟ ಬರೇ ಒಂದ ತುತ್ತ ಅಷ್ಟ...'' ಸಣ್ಣಗೆ ಹೇಳುತ್ತಿದ್ದ ಅಜ್ಜ.

ಯಥಾಪ್ರಕಾರ ಒಂದು ಸೂಜಿ. ಮೇಲೊಂದೆರಡು ಮಾತ್ರೆ ಕೊಟ್ಟು ''ನಾಳೀಗಿ ಎಲ್ಲಾ ಆರಾಮಾಗ್ತದ. ತುಗೊ ಅಜ್ಜಾ'' ಎಂದಿನಂತೆ ಶಾಂತಪ್ಪ ಹೇಳಿಹೋಗುತ್ತಿದ್ದ.

ಶಾಂತಪ್ಪ ಡಾಕ್ಟರನ ಮಂತ್ರಕ್ಕೆ, ಅಜ್ಜನೊಳಗಿನ ಪಿತ್ತಾಸುರ ಮೆತ್ತಗಾಗುತ್ತಿದ್ದ. ಎಂದಿನಂತೆ ಮರುದಿನ ಗುರಜ್ಜ ನಿಚ್ಚಳ. ಒಂದು ವಾರ ಕಳೆಯುವಷ್ಟರಲ್ಲಿ, ಮತ್ತೆ ಅಜ್ಜನ ಸ್ರೊರ್ ಸ್ರೊರ್ ದ್ವನಿ. ರಾತ್ರಿಯ ಹಲುಬಾಟ, ಶಾಂತಪ್ಪ ಡಾಕ್ಟರನ ಆಗಮನ, ಸೂಜಿ... ಎಲ್ಲವೂ ಯಥಾಪ್ರಕಾರವೆ.

''ಅಜ್ಜಾ ಇಷ್ಟ ತ್ರಾಸ ಅನುಭವಿಸೊದ್ಕಿಂತ, ಆ ಕಿಚಡಿ ಊಟಾನೆ ಬಿಡಲ್ಲಾ'' ಪ್ರತಿಸಲವೂ ಶಾಂತಪ್ಪ ಡಾಕ್ಟರ್ ಹೇಳುತ್ತಿದ್ದರೆ,

''ಸ್ಯಾಂತಪಾ, ಇದೇ ಕಡೆನೋಪಾ... ಇನ್ಮುಂದ ಸಾಕ್ಷಾತ ಆ ಹರಿಬ್ರಮ್ಮರು ಬಂದ ಹೇಳಿದ್ರೂ ಕಿಚಡಿ ಕಡಿ ನೋಡಾಂಗಿಲ್ಲ, ದೇವ್ರಾಣಿ, ನನ್ ಮಾತ ನಂಬು'' ಮಾತು ಕೊಡುತ್ತಿದ್ದ. ಅದು ಪಿತ್ತ ವೈರಾಗ್ಯದ ಮಾತು, ಅಷ್ಟೆ.

ವಾರ ಕಳೆಯುವಷ್ಟರಲ್ಲಿ ಗುರಜ್ಜನ ಎದೆಯೊಳಗಿನ ಭೋಜನಾಸಕ್ತಿ ಜಾಗ್ರತವಾಗಿರುತ್ತಿತ್ತು. ಹುಡುಗತನ, ಹುರುಪು ಉತ್ಸಾಹಗಳು ಕಣ್ಣಲ್ಲಿ ಲಗ್ಗೆ ಇಟ್ಟಂತೆ, ಕಿಚಡಿ ಊಟಕ್ಕೆ ಸಶಬ್ದದೊಂದಿಗೆ ಕುಂತಿರುತ್ತಿದ್ದ. ಇನಕಂ ಟ್ಯಾಕ್ಸ್ ಕಟ್ಟಬೇಕಾಗುತ್ತದೆ ಎಂದು ಯಾರಾದರೂ ಹಣ ಗಳಿಸೊದನ್ನು ಕಡಿಮೆ ಮಾಡಿದ್ದಾರೆಯೆ ?

ಪಿತ್ತಾಸುರನ ಹಾವಳಿಗೆ ಅಂಜಿ, ಭೋಜನೋಪಭೋಗಕ್ಕೆ ಎರವಾಗಲಾದೀತೆ ? ''ಸಾವಿರ ಕುತ್ತುಗಳಿದ್ದರೂ ಪಿತ್ತ ಪ್ರಕೃತಿಯೆ ಉತ್ತಮ'' ಇದು ಗುರಜ್ಜನ ಊಟೋಪದೇಶದ ಒಟ್ಟು ಸಾರಾಂಶ.




ಮೈಸೂರಿನಲ್ಲಿ ತಾ॥ ೨೩-೧-೨೦೦೯ ರಂದು ನವಕರ್ನಾಟಕ ಪುಸ್ತಕ ಮೇಳ ಮತ್ತು ಆರು ಕೃತಿಗಳ ಲೋಕಾರ್ಪಣೆ ನಡೆಯಿತು. ಆ ಸಮಾರಂಭವನ್ನು ಪ್ರೊ॥ ಅಡ್ಯನಡ್ಕ ಕೃಷ್ಣಭಟ್ ಉದ್ಘಾಟಿಸಿದರು. ಚಿತ್ರದಲ್ಲಿ (ಎ.ಬ.) ಕೊಳ್ಳೇಗಾಲ ಶರ್ಮ, ಆ.ನಾ.ರಾವ್ ಜಾದವ್, ಎನ್. ಜೆ. ದೇವರಾಜ ರೆಡ್ಡಿ, ಗಿರಿಮನೆ ಶ್ಯಾಮರಾವ್, ಪ್ರೊ॥ ಅಡ್ಯನಡ್ಕ ಕೃಷ್ಣಭಟ್, ಶ್ರೀಮತಿ ಬಿ. ಎಸ್. ಮಯೂರ, ಎನ್. ಕೆ. ಸತ್ಯನಾರಾಯಣ ಮತ್ತು ಲೋಕೇಶ್ ಹರವು - ಇವರುಗಳು.

ಒಂದೊಂದು ಸಲ, ಸಜ್ಜನರಿಗಿಂತ ದುರ್ಜನರೆ ನಮ್ಮ ಕಷ್ಟಕ್ಕಾಗುತ್ತಾರಂತೆ. ಪಿತ್ತಾಸುರನ ಕೃಪೆ ನನಗಿರುವದರಿಂದ ಈ ಮಾತು ಹೇಳುತ್ತಿದ್ದೇನೆ. ಬೇಡವಾದವರನ್ನು ಅವಾಯ್ಡ್ ಮಾಡುವಲ್ಲಿ, ಬೇಡವೆನಿಸಿದ ಕಡೆ ಹೋಗದಿರುವಲ್ಲಿ ಪಿತ್ತಾಸುರ ಆಪದ್ಬಾಂಧವನಾಗುತ್ತಾನೆ.

''ಆಗಸ್ಟ ಪಂದ್ರಾಕ್ಯ ನಮ್ಮ ಪುಟ್ಟಿ ಭಾಷ್ಣಾ ಮಾಡ್ಬೇಕಂತಾಳ. ಒಂದ್ ನಾಕ ಸಾಲು ಇಂಗ್ಲಿಸನ್ಯಾಗ್ ಬರ್ದ ಕೊಡ್ರೀ'' ಸಹೊದ್ಯೋಗಿ ಕನ್ನಡ ಪಂಡಿತನ ಕಿರಿಕಿರಿ. ಹೀಗೆಲ್ಲಾ ಬರ್ದು ಕೊಡೋದು ನನ್ನ ಜಾಯಮಾನಕ್ಕೆ ಹೊಂದದ ಸಂಗತಿ. ಹಾಗಂತ ನೇರವಾಗಿ ಹೇಳಲಾಗದು.

''ಸ್ಸಾರಿ ನನಗ್ ಪಿತ್ತ ಬಾಳಾಗೇದ್ರಿ. ಮನಸ್ಸಿಗಿ ಸೊಗಸಿಲ್ಲಾ'' ಎಂದು ಸುಳ್ಳಿನ ಬಂಡಿ ಉರುಳಿಸುತ್ತೇನೆ.

''ಓಹೊ... ಹಿಂಗರ್ಯ... ಆತ್ ಬಿಡ್ರಿ, ಮತ್ತ ಬ್ಯಾರೆ ಯಾರ್ನಾದ್ರೂ ನೋಡ್ತಿನಿ'' ಅಂದ ಆತ ಮುಖ ಸಿಂಡರಿಸುತ್ತಾನೆ. ಆದೇನಾದ್ರೂ ಆಗ್ಲಿ, ಸದ್ಯ ಪಂಡಿತನ ರಗಳೆಯಿಂದ ಮುಕ್ತನಾದ ಖುಷಿ.

''ನಿಂಗಪ್ಪನ ಕನ್ಯಾ ನೋಡಾಕ ನಾಳಿ ಕೆಸರೂರಿಗೆ ಹೋಗೂದದ ಮಾಮಾ, ರಾತ್ರಿ ಬಾರಾಕ್ಕ ತಯ್ಯಾರ ಇರ್ರಿ. ಕರ್ರ್ಯಾಕ್ ಬರ್ತೀವಿ'' ಅಂತ ಸೋದರಳಿಯ ವಿಠ್ಠನ ವರಾತ.

ಅದೇ ವೇಳೆಗೆ ನನಗೆ ಮೈಕೈ ತುಂಬ ಕೆಲಸ. ನಮ್ಮ ವಿದ್ಯಾರ್ಥಿಗಳ ಪರೀಕ್ಷೆ ಹತ್ತಿರವಾಗುತ್ತಿದೆ. ಹೇಳಬೇಕಾದ ಪಾಠ ಬಹಳಷ್ಟಿದೆ. ಹೆಡ್‌ಮಾಸ್ಟರ್‌ನೊ ಪ್ರಚಂಡ ಕಿರಿಕ್ ಆಸಾಮಿ. ಇತ್ತ ಕರೆಯುತ್ತಿರುವವ ಸೋದರಳಿಯ. ಹೋಗಲಾಗದು, ಹೋಗದೆ ಇರಲಾಗದಂತಹ ಹ್ಯಾಮ್ಲೆಟ ಸಂಕಟದಲ್ಲಿ ನೆನಪಾಗುವುದೇ 'ಪಿತ್ತನೆಪ'. ಮತ್ತದೆ ಸುಳ್ಳಿನಬಂಡಿ ಉರುಳಿಸಿ, ಉಳಿದುಕೊಳ್ಳುತ್ತೇನೆ.

ನನ್ನದು ಪಿತ್ತ ಪ್ರಕೃತಿ ಅಂಬೋದು ನಮ್ಮೂರಿಗೆಲ್ಲ ಜಗಜ್ಜಾಹಿರವಾಗಿರುವ ಸಂಗತಿ. ಇದ್ದರೂ ಇರಬಹುದೆಂದು ಕೊಂಡು ಅವರೆಲ್ಲ ನನ್ನನ್ನು ನಂಬುತ್ತಾರೆ ಅಥವಾ ಅವರು ನಂಬಿರಬಹುದೆಂದು ನಾನು ಅಂದ್ಕೊಳ್ಳುತ್ತೇನೆ.

ಪಿತ್ತಕ್ಕೆ ಹುಚ್ಚು ಅಂಬೊ ಇನ್ನೊಂದು ಅರ್ಥವೂ ಇದೆ. ಇರಬಹುದೇನೊ. ಇಲ್ಲದಿದ್ದರೆ ಬರೆಯುವ ನನ್ನ ಹುಚ್ಚಿಗೆ ಅದೇಕೆ ಪ್ರೇರಕ ಶಕ್ತಿಯಾಗಿರುತ್ತಿತ್ತು? ಮದುವೆಗೂ ಹುಚ್ಚಿಗೂ ತಳಕು ಹಾಕಿಲ್ಲವೆ, ಹಾಗೆ, ಬರೆಹದ ಹುಚ್ಚು ಬಿಡದೆ ಪಿತ್ತ ಶಮನವಾಗದು, ಪಿತ್ತ ಶಮನವಾದರೆ ಬರೆಹ ಹುಟ್ಟದು. ಪಿತ್ತಜನ್ಯ ಸಾಹಿತ್ಯವಿರುವಂತೆ ಸಾಹಿತ್ಯಜನ್ಯ ಪಿತ್ತವೂ ಇದೆ. ಇದು ನನ್ನ ಪಿತ್ತಾನುಭವ.

ಒಂದೊಂದು ಬರೆಹ ಮುಗಿಸುತ್ತಿದ್ದಂತೆಯೆ ನನ್ನೊಳಗೆ ಪಿತ್ತಾಕ್ರಮಣವಾಗಿಬಿಟ್ಟಿರುತ್ತದೆ. ಒಂದು ಖರೀದಿಸಿದರೆ ಇನ್ನೊಂದು ಉಚಿತ ಅನ್ನುವಂತೆ ನನಗಿಲ್ಲಿ ಡಬಲ್ ಬೆನ್‌ಫಿಟ್ ! ಒಂದು, ಮನದೊಳಗೆ ಕಡೆಗೋಲಾಡಿಸುತ್ತಿರುವ ಅನುಭವಗಳಿಗೆಲ್ಲ ಅಕ್ಷರ ರೂಪಕೊಟ್ಟು, ನಿಮ್ಮೊಂದಿಗೆ ಹಂಚಿಕೊಂಡ ಧನ್ಯಭಾವ. ಮತ್ತೊಂದು, ಎಂಟ್ಹತ್ತು ದಿನಗಳ ಕಾಲ ಲಭಿಸಬಹುದಾದ ಪಿತ್ತ ಸಖ್ಯದ ಸುಖ. ಪ್ರಸ್ತುತ ಬರೆಹ ಕೂಡ ಅದೇ ಪಿತ್ತಾನುಭವದ ಫಲ.

ಪಿತ್ತೇಶ್ವರ ಚಿರಾಯುರ್ಭವ಼.

ಮಲ್ಲಿಕಾರ್ಜುನ ಹುಲಗಬಾಳಿ
ಬಸವ ಸಂಪದ, ಬನಹಟ್ಟಿ - ೫೮೭ ೩೧೧, ಬಾಗಲಕೋಟ ಜಿಲ್ಲೆ

# ಮತ ಧರ್ಮಗಳ ಮೇಲಾಟ

ಧರ್ಮ ಎಂದರೆ ಏನು ಎಂಬುದರ ಬಗ್ಗೆ ಗಾಂಧೀಜಿ ಅವರ ಚಿಂತನೆ ಹೀಗೆ ಹರಿದಿದೆ: ''ನಾನು ಬರೀ ಭಾರತೀಯರನ್ನು ಮಾತ್ರವಲ್ಲ, ಇಡೀ ಜಗತ್ತಿನ ಜನರೆಲ್ಲರನ್ನೂ ಪ್ರೀತಿಸುತ್ತೇನೆ. ಭಿನ್ನ ಮತ-ಧರ್ಮಗಳಿಗೆ ಸೇರಿದ ಜನರ ಜೊತೆ ಬೆರೆಯುವುದರಿಂದ ಮತ್ತು ಅವರೊಂದಿಗೆ ಸಹಬಾಳ್ವೆ ನಡೆಸುವುದರಿಂದ ನಾವು ಬದುಕಿನಲ್ಲಿ ಉತ್ತಮ ವ್ಯಕ್ತಿಗಳಾಗುತ್ತೇವೆ. ಸಹಜೀವನ ನಡೆಸುವುದಾದರೆ ಜಗತ್ತಿನಲ್ಲಿ ಬದುಕುವುದು ಈಗಿನದಕ್ಕಿಂತ ಹೆಚ್ಚು ಸಹ್ಯವಾಗುತ್ತದೆ. ಹೆಚ್ಚಿನ ಅರಿವು ಮತ್ತು ಸಹನೆಯನ್ನು ಬೆಳೆಸಿಕೊಳ್ಳಿ ಎನ್ನುವುದು ನನ್ನ ವಿನಂತಿ. ನಿಮ್ಮ ಧರ್ಮವನ್ನು ನೋಡುವ ದೃಷ್ಟಿಯಿಂದಲೇ ಬೇರೊಂದು ಧರ್ಮವನ್ನೂ ನೋಡಬೇಕೆಂದು ನಾನು ಜನರನ್ನು ಕೇಳಿಕೊಳ್ಳುತ್ತೇನೆ. ನನ್ನ ಕನಸಿನ ಭಾರತ ಹಿಂದೂ ಅಥವಾ ಕ್ರಿಶ್ಚಿಯನ್ ಅಥವಾ ಮುಸ್ಲಿಂ, ಹೀಗೇ ಯಾವುದೇ ಒಂದು ಧರ್ಮಕ್ಕೆ ಸೇರಿದ್ದಾಗಿರಬಾರದು. ಅದು ಎಲ್ಲ ಧರ್ಮಗಳಿಗೂ ಸೇರಿದ ಜನರು ಜೊತೆ ಜೊತೆಯಲ್ಲಿ ಜೀವಿಸುವ ತಾಣವಾಗಬೇಕು.'' ಇದು ಬಾಪೂಜಿಯವರು ಕಂಡ ಸಹಬಾಳ್ವೆಯ ಕನಸಿನ ಭಾರತ. (ಬಿ.ಎ. ಶ್ರೀಧರ, ಬಾಪು ಚಿಂತನೆ, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು)

ಗ್ರಾಮ ಸ್ವರಾಜ್ಯ ಕಟ್ಟುವುದರೊಂದಿಗೆ ಸೌಹಾರ್ದ ಭಾರತವನ್ನು ಕಟ್ಟುವುದೂ ಅವರಿಗೆ ಆದ್ಯತೆಯ ಪ್ರಶ್ನೆಯಾಗಿತ್ತು. ಆದರೆ ಅವರು ಯಾವುದನ್ನು ಆಗಬಾರದೆಂದು ತ್ರಿಕಾಲ ಧ್ಯಾನಿಸುತ್ತಿದ್ದರೊ ಅದು ಸ್ವರಾಜ್ಯ ಬಂದ ದಿನದಂದೇ ಹೊತ್ತಿ ಉರಿಯಲು ಆರಂಭಿಸಿತು. ಹಿಂದೂ-ಮುಸ್ಲಿಂ ಕೋಮು ಗಲಭೆಗಳು ದೇಶಾದ್ಯಂತ ಹೊಗೆಯಾಡಿದವು. ಎಷ್ಟೋ ಅಮಾಯಕ ಜೀವಗಳು ಬಲಿಯಾದವು. ಗಾಂಧೀಜಿ ಹತ್ಯೆಯ ತರುವಾಯ ಸುಮಾರು ೪೦ ವರ್ಷಗಳ ಕಾಲ ತಲೆ ತಗ್ಗಿಸಿದ್ದ ಹಿಂದೂ ಕೋಮುವಾದಿಗಳು ಡಿಸೆಂಬರ್ ೬, ೧೯೯೨ರಂದು ಬಾಬರಿ ಮಸೀದಿಯನ್ನು ಬೀಳಿಸುವುದರೊಂದಿಗೆ ಮತ್ತೆ ತಲೆಯೆತ್ತಿದರು. ಮುಸ್ಲಿಂ ಮೂಲಭೂತವಾದಿಗಳೂ ಹಿಂದೂ ಪುರೋಹಿತಶಾಹಿಯ ವಿರುದ್ಧ ತಿರುಗಿಬಿದ್ದರು. ಆದರೆ ಇವರು ಅಲ್ಪಸಂಖ್ಯಾತರಾಗಿದ್ದ ಕಾರಣ ಯತ್ನವಿಲ್ಲದೆ ಭೂಗತ ಚಟುವಟಿಕೆಗಳಲ್ಲಿ ತೊಡಗಿದರು. ಭಯೋತ್ಪಾದನೆ, ಉಗ್ರಗಾಮಿತನ, ಸರಣಿ ಬಾಂಬ್ ಸ್ಫೋಟ-ಎಸೆತಗಳು ಎರಡೂ ಕಡೆ ಆರಂಭವಾದುವು. ಇಂದು ಸರ್ವಜನಾಂಗದ ಶಾಂತಿಯ ತೋಟವಾಗಬೇಕೆಂಬ ಆಶಯಕ್ಕೆ ವಿರುದ್ಧವಾಗಿ ಸದಾ ಗಲಭೆ, ಹಿಂಸೆ, ರಕ್ತಪಾತಗಳು ಮೇಲಿಂದ ಮೇಲೆ ಜರುಗುತ್ತಿವೆ.

ಡಾ॥ ರಹಮತ್ ತರೀಕೆರೆ ಹೇಳುವಂತೆ ''ಕಳೆದೆರಡು ದಶಕಗಳಿಂದ ನಮ್ಮ ನಾಡಿನ ಬದುಕನ್ನು ಮುಖ್ಯವಾಗಿ ಮೂರು ವಿದ್ಯಮಾನಗಳು ಕಂಗಾಲುಗೊಳಿಸಿವೆ. ಅವೆಂದರೆ – ಪ್ರಪಂಚೀಕರಣವೆಂಬ ಕುದುರೆಯ ತೊತ್ತಳತುಳಿತ, ಕೋಮುವಾದದ ಕಾಡ್ಗಿಚ್ಚು ಹಾಗೂ ಮೂಲಭೂತವಾದದ ಅತಿರೇಕಗಳು'' (ಅರಿಕೆ, ಧರ್ಮಪರೀಕ್ಷೆ, ನವಕರ್ನಾಟಕ, ೨೦೦೮). ಇವುಗಳಿಂದ ನಾಡಿನ ಕೆಲವು ಸಮೂಹಗಳು ತಲ್ಲಣಗೊಂಡಿದ್ದರೆ, ಇನ್ನು ಕೆಲವು ಗೆದ್ದೆವೆಂದು ವಿಜೃಂಭಿಸುತ್ತಿವೆ. ಈ ಬಗ್ಗೆ ಏಳುತ್ತಿರುವ ವಾಗ್ವಾದಗಳು, ಭಿನ್ನಮತಗಳು ಅಮಾಯಕ ಜನರನ್ನು ದಿಕ್ಕು ತಪ್ಪಿಸುತ್ತಿವೆ. 'ಧರ್ಮ ರಕ್ಷಿಸಿದವರನ್ನು ಆ ಧರ್ಮವೇ ರಕ್ಷಿಸುತ್ತದೆ' ಎಂಬ ಆರ್ಯೋಕ್ತಿಯೇನೋ ಇದೆ. ಆದರೆ ಇದರ ಅನುಷ್ಠಾನದಲ್ಲಿ ಮಾತ್ರ ಲೋಪವಾಗುತ್ತಿದೆ. ಹಾಗಾದರೆ ಅನುಷ್ಠಾನದಲ್ಲಿ ಲೋಪ ಏಕೆ ಉಂಟಾಗುತ್ತಿದೆ? ನಿಜಕ್ಕೂ ಧರ್ಮ ಎಂದರೆ ಏನು? ಸಮಕಾಲೀನ ಜಗದ್ಗುರುಗಳು, ಪೀಠಾಧಿಪತಿಗಳು, ವ್ಯಾಟಿಕನ್ ಗುರುಗಳು, ಮೆಕ್ಕಾ ಮದೀನದ ಮೌಲ್ವಿಗಳು – ಇವರೆಲ್ಲರೂ ಧರ್ಮಕ್ಕೆ ಕೊಡುವ ವ್ಯಾಖ್ಯಾನ ಏನು? ಸತ್ಯ, ಅಹಿಂಸೆ, ಕರುಣೆ, ಪ್ರೇಮ ಇವು ಯಾವುದೇ ಧರ್ಮದ ತೇರು ಹರಿಯಲು ನಾಲ್ಕು ಗಾಲಿಗಳಲ್ಲವೆ? ಇಂತಿರಲು ಈ ಪ್ರವಾಚಕರು ಸೋತರೆ? ಅಥವಾ ಹಿಂಬಾಲಕರು ಸೋತರೆ? ಇಂತಹ ಹತ್ತು ಹಲವು ಬೇತಾಳ ಪ್ರಶ್ನೆಗಳು ಹೀಗೇ ಮುಂದುವರಿಯುತ್ತಿವೆ. ಉತ್ತರಿಸಲಾರದೆ ಅದರ ಹೆಣಭಾರ ಹೊತ್ತು ತಿರುಗುತ್ತಿದ್ದಾನೆ ವಿಕ್ರಮ.

ಎಲ್ಲ ಧರ್ಮಗಳೂ ವರ್ಗಮೂಲದಿಂದ ಹುಟ್ಟಿಬಂದವುಗಳೇ. ಆ ನಂತರ ಅವುಗಳಿಗೆ ಅಧ್ಯಾತ್ಮದ ಸಿಹಿಲೇಪನ ಮಾಡಲಾಗಿದೆಯಷ್ಟೆ. ಇವತ್ತಿನ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಯಾವ ಮತಧರ್ಮ ತಾನೆ ಸಂಪತ್ತು, ಅಧಿಕಾರ ಹಾಗೂ ಕೀರ್ತಿಯ ಭ್ರಮೆಯಿಂದ ದೂರ ಉಳಿದಿದೆ? ನಿಜವಾಗಿಯೂ ಧರ್ಮ ಸಂರಕ್ಷಕರೆಂದರೆ ಸಂತರು, ಸೂಫಿ, ದರವೇಶಿಗಳು ತಾನೆ? ಉಳಿದಂತೆ ನಾಮಮಾತ್ರದ ಯಾವ ಪೀಠಾಧಿಪತಿ, ಜಗದ್ಗುರುವೂ ಕೂಡ ಮಾನವತೆಯಿಂದ ದೂರವೇ. ಇಲ್ಲವಾಗಿದ್ದರೆ ಜನರನ್ನು ಕೊಂದು ಕಾಣಿಕೆ ಡಬ್ಬಿಗೆ ಹಣ ತಂದು ಸುರಿಯುವ ಅನುಯಾಯಿಗಳನ್ನು ಅವರೇಕೆ ಆಶೀರ್ವದಿಸುತ್ತಿದ್ದರು; ಪಶ್ಚಾತ್ತಾಪಪಟ್ಟವರನ್ನು ಕ್ಷಮಿಸಿ ಬಿಡುತ್ತಿದ್ದರು; ನಾಯಿ ಬಾಲಕ್ಕೆ ದಬ್ಬೆ ಕಟ್ಟುವ ಕೆಲಸ ತಾನೆ ಅವರಿಗೇಕೆ ಬೇಕಾಗಿತ್ತು? ಇಷ್ಟಕ್ಕೂ ಈ ಮಧ್ಯವರ್ತಿಗಳು ದೈವ ಹಾಗೂ ಭಕ್ತರ ನಡುವೆ ಯಾಕೆ ನುಗ್ಗಿಬರುತ್ತಾರೆ - ಲಾಭವಿಲ್ಲದೆ?

ಮತ-ಧರ್ಮಗಳ ಮೇಲಾಟ ಇಂದು ನಿನ್ನೆಯದಲ್ಲ; ನಾಳೆ ನಾಡಿದ್ದು ನಿಲ್ಲುವುದಲ್ಲ; ಇವು ತಂತಮ್ಮ ಅಸ್ತಿತ್ವಕ್ಕಾಗಿ ಸೆಣಸಾಡುವುದು ಎಷ್ಟು ಪ್ರಾಚೀನವೋ ಅಷ್ಟೇ ಅರ್ವಾಚೀನವೂ ಹೌದು. ಇತಿಹಾಸ ಪೂರ್ವಕಾಲದಿಂದಲೂ ಈ ಸಂಘರ್ಷ ನಡೆದೇ ಇದೆ. ''ಇಲ್ಲಿರುವ ಎಲ್ಲ ಸಂಪತ್ತು ಈಶ್ವರ ಕೊಟ್ಟದ್ದು. ಅದನ್ನು ಹಂಚಿಕೊಂಡು ಊಟ ಮಾಡಿ'' ಎಂದು ಉಪನಿಷತ್ ಋಷಿಗಳು ಪ್ರಾರ್ಥಿಸಿದರು. ಆದರೆ ವಿಚಾರವಾದಿ ಪ್ರೊ॥ ಕೆ. ಜಿ. ನಾಗರಾಜಪ್ಪನವರು ಗುರುತಿಸಿರುವಂತೆ ವಲಸಿಗರಾದ ವೈದಿಕರು ಯಜ್ಞಯಾಗಾದಿಗಳ ಮೂಲಕ ಇಲ್ಲಿನ ಗಣಸಮೂಹಗಳ ಜೀವನಾಧಾರವಾಗಿದ್ದ ಗೋವುಗಳನ್ನು ಬಲಿ ಕೊಟ್ಟು ತಿಂದು ಕ್ಷಯಿಸುತ್ತಿದ್ದರು. ಆದ್ದರಿಂದ ವಣಿಕ ವರ್ಗಕ್ಕೆ ಸೇರಿದ ಜೈನರು ಮತ್ತು ಬೌದ್ಧರು ಅಹಿಂಸಾ ತತ್ವವನ್ನು ಪ್ರತಿಪಾದಿಸುವ ಮೂಲಕ ಗೋವು ಸಂರಕ್ಷಣೆಗೆ ಮುಂದಾದರು. ಅದು ಅವರ ಜೀವನ ಮಾರ್ಗಕ್ಕೆ

ಎಲ್ಲ ಧರ್ಮಗಳೂ ವರ್ಗಮೂಲದಿಂದ ಹುಟ್ಟಿಬಂದವುಗಳೇ. ಆ ನಂತರ ಅವುಗಳಿಗೆ ಅಧ್ಯಾತ್ಮದ ಸಿಹಿಲೇಪನ ಮಾಡಲಾಗಿದೆಯಷ್ಟೆ. ಇವತ್ತಿನ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಯಾವ ಮತಧರ್ಮ ತಾನೆ ಸಂಪತ್ತು , ಅಧಿಕಾರ ಹಾಗೂ ಕೀರ್ತಿಯ ಭ್ರಮೆಯಿಂದ ದೂರ ಉಳಿದಿದೆ ? ನಿಜವಾಗಿಯೂ ಧರ್ಮ ಸಂರಕ್ಷಕರೆಂದರೆ ಸಂತರು, ಸೂಫಿ, ದರವೇಶಿಗಳು ತಾನೆ ? ಉಳಿದಂತೆ ನಾಮಮಾತ್ರದ ಯಾವ ಪೀಠಾಧಿಪತಿ, ಜಗದ್ಗುರುವೂ ಕೂಡ ಮಾನವತೆಯಿಂದ ದೂರವೇ. ಇಲ್ಲವಾಗಿದ್ದರೆ ಜನರನ್ನು ಕೊಂದು ಕಾಣಿಕೆ ಡಬ್ಬಿಗೆ ಹಣ ತಂದು ಸುರಿಯುವ ಅನುಯಾಯಿಗಳನ್ನು ಅವರೇಕೆ ಆಶೀರ್ವದಿಸುತ್ತಿದ್ದರು; ಪಶ್ಚಾತ್ತಾಪಪಟ್ಟವರನ್ನು ಕ್ಷಮಿಸಿ ಬಿಡುತ್ತಿದ್ದರು; ನಾಯಿ ಬಾಲಕ್ಕೆ ದಬ್ಬೆ ಕಟ್ಟುವ ಕೆಲಸ ತಾನೆ ಅವರಿಗೇಕೆ ಬೇಕಾಗಿತ್ತು ? ಇಷ್ಟಕ್ಕೂ ಈ ಮಧ್ಯವರ್ತಿಗಳು ದೈವ ಹಾಗೂ ಭಕ್ತರ ನಡುವೆ ಯಾಕೆ ನುಗ್ಗಿಬರುತ್ತಾರೆ - ಲಾಭವಿಲ್ಲದೆ ?

**ಪ್ರೊ॥ ಶಿವರಾಮಯ್ಯ**

ಅನಿವಾರ್ಯವಾಗಿತ್ತು ಕೂಡ. ವೈದಿಕರ ಕರ್ಮ ಕಾಂಡದ ವಿರುದ್ಧ ಪ್ರತಿಕ್ರಿಯಾತ್ಮಕವಾಗಿ ಬೆಳೆದ ಜೈನ ಹಾಗೂ ಬೌದ್ಧ ಧರ್ಮಗಳು ತಮ್ಮ ಉಪದೇಶಗಳನ್ನು ಜನರ ಆಡುಭಾಷೆಯಲ್ಲಿ ಹೇಳಲು ಪ್ರಕ್ರಮಿಸಿದುವು. ಆದ್ದರಿಂದ ಮೊಟ್ಟಮೊದಲ ಬಾರಿಗೆ ದೇಶ ಭಾಷಾ ಮಾಧ್ಯಮವನ್ನು ಜಾರಿಗೊಳಿಸಿದ ಶ್ರೇಯಸ್ಸು ಜೈನ ಹಾಗೂ ಬೌದ್ಧ ಗುರುಗಳಿಗೆ ಸಲ್ಲಬೇಕು. ಆಗ ಸಂಸ್ಕೃತ ಜನರಿಂದ ಮತ್ತಷ್ಟು ದೂರವಾಗಬೇಕಾಯಿತು. ಪ್ರಾಕೃತ ಮತ್ತು ಪಾಳಿ ಭಾಷೆಗಳ ಮೂಲಕ ಮಹಾವೀರ, ಬುದ್ಧ ಜನರ ಬಳಿಗೆ ಬಂದರು. ಆಗ ಪವಾಡವೋ ಎಂಬಂತೆ ಈ ಧರ್ಮಗಳು ಜನಪ್ರಿಯವಾಗುತ್ತಹೋದವು. ಆದರೆ ಚಂದ್ರಗುಪ್ತ ಮೌರ್ಯನ ಗುರು ಚಾಣಕ್ಯನ (ಕ್ರಿ. ಪೂ. ೪ನೇ ಶತಮಾನ) ಕಾಲಕ್ಕೆ ಮತ್ತೆ ವೈದಿಕ ಧರ್ಮದ ಪ್ರಾಬಲ್ಯತೆ ಹೆಚ್ಚಾಯಿತು. ಆದರೂ ಸಾಮಾನ್ಯರಿಂದ ಸಂಸ್ಕೃತ ಭಾಷೆ ದೂರವೇ ಉಳಿಯಿತು.

ಈ ಹಿನ್ನೆಲೆಯಲ್ಲಿ ವೈದಿಕರ ಅಸಹನೆ ಹೆಚ್ಚಾಯಿತು. ನಿರಾತ್ಮವಾದಿಗಳೆಂದು ಬೌದ್ಧರನ್ನು ಜರೆದು, ಅವರ ಸಂಘಗಳನ್ನು ನಿರ್ವೀರ್ಯಗೊಳಿಸಿ, ಬೌದ್ಧ ಧರ್ಮವನ್ನು ಹುಟ್ಟಿದ ನೆಲೆಯಿಂದ ಹೊರ ಅಟ್ಟಿದರು. ಆದರೆ ಜೈನರು ಚಾತುರ್ವರ್ಣ್ಯ ಪದ್ಧತಿಯನ್ನು ಆತ್ಮವಾದವನ್ನು ಒಪ್ಪಿಕೊಳ್ಳುವ ಮೂಲಕ ವೈದಿಕ ರೊಂದಿಗೆ ಇಲ್ಲಿಯೇ ಬದುಕಿದರು. ಈ ಧರ್ಮ ವೈಚಾರಿಕತೆಯ ನೆಲೆಯಲ್ಲಿ ಅಮೋಘವಾಗಿದ್ದರೂ ಆಚರಣೆಯ ದೃಷ್ಟಿಯಲ್ಲಿ ಬಹಳ ಸೂಕ್ಷ್ಮ ಹಾಗೂ ಕಷ್ಟಕರ. ಯಾಕೆಂದರೆ ಆತ್ಮ ಮತ್ತು ಜೀವ ಒಂದೇ ಆಗಿಯೂ, ಜೀವ ಜೀವವನ್ನು ತಿನ್ನುವುದೇ ನೈಸರ್ಗಿಕ ಧರ್ಮವಾಗಿಯೂ ಇರುವ ಈ ಭೂಮಂಡಲದಲ್ಲಿ ಜಿನಧರ್ಮದ ಅಹಿಂಸಾ ತತ್ವ ಪರಿಪಾಲನೆ ಹೇಗೆ ತಾನೆ ಸಾಧ್ಯ? ಆದ್ದರಿಂದ ಬಹುಜನರಿಂದ ಇದು ದೂರ ಉಳಿದಿದೆ. ಅದಕ್ಕೆ ಅದರ ಅನಾಕ್ರಮಣಶೀಲತೆಯೂ ಒಂದು ಕಾರಣವಾಗಿರಬಹುದು. ಮುಂದೆ ಜೈನರ ನಿರೀಶ್ವರವಾದವನ್ನು ಒಪ್ಪದ ಶಂಕರಾಚಾರ್ಯರು ವೇದಾಂತ ಧರ್ಮವನ್ನು ಪುನರುಜ್ಜೀವನಗೊಳಿಸಿ ಅದ್ವೈತ ಸಿದ್ಧಾಂತವನ್ನು ಸ್ಥಾಪಿಸಿದರು. ನಂತರದ ಕಾಲದಲ್ಲಿ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತವನ್ನೂ, ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನೂ ಮಂಡಿಸಿದರು. ಈ ತ್ರಿಮತಾಚಾರ್ಯರ ಪಂಗಡಗಳಲ್ಲಿ ಈಗಲೂ ಒಮ್ಮತವಿಲ್ಲ.

ಈ ಕಾಲಘಟ್ಟದ ಅನೇಕ ಸಂಘರ್ಷಗಳನ್ನು ಕನ್ನಡ ಸಾಹಿತ್ಯ ದಾಖಲಿಸಿದೆ. ಧಾರ್ಮಿಕ ಕೇಂದ್ರಗಳ ನಾಶ, ಹಲ್ಲೆ-ಪ್ರತಿಹಲ್ಲೆಗಳು ನಡೆದುಹೋಗಿವೆ. ಆಂಧ್ರ ಪ್ರದೇಶದ ನಾಗಾರ್ಜುನಕೊಂಡದ ಪಾಳು ಇವತ್ತಿಗೂ ಶಂಕರಾಚಾರ್ಯರ ಶಿಷ್ಯ ವೃಂದ ನಡೆಸಿದ ಗೂಂಡಾಗಿರಿಗೆ ಸಾಕ್ಷಿಯಾಗಿದೆ. ಪ್ರತಿಯೊಂದು ಧರ್ಮವೂ ತನ್ನ ಹಿತಾಸಕ್ತಿಗಾಗಿ ಹೋರಾಡಿದೆ. ಅಲ್ಲಿ ಎದ್ದು ಕಾಣುವುದು ಅವರವರ ವರ್ಗ ಹಿತಾಸಕ್ತಿಯಲ್ಲದೆ ಬೇರೇನೂ ಇಲ್ಲ. ವಚನ ಚಳವಳಿ ಇದನ್ನು ಚೆನ್ನಾಗಿ ತೆರೆದು ತೋರಿಸುತ್ತದೆ. ಆಗ ಲಿಂಗಧಾರಿ ಶರಣರು ಅನೇಕ ರಿಯಾಯಿತಿಗಳನ್ನು ಪಡೆದರು. ಆದರೆ ಯಾವ ಧಾರ್ಮಿಕ ಪರಿವೆಯೇ ಇಲ್ಲದ ಜನ ಭವಿಗಳಾಗಿ



ಹೆದರಬೇಡಿ ಸಾರ್... ಉಗ್ರಗಾಮಿ ಗಳು ಕಂಡು ಬಂದರೆ ತಕ್ಷಣ ಹಾಕ್ಕೇಕೆಂದು ರೆಡಿ ಇಟ್ಕೊಂಡಿದ್ದೇನೆ...

ದೂರವೇ ಉಳಿದರು. ಇದನ್ನೇ ನೆಪ ಮಾಡಿಕೊಂಡು, ಜನಪ್ರಿಯವಾಗುತ್ತಿದ್ದ ವಚನ ಚಳವಳಿಯ ವಿರುದ್ಧ ಕರ್ಮಠ ಬ್ರಾಹ್ಮಣರು ಪಿತೂರಿ ನಡೆಸಿದರು. ಬಿಜ್ಜಳನ ಬಳಿ ಚಾಡಿ ಮಾತಾಡಿ ಬಸವಣ್ಣನನ್ನು ಪ್ರಧಾನಿ ಪಟ್ಟದಿಂದ ಕೆಳಗಿಳಿಸಲು ಯತ್ನಿಸಿದರು. ಮಹೇಶ್ವರ ಸ್ಥಲದ ಶರಣರೂ ಅವರ ವಿರುದ್ಧ ದಂಗೆ ಎದ್ದರು. ಆಮೇಲಿನ ಇತಿಹಾಸ ಎಲ್ಲರಿಗೂ ಗೊತ್ತಿರುವುದೇ ಆಗಿದೆ.

ಇವೆಲ್ಲವೂ ಕಲ್ಯಾಣದ ಕ್ರಾಂತಿಯಲ್ಲಿ ಪರ್ಯವಸಾನ ವಾದವು. ವ್ಯವಸ್ಥೆ ಹಾಗೇ ಉಳಿಯಿತು. ಹೀಗೆ ಮಧ್ಯಕಾಲೀನ ಶೈವ, ವೈಷ್ಣವ, ಬೌದ್ಧ, ಜೈನ ಹಾಗೂ ಮುಸಲ್ಮಾನ ಮತ ಸಂಪ್ರದಾಯಗಳು ತಂತಮ್ಮ ಮೇಲ್ಮೆಗಾಗಿ ನಡೆಸಿರುವ ಧರ್ಮಯುದ್ಧ (ಕ್ರುಸೇಡ್ಸ್, ಜೆಹಾದ್)ಗಳು ಅನೇಕ. ಇಂಥ ಸಂಘರ್ಷಗಳಲ್ಲಿ ಗೆಲವು ಸಾಧಿಸಿದ ಮತ ಧರ್ಮಗಳ ಅನುಯಾಯಿಗಳು (ಉದಾಹರಣೆಗೆ, ಶಂಕರಾಚಾರ್ಯರ ಶಿಷ್ಯರು, ವೀರಶೈವ ಶರಣರು, ಆಕ್ರಮಣಕಾರಿ ಮುಸಲ್ಮಾನರು) ಉಳಿದವರ ಪೂಜಾಮಂದಿರಗಳನ್ನು, ಬಸದಿಗಳನ್ನು, ವಿಹಾರ ಗಳನ್ನು ಹಾಳುಮಾಡಿ, ಅವರ ಮತೀಯ ಲಾಂಛನ ಗಳನ್ನು ಲೇವಡಿ ಮಾಡಿ, ವಿಧಿ ಆಚರಣೆಗಳಿಗೆ ಅಪಾರ್ಥ ಕಲ್ಪಿಸಿ, ಪುರಾಣಾಖ್ಯಾನಗಳನ್ನು ಪ್ರಶ್ನಿಸಿ, ತಂತಮ್ಮ ಮತ ಸಂಪ್ರದಾಯಗಳೇ ಸರ್ವಶ್ರೇಷ್ಠವೆಂದು ಜಾಹೀರು ಪಡಿಸಿರುವುದು ಸರ್ವೇಸಾಮಾನ್ಯ. ಈ ಬಗ್ಗೆ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಮಾಹಿತಿಗಳು ದೊರೆಯುತ್ತವೆ. ಈ ನಿಟ್ಟಿನಲ್ಲಿ ಹರಿಹರ (ಆದಯ್ಯನ ರಗಳೆ), ರಾಘವಾಂಕ (ಸೋಮನಾಥ ಚರಿತೆ), ಬ್ರಹ್ಮಶಿವ (ಸಮಯಪರೀಕ್ಷೆ), ವೃತ್ತವಿಲಾಸ (ಧರ್ಮ ಪರೀಕ್ಷೆ) ಮುಂತಾದವರ ಕೃತಿಗಳನ್ನು ಸಮೀಕ್ಷಿಸಬಹುದು. ಈ ಕವಿ ಜನರು ಅನ್ಯಮತ ಖಂಡನೆ, ಸ್ವಮತ ಮಂಡನೆಯ ಅವಸರದಲ್ಲಿ ಒಮ್ಮೊಮ್ಮೆ 'ಸ್ವ' ಮತವನ್ನೇ ಪರೋಕ್ಷವಾಗಿ ಅಗ್ನಿಪರೀಕ್ಷೆಗೆ ಒಳಪಡಿಸುತ್ತಿರುವಂತೆ ಕಂಡರೆ ಆಶ್ಚರ್ಯವಿಲ್ಲ. ಉದಾಹರಣಗೆ, ಬ್ರಹ್ಮಶಿವನ (೧೨ನೇ ಶತಮಾನ) ಸಮಯ ಪರೀಕ್ಷೆಯನ್ನು ನೋಡಬಹುದು.

## ಅದ್ಭುತ

ಸಮುದ್ರದಂಥ ನನ್ನ
ಪ್ರೀತಿಯನ್ನ
ಯಃಕಶ್ಚಿತ್
ಒಂದು ಮರುಳು ಕಣ
ತಡೆದು ನಿಲ್ಲಿಸಿತು.
ಪ್ರೀತಿಗುಂಟು
ಒರತೆಯ ಗುಣ!

ವಿ. ಹರಿನಾಥ ಬಾಬು
ಸದಾಶಿವ ನಗರ, ಸಿರುಗುಪ್ಪ - ೫೮೩ ೧೨೧

ಹೀಗೆ ಮತಧರ್ಮಗಳ ಮೇಲಾಟ ಕೇವಲ ಭರತ ಭೂಮಿಗೆ ಮಾತ್ರ ಮೀಸಲಾಗಿಲ್ಲ. ಪ್ರಪಂಚದ ಎಲ್ಲೆಡೆಯೂ ನಡೆದಿದೆ, ನಡೆಯುತ್ತಿದೆ. ನಿದರ್ಶನಕ್ಕೆ ಮಧ್ಯಯುಗದಲ್ಲಿ ಪರ್ಷಿಯಾದಲ್ಲಿ ಸಂಭವಿಸಿದ ಕ್ರುಸೇಡ್‌ಗಳನ್ನು ನೆನೆದರೆ ಮೈ ನಡುಕ ಹುಟ್ಟುತ್ತದೆ. ಒಂದೇ ಮೂಲದವರಾದ ಯಹೂದಿಗಳು, ಕ್ರಿಶ್ಚಿಯನ್ನರು ಹಾಗೂ ಮುಸ್ಲಿಮರು ''ನಾನು ಹೆಚ್ಚು'' ''ತಾನು ಹೆಚ್ಚು'' ಎಂದು ಧರ್ಮ ಸಂಸ್ಥಾಪನೆಗಾಗಿ ಹೋರಾಡುವ ಸಂದರ್ಭದಲ್ಲಿ ರಕ್ತದ ಹೊನಲು ಮಡುಗಟ್ಟಿ ಹರಿಯಿತು. ''ಅವರ ರಣ ತೇಜಿಗಳು ಎದೆಮಟ್ಟ ರಕ್ತಧಾರೆಯಲ್ಲಿ ಕುಡಿದು ದಾಹ ತಣಿಸಿಕೊಂಡು ಈಜುತ್ತ ದಾಂಟುತ್ತಿದ್ದವು'' ಎಂಬ ಮಾತಿದೆ. ಇದು ಉತ್ಪ್ರೇಕ್ಷೆಯ ಮಾತಾದರೂ ಪರ್ಷಿಯಾ ಸಾಮ್ರಾಜ್ಯದಲ್ಲಿ ನೆತ್ತರ ಧಾರೆ ಹರಿದಿದ್ದು ಸುಳ್ಳಲ್ಲ. ಇವತ್ತಿಗೂ 'ಜೆಹಾದ್' ಹೋರಾಟಗಳಿಗೆ ಅಲ್ಲಿ ಬರವಿಲ್ಲ.

ಪುನಃ ನಾವೀಗ ಕನ್ನಡ ಸಾಹಿತ್ಯದತ್ತ ತಿರುಗಿದರೆ, ಮತ ಧರ್ಮಗಳ ಮೇಲಾಟವನ್ನು ಅನನ್ಯವೆಂಬಂತೆ ಹಿಡಿದಿಟ್ಟಿರುವ ಕವಿ ಎಂದರೆ ದೇವಚಂದ್ರ (೧೭೭೦-೧೮೪೧). ಇವನ ಕೃತಿಯ ಹೆಸರು ರಾಜಾವಳೀ ಕಥಾಸಾರ. ಬಾಯಲ್ಲಿ ಜಾತ್ಯತೀತತೆಯ ಮಂತ್ರ, ಕೈಯಲ್ಲಿ ಜಾತಿ ರಾಜಕಾರಣದ ಕರಪತ್ರ. ಈ ಚಾಳಿ ಹೊಸದಲ್ಲ, ಸಾರ್ವಕಾಲಿಕವಾದುದು ಎಂಬುದನ್ನು ಆ ಕೃತಿ ಸಾದರ ಪಡಿಸುತ್ತದೆ. ಮತ ಪಂಥದ ನೇತಾರರು ತಾವು ಕಟ್ಟಿದ ಶಾಸ್ತ್ರ ಪುರಾಣಾದಿಗಳ ಕಟ್ಟಿಗೆ ಜನ ಒಳಪಟ್ಟು ಹತ್ತಿರ ಬಾರದಿದ್ದಾಗ ತಮ್ಮ ಸಂಖ್ಯಾಬಲವನ್ನು ಹೆಚ್ಚಿಸಿಕೊಂಡು ರಾಜ್ಯಾಧಿಕರಣ ವಶಪಡಿಸಿಕೊಳ್ಳಲೋಸುಗ ಸಂಖ್ಯಾ ಬಲವನ್ನು ಹೇಗಾದರೂ ಹೆಚ್ಚಿಸಿಕೊಳ್ಳಬೇಕಾಗುತ್ತದೆ ಯಷ್ಟೆ. ಅದಕ್ಕಾಗಿ ಬಲಾತ್ಕಾರದ ಮತಾಂತರಕ್ಕೆ ಮುಂದಾಗುತ್ತಿದ್ದರು. ಜನರನ್ನು ಬಲವಂತಪಡಿಸಿ ನಾಮ, ಲಿಂಗ, ಮುದ್ರೆಗಳನ್ನು ಒತ್ತುತ್ತಿದ್ದರು; ಹಾಗೆಯೆ ಮುಸಲ್ಮಾನರು ಸುನ್ನಿ ಮಾಡುತ್ತಿದ್ದರು.

ಇಂಥಲ್ಲಿ ಪ್ರತಿಭಟಿಸಿದವರ ಕರುಣಾಜನಕ ಚಿತ್ರಗಳನ್ನು ದೇವಚಂದ್ರ ಸಂಗ್ರಹಿಸಿ ಹಾಸ್ಯಭರಿತವಾಗಿ ವಿವರಿಸುತ್ತಾನೆ. ವೈದಿಕರ ಪ್ರಾಬಲ್ಯವಿದ್ದ ಕಾಲದಲ್ಲಿ ನಾಯಿಗೂ ವೇದ ಓದಲು ಬರುತ್ತಿತ್ತು ಎಂಬುದಾಗಿಯೂ, ವೀರಶೈವರ ಕಾಲದಲ್ಲಿ ನಾಯಿಕುನ್ನಿಗೂ ಲಿಂಗಧಾರಣೆ

ಮಾಡುತ್ತಿದ್ದರು ಎಂಬುದಾಗಿಯೂ, ಶ್ರೀವೈಷ್ಣವರ ಕಾಲದಲ್ಲಿ ಹಾದಿ ಬೀದಿಯಲ್ಲಿ ಸಿಕ್ಕಿದವರಿಗೆಲ್ಲ ಹಿಡಿದು ನಾಮ-ಮುದ್ರೆ ಒತ್ತುತ್ತಿದ್ದರು ಎಂಬುದಾಗಿಯೂ ಅವನ ರಾಜಾವಳಿ ಕಥೆ ದಾಖಲಿಸುತ್ತದೆ. ಅಲ್ಲದೆ ಲಿಂಗ ಜಂಗಮರು ಮಿಂಡಜಂಗಮರಾಗಿದ್ದರೂ ಅವರು ಸುಖೀ ಜಂಗಮರೆಂದೇ ಪೂಜಿಸಲ್ಪಡುತ್ತಿದ್ದರು – ಎಂಬುದಾಗಿಯೂ ವಿಡಂಬಿಸಲಾಗಿದೆ.

ಈ ಸಂಬಂಧ ನಿದರ್ಶನಕ್ಕಾಗಿ ಶ್ರೀವೈಷ್ಣವ ಮತಾವಲಂಬಿ ಮೈಸೂರಿನ ಚಿಕ್ಕದೇವರಾಯನ ಕಾಲದಲ್ಲಿ ನಡೆಯುತ್ತಿದ್ದ ಪ್ರಸಂಗಗಳನ್ನು ಕವಿ ನಿರೂಪಿಸಿರುವುದು ಸ್ವಾರಸ್ಯಕರವಾಗಿದೆ. ಶ್ರೀವೈಷ್ಣವನಾದ ದೊರೆ ನಾಮವಿರದವರು ತನ್ನ ಮುಖ ನೋಡಬಾರದೆಂದು ರಾಜಾಜ್ಞೆ ಹೊರಡಿಸಿದನಂತೆ. ಪರಿಣಾಮವಾಗಿ ಅನೇಕ ಜನ ಪರಿವಾರದವರು ನಾಮಧಾರಿಗಳಾದರು. ಕೆಲವು ಜೈನ ಪಂಡಿತರೂ ಸಹ ವೈಷ್ಣವರೊಂದಿಗೆ ನಂಟತನವನ್ನು ಬೆಳೆಸಿ ರಾಜನ ದಯಕ್ಕೆ ಪಾತ್ರರಾಗಿ ಸಿರಿವಂತರಾಗಿಬಿಟ್ಟರು.

''ಅಲ್ಲದೆ ಸ್ಥಳ ಪರಸ್ಥಳದ ಜನರಿಗೆಲ್ಲ ಬಲಾತ್ಕಾರದಿಂದ ನಾಮವನ್ನು ಹಾಕುತ್ತಿರಲು ಕೆಲವರು ಒಪ್ಪಿದರು; ಒಪ್ಪದ ಕೆಲವರು ಎದುರುಬಿದ್ದು ಸರ್ವಥಾ ಆಗದೆಂದರು. ಬಲಾತ್ಕಾರದಿಂದ ಇಕ್ಕಿದರೆ ಉಜ್ಜಿಬಿಟ್ಟರು. ಕೆಲವರು ಇಕ್ಕಿದರೇನು, ಎಂದು ಹೊಳೆಯಲ್ಲಿ ತೊಳೆದು ಹೋದರು. ಮತ್ತೆ ಕೆಲವರನ್ನು ಹಿಡಿದು ಮುದ್ರಾಧಾರಣೆ ಮಾಡುವಾಗ ಅಯ್ಯೋ ಎಂದು ಪ್ರಲಾಪಿಸಿ ಬಿಡಿಸಿಕೊಂಡು ಓಡಿದರು. ಒಬ್ಬಿಬ್ಬರು ಇಷ್ಟಕ್ಕೇ ಸಾಕೆಂದು ಒಂದೇ ನಾಮದಲ್ಲಿ ಓಡಿದರು. ಕೆಲವರು 'ಭುಜವನ್ನೇಕೆ ಸುಡುವುದು ? ಈ ಹೊಟ್ಟೆಗೋಸ್ಕರ ತಾನೆ ?' ಎಂದು ಡೊಳ್ಳನ್ನು ಮುಂದೊಡ್ಡಿದರು. ಹೀಗೆ ಅನೇಕ ರೀತಿಯಾಗಿ ಬಾಯಿಗೆ ಬಂದಂತೆ ಹೇಳಿಹೋದರು. ಭಾಗ್ಯವನ್ನು ಪಡೆವೆನೆಂಬ ಆಸೆಯಿಂದ ನಾಮವಿಕ್ಕಿಸಿಕೊಂಡ ಜನರನ್ನು ಆದರಿಸದೆ ವಿಚಾರಿಸದೆ ಹೋದುದರಿಂದ ನಾಮವನ್ನು ಹಾಕಿಸಿಕೊಂಡು ಕೆಟ್ಟರೂ, ಕಾರ್ಯವನ್ನು ಕೆಡಿಸಿದರೂ, ನಂಬಿಸಿ ಕೊಡದಿದ್ದರೂ – ನಾಮವಿಕ್ಕಿದನೆಂಬ ಮಾತು ಲೋಕಪ್ರಸಿದ್ಧಿಯಾಯಿತು.'' (ರಾಜಾವಳಿ, ಪುಟ ೨೮೬)

ಆರ್ಥಿಕ ಆಮಿಷಗಳನ್ನೊಡ್ಡಿ, ಒತ್ತಾಯದಿಂದ ಜನರನ್ನು ಮಣಿಸಿ ಮತಾಂತರಗೊಳಿಸುವ ಇವತ್ತಿನ ಚಿತ್ರವನ್ನೇ ರಾಜಾವಳಿ ಕಥೆ ಬಿಡಿಸಿಟ್ಟಂತಿದೆ. ಅಂದಿನ ರಾಜರು ಹಾಗೂ ಪುರೋಹಿತರ ಹುನ್ನಾರ ಹೇಗಿರುತ್ತಿದ್ದವು ಎಂಬುದನ್ನು ಮನಗಂಡರೆ ಇವತ್ತಿನ ರಾಜಕಾರಣಿಗಳೂ ಹಾಗೂ ಮತೀಯ ಗುರುಗಳ ಚಿತ್ರವೇ ಎದುರಾಗುತ್ತದೆ. ಆಮಿಷಗಳಿಗೆ ಒತ್ತಾಯಪೂರ್ವಕ ಬಲಿ ಬೀಳುವ ಅಮಾಯಕ ಜನರ ಕರುಣಾಜನಕ ಬಾಳು ಎಲ್ಲಾ ಕಾಲಕ್ಕೂ ಒಂದೇ ಆಗಿರುತ್ತದೆ. ಈ ಸತ್ಯವನ್ನು ಪ್ರಾತಿನಿಧಿಕವೆಂಬಂತೆ ದೇವಚಂದ್ರ ವಿಡಂಬಿಸಿದ್ದಾನೆ. ಈಗ ಯಾರಾದರೂ ಇಂಥ ಕಟು ಸತ್ಯವನ್ನು ನುಡಿದು ಜೀವಂತ ಇರಲು ಶಕ್ಯವೇ ? ಇವತ್ತು ಯಾರಾದರೂ ಮತ ಧರ್ಮಗಳ ಬಗ್ಗೆ ಈ ಸತ್ಯ ನುಡಿದುಬಿಟ್ಟರೆ ಸುಟ್ಟು ಹುರಿದುಬಿಟ್ಟಾರು. ದೇವಚಂದ್ರ ಇಂದೇನಾದರೂ ಬದುಕಿದ್ದರೆ ಕಲ್ಲು ಗಾಣಕ್ಕೆ ಹಾಕಿ ಅರೆದುಬಿಡುತ್ತಿದ್ದರು. ಪುಣ್ಯವಶಾತ್ ಅವನು ಬ್ರಿಟಿಷರ ಕಾಲದಲ್ಲಿದ್ದುದರಿಂದ ಬದುಕಿಕೊಂಡ. ಅವರು ಅಷ್ಟರಮಟ್ಟಿಗೆ ಜಾತ್ಯತೀತ ನಿಲುವಿನಿಂದ ರಾಜ್ಯವಾಳಿದರು.

ಹಾಗೆ ನೋಡಿದರೆ, ಎಲ್ಲ ಧರ್ಮಗಳ ಮೂಲಸೆಲೆ ಎಂದರೆ ಸತ್ಯ, ಪ್ರೇಮ, ಅಹಿಂಸೆ, ಕರುಣೆಗಳೇ. ಈ ನಾಲ್ಕು ಚಕ್ರಗಳ ಮೇಲೆ ಧರ್ಮದ ತೇರು ನಡೆಯುತ್ತದೆ. ಆದರೆ ಪೂಜಾರಿಗಳು ದೇವರ ರಥವನ್ನು ಹಿಂದಿಕ್ಕಿ ತಾವೇ ವಿಜೃಂಭಿಸುತ್ತಾರೆ. ಅವರಿಗೆ ರಕ್ಷಣೆಯಾಗಿ ರಾಜಕಾರಣಿಗಳು ಇರುತ್ತಾರೆ. ಶುದ್ಧ ಅಧ್ಯಾತ್ಮವಾದಿಗಳು ಎಲ್ಲೋ ತಲೆಮರೆಸಿಕೊಂಡು ತಿರುಗುತ್ತಿರುತ್ತಾರೆ. ಅನ್ಯಾಯದ ವಿರುದ್ಧ ಬಡವರ ಪರ ಅವರೇನಾದರೂ ಪ್ರಶ್ನಿಸಿದರೆ ಅವರು ಶಾಂತಿ ಕದಡುತ್ತಾರೆ, ಜನರನ್ನು ಎತ್ತಿ ಕಟ್ಟುತ್ತಾರೆ ಎಂಬ ಆಪಾದನೆಗೆ ಗುರಿಯಾಗಬೇಕಾಗುತ್ತದೆ. ಅಷ್ಟೇ ಅಲ್ಲ, ಹಾಗೆ ಅನ್ಯಾಯದ ವಿರುದ್ಧ ಪ್ರಶ್ನಿಸಿದವರನ್ನು ಎನ್‌ಕೌಂಟರ್ ಮೂಲಕ ಮುಗಿಸಲಾಗುತ್ತದೆ. ಅಷ್ಟರಮಟ್ಟಿಗಿದೆ ಪ್ರಭುತ್ವದ ಶಕ್ತಿ. ಕಟುಕನ ಬಳಿಗೆ ಬರುವ ಹರಕೆಯ ಕುರಿಗೆ ಕುಂಕುಮವಿಟ್ಟು ಮಂತ್ರ ಹೇಳಿ ದಕ್ಷಿಣೆ ಕಾಸಿಗೆ ನಿಂತಿದ್ದಾನೆ ಪೂಜಾರಿ. ಸದ್ಯ ಬಂಡವಾಳಶಾಹಿ ಪ್ರಜಾಪ್ರಭುತ್ವ ಫ್ಯಾಸಿಸ್ಟ್ ಹೊಸ್ತಿಲಿಗೆ ಬಂದು ನಿಲ್ಲುತ್ತಿದೆ. ಮಹಾಜನತೆ ಎಚ್ಚರಗೊಳ್ಳದಿದ್ದರೆ ಇಲ್ಲಿಗೆ ಪ್ರಜಾಪ್ರಭುತ್ವದ ಅವಸಾನವನ್ನು ಕಾಣಲಿದ್ದೇವೆ. ಆದ್ದರಿಂದಲೇ ಕಾರ್ಲ್ ಮಾರ್ಕ್ಸ್ ಹೇಳಿದ್ದು : ಯಾವುದೇ ಧರ್ಮ ಅದರ ಸಾಮಾಜಿಕ – ಆರ್ಥಿಕ, ರಾಜಕೀಯ ಲಾಭಗಳನ್ನು ಹೊರತುಪಡಿಸಿದರೆ ಶುದ್ಧ ಅಧ್ಯಾತ್ಮವೆನ್ನುವುದು ಕೇವಲ ಸೋಗು-ಅಫೀಮು ಎಂದು. ಈ ನಿಜವನ್ನು ಬಲ್ಲವರಾದುದರಿಂದಲೇ ಟಾಲ್‌ಸ್ಟಾಯ್ ತಮ್ಮ ಇಳಿವಯಸ್ಸಿನಲ್ಲಿ ಕೂಡ ಕ್ರಿಶ್ಚಿಯನ್ ಧರ್ಮ ಚರ್ಚುಗಳ ಸಂಬಂಧವನ್ನು ಕಡಿದುಕೊಂಡು ಶುದ್ಧ ಅಧ್ಯಾತ್ಮವನ್ನು ಸಾಧಿಸಿದ್ದು.

ಈ ಹಿನ್ನೆಲೆಯಲ್ಲಿ ನಮ್ಮ ದೇಶದಲ್ಲಿ ನಡೆಯುತ್ತಿರುವ ಮತಾಂತರ ಹಾಗೂ ಅದಕ್ಕೆ ವ್ಯಕ್ತವಾಗುತ್ತಿರುವ ಪರ-ವಿರೋಧ ಪ್ರತಿಭಟನೆ ಮುಂತಾದ ವಿಚಾರಗಳನ್ನೂ, ಜಾಗತಿಕ ಮತ ಧರ್ಮಗಳ ಮೇಲಾಟವನ್ನೂ ತಿಳಿದುಕೊಳ್ಳಲು ಆಮಿಷ-ಒತ್ತಾಯ ಹಾಗೂ ಮಣಿಹಗಳು ಯಾಕೆ ಎಂಬುದು ಸ್ವಲ್ಪವಾದರೂ ಅರ್ಥವಾಗಬಹುದು.

**ಪ್ರೊ|| ಶಿವರಾಮಯ್ಯ**
ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ, ನಾಗರಬಾವಿ, ಬೆಂಗಳೂರು -೫೬೦ ೦೭೨



## ಅರ್ಥವಾಗಲಿಲ್ಲವೆ ?

**ಮ**ಧ್ಯ ರಾತ್ರಿ ಬೆಳಕ
ಕಾಣಲು ಮನೆಯಿಂದ
ಹೊರಟಾಗ ಮನೆಯ
ಕತ್ತಲು ಅರ್ಥವಾಗಲಿಲ್ಲವೆ ?
ಶಾಂತಿ - ಅಹಿಂಸೆಯ
ಬೆನ್ನು ಹತ್ತಿ ಅಲೆಯುವಾಗ
ನಿನಗಾಗಿ ಅಶಾಂತಿ - ಹಿಂಸೆಯಲಿ
ಬೆಂದು ಹೋದವರು
ಅರ್ಥವಾಗಲಿಲ್ಲವೆ ?
ಆಸೆಯೇ ದುಃಖಕ್ಕೆ ಮೂಲವೆಂದು
ಆಸೆ ತೊರೆದಾಗ
ಹೆಂಡತಿ, ಮಗನ ಆಸೆಗಳು
ಅರ್ಥವಾಗಲಿಲ್ಲವೆ ?

**ಡಾ|| ರೇಖಾ ಜೋಗುಳ**
೧೫೧, ಶ್ರೀ ರೇಣುಕ ನಿಲಯ, ಶ್ರೀನಗರ
ಹಲಿಯಾಳ ರೋಡ್, ಧಾರವಾಡ -೫೮೦ ೦೦೩

# ನಾಳೆ ಸ್ಪರ್ಧೆಯಲ್ಲಿ ಹಾಡಬೇಕೆಂದು ಇಂದು ಅಭ್ಯಾಸ ಮಾಡಿದರೆ ಸಾಕೆ ?

– ಪರಸ್ಸಾಲ ಪೊನ್ನಮ್ಮಾಳ್

೮೫ ವರ್ಷ ವಯಸ್ಸಿನ ವಿದುಷಿ ಪರಸ್ಸಾಲ ಪೊನ್ನಮ್ಮಾಳ್ ಕೇರಳದ ಹಿರಿಯ ಸಂಗೀತರಾರರಲ್ಲಿ ಪ್ರಮುಖರು. ಹಲವು ವರ್ಷಗಳಿಂದ ತಿರುವನಂತಪುರದಲ್ಲಿ ನೆಲೆಸಿದ್ದಾರೆ ಮತ್ತು ದಕ್ಷಿಣ ಭಾರತದ ಎಲ್ಲ ರಾಜ್ಯಗಳಲ್ಲೂ ಸುಪರಿಚಿತರು. ಏಪ್ರಿಲ್ ೨೦೦೮ರಲ್ಲಿ ಶ್ರೀಮತಿ ಗಂಗೂಬಾಯಿ ಹಾನಗಲ್ ಅವರಿಂದ ಹುಬ್ಬಳ್ಳಿಯಲ್ಲಿ ಒಂದು ಪ್ರಶಸ್ತಿ ಪಡೆದು ಅಮೋಘವಾದ ಕಚೇರಿ ನಡೆಸಿಕೊಟ್ಟರು. ಗಂಗೂಬಾಯಿಯವರನ್ನು ಪರಿಚಯಿಸುವ ಸಂದರ್ಶನ ಲೇಖನವೊಂದು 'ಹೊಸತು' ಜನವರಿ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಈಗ ''ಕೇರಳದ ಗಂಗೂಬಾಯಿ ನೀವು'' ಎಂದರೆ ಹರ್ಷಿಸುವ ಶ್ರೀಮತಿ ಪೊನ್ನಮ್ಮಾಳ್ ಅವರ ಪರಿಚಯ ಮಾಡಿಸುತ್ತಿದ್ದೇವೆ. ಅವರ ತಾಯಿಯ ಹೆಸರಲ್ಲಿ ಗಂಗೂಬಾಯಿಯವರು ಪ್ರತಿವರ್ಷ ಒಬ್ಬ ಸಂಗೀತಗಾರರಿಗೆ ಪ್ರಶಸ್ತಿ ನೀಡುತ್ತಾರೆ. ಕಳೆದ ವರ್ಷ ಏಪ್ರಿಲ್‌ನಲ್ಲಿ ಅದನ್ನು ಪೊನ್ನಮ್ಮಾಳ್ ಅವರಿಗೆ ಕೊಡಲಾಯಿತು. ಅದೇ ವರ್ಷ ಚೆನ್ನೈನಲ್ಲಿ ಅವರಿಗೆ ''ಆಚಾರ್ಯ ಕಲಾ ಭಾರತಿ'' ಎಂಬ ಬಿರುದನ್ನೂ ನೀಡಿದ್ದರು. ಅವರೊಡನೆ ವಿದ್ವಾನ್ ಆರ್. ಕೆ. ಶ್ರೀಕಂಠನ್ ಅವರು 'ಜ್ಞಾನ ಕಲಾ ಭಾರತಿ' ಎಂಬ ಪ್ರಶಸ್ತಿಯನ್ನು ಪಡೆದಿದ್ದರು.

ಮಂಗಳೂರಿನಲ್ಲಿರುವ ಸಂಗೀತ ವಿದುಷಿ ಮತ್ತು ಕಾಲೇಜು ಅಧ್ಯಾಪಕಿ ಶ್ರೀಮತಿ ರಮಾ ನಾಗೇಂದ್ರನ್ ಅವರ ಸಹಕಾರದಿಂದಾಗಿ ಪೊನ್ನಮ್ಮಾಳ್ ಅವರ ಸಂದರ್ಶನವನ್ನು ಅವರ ಮನೆಯಲ್ಲೇ ಪಡೆಯಲು 'ಹೊಸತು'ಗೆ ಸಾಧ್ಯವಾಯಿತು. ರಮಾ ಅವರಲ್ಲದೆ ಕುಮಾರಿ ಎಚ್. ಎನ್. ಅಪರ್ಣಾ, ಜಿ. ರಾಮಕೃಷ್ಣ ಮತ್ತು ಶ್ರೀ ಸತೀಶ್ ಸಂದರ್ಶನದಲ್ಲಿ ಪಾಲ್ಗೊಂಡಿದ್ದರು. ಅಪರ್ಣಾ ಹುಬ್ಬಳ್ಳಿಯವರು; ಸದ್ಯದಲ್ಲಿ ಪೊನ್ನಮ್ಮಾಳ್ ಅವರ ಬಳಿ ವಿಶೇಷ ಅಧ್ಯಯನ ಮತ್ತು ತರಬೇತಿಗಾಗಿ ತಿರುವನಂತಪುರದಲ್ಲಿದ್ದಾರೆ. ದುಭಾಷಿಗಳಾಗಿ ಸಹ ಸಹಕರಿಸಿದ ಅಪರ್ಣಾ ಅವರಿಗೆ ನಾವು ಕೃತಜ್ಞರು. (ಪೊನ್ನಮ್ಮಾಳ್ ಅವರು ತಮಿಳು ಮತ್ತು ಮಲಯಾಳಂ ಮಾತ್ರ ಮಾತನಾಡುತ್ತಾರೆ. ಆಂಗ್ಲ ಭಾಷೆ ಅವರಿಗೆ ಹೆಚ್ಚು ಪರಿಚಯವಿಲ್ಲ.) ಸಂದರ್ಶನದ ಆಯ್ದ ಭಾಗಗಳನ್ನು ಇಲ್ಲಿ ಪ್ರಸ್ತುತಪಡಿಸಲಾಗಿದೆ. ಸಂದರ್ಶನ ಲೇಖನವನ್ನು ಸಿದ್ಧಪಡಿಸಿದವರು ಶ್ರೀಮತಿ ಉಷಾ ಸಂಪತ್ಕುಮಾರ್.



ಏಪ್ರಿಲ್ ೨೦೦೮ರಲ್ಲಿ ವಿದುಷಿ ಪೊನ್ನಮ್ಮಾಳ್ ಅವರು ಗಂಗೂಬಾಯಿ ಹಾನಗಲ್ ಅವರಿಂದ ಪ್ರಶಸ್ತಿ ಸ್ವೀಕರಿಸಿದ್ದು. ಗಂಗೂಬಾಯಿಯವರ ಪಕ್ಕದಲ್ಲಿ ಎಚ್. ಎನ್. ಅಪರ್ಣಾ ಇದ್ದಾರೆ.

**ಹೊಸತು:** ನಿಮ್ಮ ಬಗ್ಗೆ ನಾಲ್ಕು ಮಾತು ಹೇಳಬಹುದೆ ?

**ಪೊನ್ನಮ್ಮಾಳ್ :** ಓಹೋ, ಅದಕ್ಕೇನಂತೆ. ನಾನು ಹುಟ್ಟಿದ್ದು ೧೯೨೪ರಲ್ಲಿ, ನವೆಂಬರ್ ೨೯ರಂದು. 'ಗಾನ ಭೂಷಣಂ' ಎಂದು ನನ್ನನ್ನು ಕರೆಯುತ್ತಿದ್ದರು. ಏಕೆಂದರೆ ಸಂಗೀತ ಪರೀಕ್ಷೆಯಲ್ಲಿ ಗಾಯಕಿಯಾಗಿ ನಾನು ಮೊದಲ ಸ್ಥಾನವನ್ನು ಪಡೆದಿದ್ದೆ. ಮೊದಲಿಗೆ ನನ್ನ ಗುರುಗಳು ಪರಮು ಪಿಳ್ಳೈ ಭಾಗವತರ್. ಅವರು ಆಡೂರಿನವರು. ಮುಂದೆ ಉನ್ನತ ಮಟ್ಟದ ತರಬೇತಿಯನ್ನು ಶೆಮ್ಮನ್‌ಗುಡಿ ಆರ್. ಶ್ರೀನಿವಾಸ ಅಯ್ಯರ್, ಹರಿಕೇಶನಲ್ಲೂರು ಮುತ್ತಯ್ಯ ಭಾಗವತರ್, ಪಾಲ್ಘಾಟ್ ಸಿ. ಎಸ್. ಕೃಷ್ಣ ಅಯ್ಯರ್, ಶ್ರೀ ಕುಮಾರಸ್ವಾಮಿ ಅಯ್ಯರ್, ಶ್ರೀ ಹರಿಹರ ಭಾಗವತರ್ ಮತ್ತು ಪದ್ಮಭೂಷಣ ಕೆ. ಎಸ್. ನಾರಾಯಣಸ್ವಾಮಿ ಅವರಲ್ಲಿ ಪಡೆದೆ. ಎಲ್ಲರೂ ಅದ್ಭುತ ವಿದ್ವಾಂಸರೇ. ೧೯೪೨ರಲ್ಲಿ ತ್ರಿವೇಂದ್ರಮ್‌ನ ಕಾಟನ್ ಬಾಲಿಕಾ ಪ್ರೌಢಶಾಲೆಯಲ್ಲಿ ಅಧ್ಯಾಪಕಿಯಾಗಿ ನೇಮಕಗೊಂಡೆ. ಆಮೇಲೆ ೧೯೭೦ರವರೆಗೆ ಇಲ್ಲೇ ಶ್ರೀ ಸ್ವಾತಿ ತಿರುನಾಳ್ ಸಂಗೀತ ಕಾಲೇಜಿನಲ್ಲಿ ಪ್ರಾಧ್ಯಾಪಕಿಯಾಗಿದ್ದೆ. ನಂತರ ಹತ್ತು ವರ್ಷ ತ್ರಿಪುನೀತುರ ಎಂಬಲ್ಲಿ ಆರ್. ಎಲ್. ವಿ. ಸಂಗೀತ ಕಾಲೇಜಿನಲ್ಲಿ ಪ್ರಾಚಾರ್ಯಳಾಗಿದ್ದೆ.

**ಹೊ :** ನೀವು ಕಚೇರಿ ಕಾರ್ಯಕ್ರಮಗಳನ್ನು ಆರಂಭಿಸಿದ್ದು ಯಾವಾಗ ?

**ಪೊ :** ನನ್ನ ೧೬ನೆಯ ವಯಸ್ಸಿನಲ್ಲಿ. ಆಗ್ಗೆ ತಿರುವನಂತಪುರದಲ್ಲಿ ಆಕಾಶವಾಣಿ ಕೇಂದ್ರ ಇರಲಿಲ್ಲ. ನಾನು ತಿರುಚ್ಚಿಗೆ ಹೋಗಿ ಆಕಾಶವಾಣಿಯಲ್ಲಿ ಹಾಡುತ್ತಿದ್ದೆ. ಆಮೇಲೆ ಇಲ್ಲೂ ಕೇಂದ್ರದ ಸ್ಥಾಪನೆಯಾಯಿತು. ಆಕಾಶವಾಣಿ ಅಲ್ಲದೆ ಈಚಿನ ವರ್ಷಗಳಲ್ಲಿ ದೂರದರ್ಶನದಲ್ಲೂ ಹಾಡಿದ್ದೇನೆ. ಬಹುಶಃ ಎಲ್ಲ ಸಂಗೀತ ಸಭಾಗಳಲ್ಲಿ, ಬಹಳಷ್ಟು ದೇವಸ್ಥಾನಗಳಲ್ಲಿ ಮತ್ತು ಅನೇಕ ಸಾಂಸ್ಕೃತಿಕ ಸಂಘಟನೆಗಳಲ್ಲಿ ನಾನು ಕಚೇರಿಗಳನ್ನು ನಡೆಸಿಕೊಟ್ಟಿದ್ದೇನೆ. ಈ ರೀತಿಯ ಸಾರ್ವಜನಿಕ ಕಚೇರಿಗಳು ಆರಂಭವಾಗುವುದಕ್ಕೆ ಮುಂಚೆ ನನ್ನ ೬ನೆಯ ವಯಸ್ಸಿನಿಂದಲೇ ಶಾಲೆಯ ಸಮಾರಂಭಗಳಲ್ಲಿ ಹಾಡುತ್ತಿದ್ದೆ.

**ಹೊ :** ನಿಮಗೆ ಅನೇಕ ಪ್ರಶಸ್ತಿಗಳು ದೊರೆತಿವೆಯೆಂದು ಕೇಳಿದ್ದೇವೆ.

**ಪೊ :** ಹೌದು, ಆದರೆ ಅದು ಮುಖ್ಯವಲ್ಲ. ರಾಜವಂಶದವರು ಇಲ್ಲಿ (ತ್ರಿವೇಂದ್ರಮ್‌ನಲ್ಲಿ) ನವರಾತ್ರಿ ಸಂಗೀತೋತ್ಸವ ನಡೆಸುತ್ತಾ ಬಂದಿದ್ದಾರೆ. ೨೦೦೬ರವರೆಗೆ ಅದರಲ್ಲಿ ಮಹಿಳೆಯರಿಗೆ ಅವಕಾಶವಿರುತ್ತಿರಲಿಲ್ಲ. ೨೦೦೬ ಮತ್ತು ೨೦೦೭ರಲ್ಲಿ ಮೊದಲ ಬಾರಿಗೆ ಮಹಿಳೆಯೊಬ್ಬಳಿಗೆ ಅವಕಾಶ ಕಲ್ಪಿಸಿದರು. ಆ ಮಹಿಳೆ ನಾನೇ. ಕೇರಳ ಸಂಗೀತ ನಾಟಕ ಅಕಾಡೆಮಿ ೧೯೭೭ರಲ್ಲಿ ನನಗೆ 'ಶ್ರೇಷ್ಠ ಸಂಗೀತಗಾರ್ತಿ' ಪುರಸ್ಕಾರ ನೀಡಿತು. ೨೦೦೨ರಲ್ಲಿ ಅದೇ ಅಕಾಡೆಮಿಯ ಫೆಲೋ ಆಗಿದ್ದೆ. ಇಲ್ಲಿಯ ಶ್ರೀ ಸ್ವಾತಿ ತಿರುನಾಳ್ ಸಂಗೀತ ಸಭಾ ೧೯೯೬ರಲ್ಲಿ 'ಗಾಯಕ ರತ್ನಂ' ಎಂಬ ಪ್ರಶಸ್ತಿ ನೀಡಿತು. ೨೦೦೬ರಲ್ಲಿ ಶ್ರೀ ಭೈರವ ಶ್ರೀ ಎಂ. ಡಿ. ರಾಮನಾಥನ್ ಟ್ರಸ್ಟ್ ನನಗೆ 'ರಾಗ ಸಾಹಿತ್ಯ ಭಾವ ಗಾಯಿಕಾ' ಎಂಬ ಪ್ರಶಸ್ತಿ ನೀಡಿತು. ಬೆಂಗಳೂರಿನ ಶ್ರೀ ರಾಮ ಸೇವಾ ಮಂಡಲಿಯು ೨೦೦೮ರಲ್ಲಿ 'ಸಪ್ತಸ್ವರ' ಎಂಬ ಪ್ರಶಸ್ತಿ ನೀಡಿದ್ದಿತೆಂದು ಬೆಂಗಳೂರಿನವರಾದ ನಿಮಗೆ ತಿಳಿದಿರಬಹುದು. ಅದೇ ವರ್ಷದಲ್ಲಿ ಇನ್ನೆರಡು



ಶ್ರೀಮತಿ ಪರಸ್ಸಾಲ ಪೊನ್ನಮ್ಮಾಳ್

ಪ್ರಶಸ್ತಿಗಳನ್ನು ನೀಡಿದ್ದರು : ಚೆನ್ನೈನ ಭಾರತ್ ಕಲಾಚಾರ್‌ನಿಂದ 'ಆಚಾರ್ಯ ಕಲಾ ಭಾರತಿ' ಒಂದು ಮತ್ತು ಹುಬ್ಬಳ್ಳಿಯಲ್ಲಿ ಗಂಗೂಬಾಯಿ ಹಾನಗಲ್ ಅವರು ತಮ್ಮ ತಾಯಿಯ ಹೆಸರಿನಲ್ಲಿ ನೀಡುವ ಪ್ರಶಸ್ತಿ ಇನ್ನೊಂದು. ಅದನ್ನು ಸ್ವತಃ ಗಂಗೂಬಾಯಿಯವರೇ ನನಗೆ ಕೊಟ್ಟರು ಮತ್ತು ಆಗ್ಗೆ ಅಲ್ಲಿ ಕಚೇರಿಯನ್ನೂ ನಡೆಸಿಕೊಟ್ಟಿದ್ದೆ. ಇನ್ನೂ ಹತ್ತಾರು ಪ್ರಶಸ್ತಿಗಳಿವೆ, ಎಲ್ಲವೂ ಜ್ಞಾಪಕವಿಲ್ಲ.

**ಹೊ :** ಹಾಗಾದರೆ ನಿಮಗೆ ಗಂಗೂಬಾಯಿಯವರ ಪರಿಚಯವಿದೆ. ಇಲ್ಲಿಯ ನಿಮ್ಮ ರಾಜಕುಮಾರ ನಿಮ್ಮನ್ನು 'ಕೇರಳದ ಗಂಗೂಬಾಯಿ' ಎನ್ನುತ್ತಾರಂತಲ್ಲ!

**ಪೊ :** ಹೌದು, ನನಗೆ ಅದು ಬಹಳ ಖುಷಿ ಕೊಡುತ್ತದೆ. ಗಂಗೂಬಾಯಿಯವರ ಸಂಗೀತ ಗೊತ್ತು, ಆದರೆ ಅವರ ಪರಿಚಯ ಇತ್ತೀಚಿನದು. (ಪ್ರಸನ್ನ ಮುಖಭಾವ ರಮ್ಯವಾಗಿ ಮೂಡುತ್ತದೆ.) ನಮ್ಮೆಲ್ಲರದೂ ಒಂದು ಭಾವಚಿತ್ರವಿದೆ, ಹುಬ್ಬಳ್ಳಿಯ ಗಾನಸಭಾ ಪುರಸ್ಕಾರ ನೀಡಿದ ಸಮಯದ್ದು. (ಶಿಷ್ಯೆಗೆ ಹೇಳಿ ಅದನ್ನು ತರಿಸಿ ಸಂತೋಷದಿಂದ ತೋರಿಸುತ್ತಾರೆ.)

**ಹೊ :** ನಿಮ್ಮ ಮೊದಲ ಕಲಿಯುವಿಕೆಯ ದಿವಸಗಳ ಅನುಭವಗಳೇನು ? ಹೆಂಗಸರಿಗೆ ಅಷ್ಟಾಗಿ ಪ್ರೋತ್ಸಾಹ ದೊರಕದ ಸಮಯವಲ್ಲವೆ ಅದು ?

**ಪೊ :** ನನಗೇನೂ ತೊಂದರೆಯಾಗಲಿಲ್ಲ. ನನ್ನ ತಂದೆ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು ಆ ಸಮಯದಲ್ಲಿ. ಅವರ ಶಾಲೆಯಿದ್ದ ಹಳ್ಳಿಯಲ್ಲಿ ಒಬ್ಬರು ಭಾಗವತರಿದ್ದರು. ಬಹಳ ಆಸಕ್ತಿ ಇಟ್ಟು ಅಲ್ಲಿಂದ ಮನೆಗೆ ಬಂದು ನನಗೆ ಪಾಠ ಹೇಳುತ್ತಿದ್ದರು. ಅವರೇ ಪರಮು ಪಿಳ್ಳೈ ಭಾಗವತರ್. ಇಂದಿಗೂ ದೇವರಿಗೆ ಅವರ ಹೆಸರಿನಲ್ಲಿ ಹೂ ಹಾಕುತ್ತೇವೆ. ನನ್ನ ತಂದೆಯವರಿಗೂ ಸಂಗೀತದಲ್ಲಿ ಬಹಳ ಆಸಕ್ತಿ. ಒಳ್ಳೆಯ ಕಚೇರಿಗಳನ್ನು ಮೆಚ್ಚಿ ಆನಂದಿಸುತ್ತಿದ್ದರು. ಸಂಗೀತ ಕಚೇರಿಗಳಿಗೆ ನನ್ನ ಜೊತೆಯಾಗಿ ಬರುತ್ತಿದ್ದುದೂ ಅವರೇ.

**ಹೊ :** ಆಕಾಶವಾಣಿಯ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ನೀವು ಹಾಡಿದ್ದೀರಲ್ಲವೆ ?

**ಪೊ :** ಹೌದು, ಎರಡು ಸಲ ಹಾಡಿದ್ದೇನೆ.

**ಹೊ :** ಹುಡುಗಿ ಎಂಬ ಕಾರಣಕ್ಕಾಗಿ ನಿಮಗೇನಾದರೂ ಕಲಿಯಲು ಅಡೆತಡೆ, ಅಡಚಣೆಗಳನ್ನು ಎದುರಿಸಬೇಕಾಗಲಿಲ್ಲವೆನ್ನುತ್ತೀರಾ ?

**ಪೊ :** ಇಲ್ಲ, ನನ್ನ ಮಟ್ಟಿಗೆ ಯಾವ ತೊಂದರೆಯೂ ಇರಲಿಲ್ಲ. ಎಲ್ಲರೂ ಪ್ರೀತಿ ಆದರಗಳಿಂದಲೇ ನೋಡುತ್ತಿದ್ದರು. ಒಳ್ಳೆ ಪ್ರೋತ್ಸಾಹ ಸಿಕ್ಕಿತು.

**ಹೊ :** ನಿಮ್ಮ ಗುರುಗಳು...

**ಪೊ :** ಗುರುಗಳಾಗಿ ಬಹಳ ಜನರಿದ್ದರು. ಆದ್ಯಗುರು ಪರಮು ಪಿಳ್ಳೈ ಭಾಗವತರ್, ಆಮೇಲೆ ಸ್ವಾತಿ ತಿರುನಾಳ್ ಕಾಲೇಜಿನಲ್ಲಿದ್ದವರು ಶ್ರೀ ಮುತ್ತಯ್ಯ ಭಾಗವತರು, ಅವರು ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಶ್ರೀ ಎಮ್. ಎ. ಕಲ್ಯಾಣ ಸುಂದರಂ, ಶ್ರೀ ಕೆ. ಎಸ್. ನಾರಾಯಣಸ್ವಾಮಿ, ಇವರು ವೀಣೆ ಪ್ರಾಧ್ಯಾಪಕರು. ಶ್ರೀ ಸಿ. ಎಸ್. ಕೃಷ್ಣನ್‌ರವರು, ಇನ್ನೂ ಅನೇಕರು.

**ಹೊ :** ಇವರೆಲ್ಲರಲ್ಲಿ ನಿಮಗೆ ಇಷ್ಟವಾದವರ್ಯಾರು ?

**ಪೊ :** ಅವರೆಲ್ಲರಿಗೂ ನನ್ನನ್ನು ಕಂಡರೆ ಇಷ್ಟ. ಹಾಗೂ ಎಲ್ಲರೂ ನಿರ್ವಂಚನೆಯಿಂದ ಮನಃಪೂರ್ವಕವಾಗಿ ಪಾಠ ಹೇಳಿಕೊಟ್ಟರು. ಅವರೆಲ್ಲರೂ ನನಗೆ ಇಷ್ಟರೇ.

**ಹೊ :** ಮುತ್ತಯ್ಯ ಭಾಗವತರ್ ನಿಮಗೆ ಹಿರಿಯರಲ್ಲವೆ ?

**ಪೊ :** ಓ ಅವರು ಬಹಳ ಹಿರಿಯರು. ಒಮ್ಮೆ ಏನಾಯಿತು ಗೊತ್ತೆ? ನನಗೆ ಆಗ ಕೇವಲ ೧೪ ವರ್ಷ. ಅವರು ಮತ್ತು ಚೆಂಬೈಯವರು ಒಂದು ಕಚೇರಿಗಾಗಿ ಕೊಯಮತ್ತೂರಿಗೆ ಬಂದಿದ್ರು. ಆಗ ಅವರನ್ನು ನೋಡಿದೆ. ನಾನು ದೇವಸ್ಥಾನದಲ್ಲಿ ಹಾಡುವುದಿತ್ತು. ಚೆಂಬೈ ಬಂದಿದ್ದರು. ಚೆನ್ನಾಗಿ ಹಾಡುತ್ತೀಯ ಎಂದು ಹುರಿದುಂಬಿಸಿದರು.

**ಹೊ :** ಶ್ರೀ ಅರೈಕುಡಿಯವರು...

**ಪೊ :** ಇಲ್ಲ, ನಾನು ಅವರನ್ನು ನೋಡಿಯೇ ಇಲ್ಲ. ಅವರ ಸಂಗೀತ ಬೇಕಾದಷ್ಟು ಕೇಳಿದ್ದೇನೆ.

**ಹೊ :** ನಿಮ್ಮ ಒಡಹುಟ್ಟಿದವರು, ನಿಮ್ಮ ಚಿಕ್ಕಂದಿನ ನೆನಪುಗಳು...

**ಪೊ :** ನನ್ನ ತಾಯಿಯೂ ಹಾಡುತ್ತಿದ್ದರು. ಅವರಿಗೆ ಒಳ್ಳೆ ಸಂಗೀತ ಜ್ಞಾನವಿತ್ತು. ನನ್ನ ತಾತ ಜಮೀನ್ದಾರ್. ನಮ್ಮ ತಂದೆ ತಾಯಿಗೆ ನಾವು ನಾಲ್ಕು ಹೆಣ್ಣು ಮಕ್ಕಳು. ಇಬ್ಬರು ಅಕ್ಕಂದಿರು ಒಬ್ಬ ತಂಗಿ. ನನ್ನ ಅಕ್ಕಂದಿರಿಗೆ ೧೧-೧೨ ವರ್ಷಕ್ಕೇ ಮದುವೆಯಾಯಿತು. ಅವರುಗಳಿಗೂ ಸಂಗೀತ ತಿಳಿದಿತ್ತು, ಆದರೆ ಸಾರ್ವಜನಿಕವಾಗಿ ಎಲ್ಲೂ ಹಾಡಲಿಲ್ಲ. ನನ್ನ ವಿಷಯ ಸ್ವಲ್ಪ ಬೇರೆ. ಶ್ರೀ ಮುತ್ತಯ್ಯ ಭಾಗವತರು ಸಂಪೂರ್ಣ ಪ್ರೋತ್ಸಾಹ ಮತ್ತು ಆಸರೆ ನೀಡಿ ಮುಂದಕ್ಕೆ ತಂದರು. ಈಕೆ ಚೆನ್ನಾಗಿ ಹಾಡುತ್ತಾಳೆ ಮತ್ತು ಸಂಗೀತದಲ್ಲಿ ಬಹಳ ಮುಂದಕ್ಕೆ ಬರುತ್ತಾಳೆ, ಇವಳನ್ನು ಕಾಲೇಜಿಗೆ ಕಳುಹಿಸಲೇಬೇಕು, ಎಂದು ಒತ್ತಾಯಿಸಿ ಪ್ರೋತ್ಸಾಹಿಸಿದರು.

ಚಿತ್ರ ತಿರುನಾಳರ ಹುಟ್ಟುಹಬ್ಬದ ಪ್ರಯುಕ್ತ ಒಂದು ಸಂಗೀತ ಸ್ಪರ್ಧೆ ಇತ್ತು. ನನಗಾಗ ೧೪ ವರ್ಷ. ಪತ್ರಿಕೆಗಳಲ್ಲಿ ಇದರ ಬಗ್ಗೆ ಬಂದಿತ್ತು. ನನ್ನ ತಂದೆಯ ಸ್ನೇಹಿತರೊಬ್ಬರು ಬಂದು ತಂದೆಯವರೊಡನೆ ಈ ಸ್ಪರ್ಧೆಯಲ್ಲಿ ನಾನು ಭಾಗವಹಿಸುವುದರ ಬಗ್ಗೆ ಚರ್ಚಿಸಿದರು. ನನಗೆ ಸ್ವಲ್ಪ ಹಿಂಜರಿಕೆಯಿತ್ತು. ಕಡೆಗೆ ಹೋದೆವು. ಅಲ್ಲಿ ದೊಡ್ಡ ಜನರನ್ನು ಸಂಗೀತದ ದಿಗ್ಗಜರನ್ನು ನೋಡಿದೆ. ಆಗ ಅದೆಲ್ಲವರ ಮಹತ್ವದ ಅರಿವು ಕೂಡ ಇರಲಿಲ್ಲವೇನೋ. ಹಾಡೊಂದು,



ಎಚ್. ಎನ್. ಅಪರ್ಣಾ, ಶ್ರೀಮತಿ ಪೊನ್ನಮ್ಮಾಳ್ ಮತ್ತು ರಮಾ ನಾಗೇಂದ್ರನ್

ಹಾಡಿದೆ; ಕಲ್ಯಾಣಿ ರಾಗದ ಹಾಡು ''ಕಮಲಾಂಬಾಂ''. ಸ್ವರ ಹಾಕುವೆಯಾ ಎಂದರು. ಯತ್ನಿಸುತ್ತೇನೆಂದೆ. ಎರಡನೇ ಕಾಲದಲ್ಲಿ ಹಾಡುವೆಯಾ ಎಂದಾಗ ಹಾಡುವೆನೆಂದೆ, ಹಾಡಿದೆ. ಎಲ್ಲರೂ ನೋಡುತ್ತಾ ಕೇಳುತ್ತಾ ಕುಳಿತುಬಿಟ್ಟಿದ್ದರು. ಹಾಡಿ ಮುಗಿಸಿ ಹಿಂದಿರುಗುತ್ತಿದ್ದೆವು. ಹಿಂದಿನಿಂದ ಯಾರೋ ಬಂದು ''ಏನು ನಿಮ್ಮ ಮಗಳಿಗೆ ಸ್ಪರ್ಧೆಯಲ್ಲಿ ಮೊದಲ ಸ್ಥಾನ ಸಿಕ್ಕಿದೆ, ಹೋಗ್ತಾ ಇದ್ದೀರಲ್ಲಾ'' ಎಂದರು. ಮೊದಲನೇ ಸ್ಥಾನ, ಚಿನ್ನದ ಪದಕ ಎಲ್ಲಾ ಸಿಕ್ಕತು. ಎಲ್ಲಾ ದೈವಾನುಗ್ರಹವೇ ಸರಿ. ಹರಿಕೇಶಾನಲ್ಲೂರ್, ಮುತ್ತಯ್ಯ ಭಾಗವತರ್, ಶೆಮ್ಮನ್‌ಗುಡಿ ಶ್ರೀನಿವಾಸ ಐಯ್ಯರ್ ಇವರುಗಳೇ ತೀರ್ಪುಗಾರರು. ಅದರ ಮರುದಿನವೇ ಸ್ಕಂದ ಷಷ್ಠಿ ಉತ್ಸವ. ಅಲ್ಲಿ ಪಕ್ಕವಾದ್ಯದೊಡನೆ ಹಾಡಿದೆ. ಅದೇ ನನ್ನ ಮೊದಲ ವೇದಿಕೆಯ ಕಛೇರಿ. ತದನಂತರ ಎಲ್ಲೆಲ್ಲಿಂದಲೂ ಕರೆಗಳು ಬರತೊಡಗಿದವು. ಆರು ವರ್ಷಗಳು ಹಾಡಿದೆ. ಶ್ರೀ ಮುತ್ತಯ್ಯ ಭಾಗವತರು, ನಿನ್ನಲ್ಲಿ ಪ್ರತಿಭೆಯಿದೆ ಎಂದು ಹೇಳಿ ಪ್ರೋತ್ಸಾಹಿಸಿ ತಿರುವನಂತಪುರದಲ್ಲಿ ಮ್ಯೂಸಿಕ್ ಕಾಲೇಜಿಗೆ ಸೇರಲು ಒತ್ತಾಯಿಸಿದರು. ನೇರವಾಗಿ ೨ನೇ ವರ್ಷದ ತರಗತಿಗೆ ಸೇರಿಸಿದರು. ತಿರುಚಿನಾಪಳ್ಳಿ ಆಕಾಶವಾಣಿ ಕೇಂದ್ರಕ್ಕೆ ತಾವೇ ಬರೆದು ಹಾಕಿದರು. ಆಕಾಶವಾಣಿಯವರು ಕಾಂಟ್ರಾಕ್ಟ್ ಕಳುಹಿಸಿದರು. ಹೀಗೆ ಶುರುವಾಯ್ತು. ಅಲ್ಲಿಂದಲೇ ನನ್ನನ್ನು ನಾನು ಹಾಡುವುದರಲ್ಲಿ ತೊಡಗಿಸಿಕೊಂಡೆ. ನೀನು ಹಾಡಬೇಕು, ಹಾಡಲೇ ಬೇಕು, ಎನ್ನುತ್ತಿದ್ದರು. ಹಾಡುತ್ತಿದ್ದೆ. ಆಹ್ವಾನಗಳು ಬರತೊಡಗಿದವು.

**ಹೊ** : ನಿಮ್ಮ ಮೆಚ್ಚಿನ ಕಲಾವಿದರು ಯಾರು ?

**ಪೊ** : ಅದು ಹಾಗಲ್ಲ, ನನಗೆ ಅವರೆಲ್ಲರೂ ಪ್ರಿಯರೇ.

**ಹೊ** : ಆದರೂ ಅಂದಿನ ದಿನಗಳಲ್ಲಿ ನಿಮ್ಮ ಮೆಚ್ಚಿನ ಕಲಾವಿದರು ಇದ್ದಿರಬೇಕಲ್ಲವೆ ?

**ಪೊ** : ಅರಿಯಾಕುಡಿ ರಾಮಾನುಜ ಅಯ್ಯಂಗಾರ್ ಹಾಗೂ ಶೆಮ್ಮನ್‌ಗುಡಿ ಶ್ರೀನಿವಾಸ ಅಯ್ಯರ್.

**ಹೊ** : ನಿಮ್ಮ ನೆನಪಿನಂಗಳದಿಂದ ಯಾವುದಾದರೂ ಘಟನೆ ಅಥವಾ ವಿಶೇಷ ಅನುಭವಗಳೇನಾದರೂ ಇದ್ದರೆ ನಮ್ಮೊಡನೆ ಹಂಚಿಕೊಳ್ಳಬಯಸುತ್ತೀರಾ ?

**ಪೊ** : ಒಮ್ಮೆ ಚೆಂಬೈ ವೈದ್ಯನಾಥ ಭಾಗವತರ ಕಚೇರಿ ಇತ್ತು. ಸಂಗೀತ ಸಭೆಯು ಹೊರಾಂಗಣದಲ್ಲಿತ್ತು. ರಾತ್ರಿ ೧೨-೧ ಗಂಟೆವರೆವಿಗೂ ಜನ ಸಂಗೀತ ಕೇಳುತ್ತಲೇ ಇದ್ದರು. ಅಸಾಧ್ಯ ಮಳೆ ಸುರಿಯುತ್ತಿತ್ತು. ಜನ ಅಲ್ಲಾಡಲಿಲ್ಲ. ಕೊಡೆ ಹಿಡಿದು ಕುಳಿತು ಸಂಗೀತವನ್ನು ಕೇಳಿ ಪೂರ್ತಿ ಮುಗಿಯುವವರೆವಿಗೂ ಇದ್ದು ಹೋದರು. ಅದೊಂದು ಅದ್ಭುತ ಅನುಭವ.

**ಹೊ** : ನಿಮ್ಮ ಎಲ್ಲ ಗುರುಗಳು, ಪೋಷಕರು ಹಾಗೂ ಸಮಕಾಲೀನರು ನಿಮ್ಮನ್ನು ಚೆನ್ನಾಗಿ ನಡೆಸಿಕೊಳ್ಳುತ್ತಿದ್ದರೆ ?

**ಪೊ** : ನನಗೆ ಯಾವ ವಿಧವಾದ ತೊಂದರೆಯೂ ಎದುರಾಗಲಿಲ್ಲವೆಂದು ಹೇಳಿದೆನಲ್ಲವೆ ? ನನ್ನನ್ನು ಚೆನ್ನಾಗಿಯೇ ನಡೆಸಿಕೊಂಡರು. ಯಾರಾದರೂ ಹೊಸಬರು ಬಂದಲ್ಲಿ ನನ್ನ ಗುರುಗಳು ನನ್ನೆಡೆ ಕೈ ತೋರಿಸಿ ಅದೋ ಆಕೆಯೇ ಪೊನ್ನಮ್ಮ, ಆಕೆ ತುಂಬಾ ಚೆನ್ನಾಗಿ ಹಾಡುತ್ತಾಳೆ ಎನ್ನುತ್ತಿದ್ದರು. ಈಗಿನಂತಲ್ಲ, ನಾನು ಆ ದಿನಗಳಲ್ಲಿ ತೆಳ್ಳಗಿದ್ದೆ. ಅದಕ್ಕೆ ಅವರು 'ಅದೇ ತೆಳ್ಳಗಿನ ಹುಡುಗಿ, ಅವಳೇ ಪೊನ್ನಮ್ಮ' ಎಂದು ತೋರಿಸುತ್ತಿದ್ದರು.

**ಹೊ** : ಮುಖ್ಯೋಪಾಧ್ಯಾಯರಾಗಿ ನಿಮ್ಮ ಅನುಭವ ?

**ಪೊ** : ಹತ್ತು ವರ್ಷಗಳ ಕಾಲ ಪ್ರಿನ್ಸಿಪಾಲ್ ಆಗಿ ಕೆಲಸ ಮಾಡಿದೆ. ಅದು ನಾಲ್ಕು ವರ್ಷಗಳ ಅವಧಿಯ ಹುದ್ದೆ, ಆದರೆ ೧೦ ವರ್ಷ ಕಳೆಯಿತು. ಅದರೊಟ್ಟಿಗೆ ನಾನು ಇನ್ನೊಂದು ಸಂಸ್ಥೆಯನ್ನೂ ನೋಡಿಕೊಳ್ಳುತ್ತಿದ್ದೆ. ಭರತ ನಾಟ್ಯಂ ಸೇರಿದಂತೆ ಹಲವು ಹೊಸ ಕೋರ್ಸ್‌ಗಳನ್ನು ಸೇರಿಸಿ ಲಲಿತಕಲಾ ವಿಭಾಗವೆಂದು ಮಾಡಿದೆವು. 'ಗಾನ ಪ್ರವೀಣ' ಕೋರ್ಸ್‌ಗೆ ಅರ್ಜಿ ಸಲ್ಲಿಸಿದೆವು. ಅದೂ ಸಿಕ್ಕಿತು. ನಾನು ಹೋದಾಗ ಒಂದು ಸಣ್ಣ ಸಂಸ್ಥೆಯಾಗಿದ್ದ ಅದು ಮುಂದಿನ ದಿನಗಳಲ್ಲಿ ದೊಡ್ಡದಾಗಿ ಬೆಳೆಯಿತು. ನನಗೆ ತುಂಬಾ ಸಂತೋಷ. ಪರೀಕ್ಷೆ ಮುಗಿಸಿದ ಕೂಡಲೆ ಅಕಾಡೆಮಿಯಲ್ಲಿ ಅಧ್ಯಾಪಕಿಯ ಕೆಲಸ ಸಿಕ್ಕಿತು. ಅಕಾಡೆಮಿಯಲ್ಲೇ ಮೊದಲ ಲೇಡಿ ಟೀಚರ್, ಮೊದಲ ಪ್ರಾಧ್ಯಾಪಕಿ ಹಾಗೂ ಮೊದಲ ಲೇಡಿ ಪ್ರಿನ್ಸಿಪಾಲ್ ನಾನು !

**ಹೊ** : ನಿಮ್ಮ ವಿದ್ಯಾರ್ಥಿವೃಂದವು ಹೇಗಿತ್ತು ?

**ಪೊ** : ವಿದ್ಯಾರ್ಥಿಗಳೆಲ್ಲಾ ಬಹಳ ಆಸಕ್ತಿಯಿಂದ ಬಂದು ಕೇಳಿ ಕಲಿಯುತ್ತಿದ್ದರು. ಬಹಳ ಪ್ರೀತಿಯಿಂದ ವಿಧೇಯತೆಯಿಂದ ಇದ್ದರು. ಎಲ್ಲರೂ ಒಳ್ಳೊಳ್ಳೆಯ ವ್ಯಕ್ತಿಗಳಾಗಿ ಬೆಳೆದು ನೆಲೆಸಿದರು. ಎಲ್ಲಾದರೂ ಕಂಡಲ್ಲಿ ''ಟೀಚರ್, ನಿಮ್ಮನ್ನು ಮರೆಯಲಾಗುವುದೆ! ಇಲ್ಲ'' ಎನ್ನುತ್ತಿದ್ದರು. ನಮ್ಮಲ್ಲಿ ಕಲಿತ ಬಹಳಷ್ಟು ವಿದ್ಯಾರ್ಥಿಗಳು ಒಳ್ಳೊಳ್ಳೆಯ ಸಂಗೀತಗಾರರಾಗಿ ರೂಪುಗೊಂಡರು.

**ಹೊ** : ಓಮನ ಕುಟ್ಟಿ...

**ಪೊ** : ಓಮನ ಕುಟ್ಟಿ ಕೂಡ ಒಬ್ಬ ವಿದ್ಯಾರ್ಥಿ. ಅವಳೂ ನಮ್ಮ ಕಾಲೇಜಿನಲ್ಲೇ ಕಲಿತದ್ದು, ನನ್ನ ಹತ್ತಿರ ವೈಯಕ್ತಿಕವಾಗಿ ಅಲ್ಲ.

**ಹೊ** : ಶಾಲಾ ಕಾಲೇಜುಗಳಿಗೆ ಹೋಗಿ ಪಠ್ಯ ವಿಷಯವನ್ನು ಗೊತ್ತುಪಡಿಸುವ ವಿಧಾನದಲ್ಲಿ ಕಲಿಯುವುದು ಉತ್ತಮವೋ ಅಥವಾ ಗುರುವಿನ ಬಳಿಗೆ ಹೋಗಿ ಪ್ರತ್ಯೇಕವಾಗಿ ಕಲಿಯುವುದು ಉತ್ತಮವೋ ? ನಿಮ್ಮ ಪ್ರಕಾರ ಯಾವುದು ಸರಿ ?

**ಪೊ** : ಎರಡೂ ಉತ್ತಮ. ಪ್ರತಿಯೊಂದಕ್ಕೂ ಅದರದೇ ಆದ ಅನುಕೂಲಗಳಿರುತ್ತವೆ. ತರಗತಿಗಳಿಗೆ ಹೋಗಿ ಅಲ್ಲಿ ಸರಿಯಾಗಿ ಕಲಿಸದಿದ್ದಲ್ಲಿ ಪುನಃ ಪ್ರತ್ಯೇಕವಾಗಿ ಕಲಿಯಬೇಕಾಗುತ್ತದೆ. ಆದರೆ ಅನುಕೂಲವೆಂದರೆ ಹಲವು ಜನರ ಮತ್ತು ಬಗೆಯ ಸಂಗೀತವನ್ನು ಕೇಳಬಹುದು, ಕಲಿಯಬಹುದು. ವೈಯಕ್ತಿಕ ಕಲಿಯುವಿಕೆಯಲ್ಲಿ ಇರುವಂತೆ ಒಬ್ಬರದೇ ಕೇಳುವಂತಿರದೆ ಬಹುಜನರ ಸಂಗೀತಕ್ಕೆ ತೆರೆದುಕೊಳ್ಳಲು ಸಾಧ್ಯ.

**ಹೊ** : ಇಂದಿನ ಪೀಳಿಗೆಯವರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ಪೊ** : ಈಗೆಲ್ಲೂ ನಾನು ಅಷ್ಟಾಗಿ ಹೊರಗೆ ಹೋಗುವುದಿಲ್ಲ.

**ಹೊ** : ನೀವು ಟಿವಿ ಅಥವಾ ರೇಡಿಯೋನಲ್ಲಿ ಕೇಳಿರ ಬಹುದು... ಈಗ ಎಷ್ಟೋ ಸ್ಪರ್ಧೆಗಳು ನಡೆಯುತ್ತಿರುತ್ತವೆ, ಅಲ್ಲವೆ ?

**ಪೊ** : ಮೊದಲೆಲ್ಲಾ ಉತ್ಕರ್ಷವು ಕ್ರಮೇಣ ಆಗುವ ಕ್ರಿಯೆಯಾಗಿತ್ತು. ಅವರ ಅರಿವಿನ ಆಳ ಚೆನ್ನಾಗಿರುತ್ತಿತ್ತು. ಈಗ ಎಲ್ಲದಕ್ಕೂ ಅವಸರ. ಏನೋ ಕಲಿತಿರ್ತಾರೆ. ಯಾವುದೋ ಸ್ಪರ್ಧೆಗೆ ಹೋಗಬೇಕು ಅಂತ ನಾಳೆ ಹಾಡಕ್ಕೆ ಇವತ್ತು ಸ್ವರ ಹಾಕಿಕೊಡಬೇಕು ಅಂತಾರೆ. ಹಾಡಿಯೂ ಹಾಡಿಯಾರು. ಆದರೆ ಒಂದು ಸ್ವರ ಮರೆತರೂ ತಬ್ಬಿಬ್ಬು, ಆಭಾಸ. ನಾಡಿದ್ದು ಬೇರೆಲ್ಲಾದರೂ ಹಾಡಬೇಕೆಂದರೆ ಪುನಃ ಬಂದಾರು. ಹಾಗಾಗಬಾರದು. ಅವರ ಜ್ಞಾನವು ಆಳವಾಗಿದ್ದಷ್ಟು ಅವರು ಸ್ವತಂತ್ರರಾಗಿರುತ್ತಾರೆ. ಅವರು ಆ ರೀತಿ ಕಲಿಯಲು ನಾವು ಪ್ರೇರೇಪಿಸಬೇಕು. ಅಡಿಪಾಯವು ಭದ್ರವಾಗಿದ್ದಲ್ಲಿ ಹೆಜ್ಜೆ ತಪ್ಪುವುದಿಲ್ಲ. ಸ್ಪರ್ಧೆಗಳಿಗಾಗಿ ಸಂಗೀತ ಕಲಿಯದೆ, ಸಂಗೀತಕ್ಕಾಗಿ ಸಂಗೀತ ಕಲಿಯುವಂತಾಗಬೇಕು. ಸ್ವರಜತಿ, ಜಂಟಿಸ್ವರ, ವರ್ಣ, ಯಾವುದೂ ಬೇಡ ಅನ್ನುವುದು ಸರಿಯಲ್ಲ, ಇವತ್ತು ಸ್ವರ ಹಾಕಿಕೊಟ್ಟು ನಾಳೆ ಅವರು ಹೋಗಿ ಹಾಡುವಂತಾಗಬಾರದು. ಬುನಾದಿಯು ಗಟ್ಟಿಯಾಗಿದ್ದಲ್ಲಿ ಎಲ್ಲಿ ಯಾವಾಗ ಬೇಕಾದರೂ ಅವರೇ ಸ್ವಂತವಾಗಿ ಹಾಡಬಹುದು.

**ಹೊ** : ಕರ್ನಾಟಕ ಸಂಗೀತಕ್ಕೆ ಒಳ್ಳೆ ಭವಿಷ್ಯವಿದೆಯೆ ? ಅಥವಾ ಕ್ಷೀಣಿಸುತ್ತಿದೆಯೇ ? ನೀವೇ ಹೇಳಿದಂತೆ ಸಂಗೀತ ಕಾರ್ಯಕ್ರಮವು ರಾತ್ರಿ ೧೨-೧ ಗಂಟೆಯಾದರೂ ಕೂತು ಚಳಿ ಮಳೆಯನ್ನೂ ಲೆಕ್ಕಿಸದೆ ಕೇಳುತ್ತಿದ್ದರು. ಸಂಗೀತ ಪ್ರಿಯರು ಈಗಲೂ ಹಾಗೇ ಇದ್ದಾರೋ ಇಲ್ಲ ಸಂಖ್ಯೆ ಕಮ್ಮಿಯಾಗಿದೆಯೋ ?

**ಪೊ** : ಮ್ಯೂಸಿಕ್ ಅಕಾಡೆಮಿ, ಸಂಗೀತ ಸಭಾಗಳಿಗೆ ಹೋಗಿ ಹಾಡುತ್ತೇನೆ. ಚೆನ್ನೈಗೆ ಹೋಗಿ ಹಾಡುತ್ತೇನೆ.

ಸಭಾಂಗಣ ತುಂಬಿರುತ್ತದೆ. ಸಭಾಪತಿಯವರೇ ಹೇಳಿದರು "ನಾವ್ಯಾರೂ ಮಧ್ಯೆ ಎದ್ದುಹೋಗುವುದಿಲ್ಲ, ಸಭೆ ಮುಗಿಯುವವರೆವಿಗೂ ಇದ್ದು ಸಾವಧಾನದಿಂದ ಕೇಳಿ ಆನಂದಿಸುತ್ತೇವೆ" ಎಂದು.

**ಹೊ** : ದಕ್ಷಿಣ ಭಾರತದ ಯಾವ ರಾಜ್ಯದಲ್ಲಿ ಹೆಚ್ಚು ಸಂಖ್ಯೆಯಲ್ಲಿ ಸಂಗೀತನಿಷ್ಠರಾದ ರಸಿಕರಿದ್ದಾರೆ ?

**ಪೊ** : ಕೇರಳದಲ್ಲಿ ಎಲ್ಲ ಕಡೆಯೂ ಹಾಡಿದ್ದೇನೆ. ಎಲ್ಲಾ ದೇವಸ್ಥಾನಗಳಲ್ಲೂ ಹಾಡಿದ್ದೇನೆ. ಸಂಗೀತಪ್ರಿಯರೂ ಬಹಳ ಆಸ್ಥೆಯಿಂದ ಕೇಳಿದ್ದಾರೆ. ಈಗ ಸ್ವಲ್ಪ ಬದಲಾಗಿದೆ. ಮೊದಲಿನಷ್ಟು ಕಾರ್ಯಕ್ರಮಗಳು, ಉತ್ಸವಗಳು, ನಡೆಯುತ್ತಿಲ್ಲ. ಮೊದಲು ಪ್ರತಿದಿನ ಕಚೇರಿ ನಡೆಯುತ್ತಿತ್ತು. ಈಗ ಉತ್ಸವ ಕಚೇರಿಗಳೇ ಕಡಿಮೆ. ಅಕಾಡೆಮಿಗಳಿಗೂ ಹೋಗುತ್ತಿದ್ದೆ. ಈಚೆಗೆ ಚೆನ್ನೈಯಲ್ಲಿ ೧೦-೧೨ ಬಾರಿ ಹೋಗಿದ್ದೇನೆ. ಎಲ್ಲಾ ಕಡೆಯೂ ಒಂದಕ್ಕಿಂತ ಒಂದು ಚೆನ್ನಾಗಿ ನಡೆಯಿತು. ಜನರು ತುಂಬಾ ಚೆನ್ನಾಗಿ ಕೇಳ್ತಾರೆ. ಕರ್ನಾಟಕದಲ್ಲಿ ಬೆಂಗಳೂರಿಗೆ ಹೋಗಿದ್ದೆ. ಶ್ರೀರಾಮ ಸೇವಾ ಮಂಡಳಿಯಲ್ಲಿ ಕಚೇರಿ. ಕಾರ್ಯಕ್ರಮದ ಸಮಯ ಬೆಳಿಗ್ಗೆಯಾದುದರಿಂದಲೂ ಪ್ರಚಾರದ ಅಭಾವದಿಂದಲೂ ಬಹಳಷ್ಟು ಜನರಿಗೆ ತಿಳಿಯದೆಹೋಯಿತು. ಆದರೂ ಒಂದಷ್ಟು ರಸಿಕರು ತುಂಬಾ ಆಸಕ್ತಿಯಿಂದ ಕೇಳಿ ಬಹಳ ಚೆನ್ನಾಗಿತ್ತೆಂದರು. ಹುಬ್ಬಳ್ಳಿಗೆ ಹೋಗಿದ್ದೇನೆ. ಹಿಂದುಸ್ತಾನಿ ಸಂಗೀತ ಕೇಂದ್ರವದು. ಕಾರ್ಯಕ್ರಮವು ಚೆನ್ನಾಗಾಯಿತು. ಕರ್ನಾಟಕದಲ್ಲಿ ನನ್ನ ಹಾಡುಗಾರಿಕೆಯನ್ನು ಕೇಳಿದ್ದ ಹಲವರು ನಾನು ಚೆನ್ನೈಯಲ್ಲಿ ಹಾಡುವೆನೆಂದು ತಿಳಿದಾಗ ಅಲ್ಲಿಗೇ ಬಂದರು. ಕರ್ನಾಟಕದಲ್ಲಿ ಇನ್ನೂ ಒಂದೆರಡು ಕಡೆ ಹೋಗಿದ್ದೇನೆ. ಈಗ ಊರುಗಳ ಹೆಸರು ಮರೆತುಹೋಗಿದೆ.

**ಹೊ** : ಸಂಗೀತ, ಸಂಗೀತಗಾರರಿಗೆ ಉತ್ತೇಜನ ನೀಡುವಲ್ಲಿ ಮತ್ತು ಸಹಜ ಸಾಮರ್ಥ್ಯ ಮತ್ತು ನಿಪುಣತೆಯನ್ನು ಪ್ರೋತ್ಸಾಹಿಸುವಲ್ಲಿ ಹಾಗೂ ಜನರ ಪ್ರತಿಕ್ರಿಯಿಸುವಿಕೆಯನ್ನು ಸೂಕ್ಷ್ಮವಾಗಿಸುವಲ್ಲಿ ಸರ್ಕಾರದ ಪಾತ್ರದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ಪೊ** : ಮೊದಲು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದೊಡನೆ ಕೆಲಸ ಸಿಕ್ಕುತ್ತಿತ್ತು. ಶಾಲೆಗಳಲ್ಲಿ ಸಂಗೀತ ಅಧ್ಯಾಪಕರ ನೇಮಕವಾಗುತ್ತಿತ್ತು. ಆದರೆ ಈಗ ಅದೆಲ್ಲಾ ನಿಂತುಹೋಗಿದೆ. ಶಾಲೆಗಳಲ್ಲಿ ಸಂಗೀತ ಅಧ್ಯಾಪಕರುಗಳೇ ಇಲ್ಲ. ಅದೊಂದು ಕೊರತೆಯೇ ಸರಿ.

**ಹೊ** : ಶ್ರೀ ಶೆಮ್ಮನ್‌ಗುಡಿ ಮತ್ತು ಶ್ರೀ ಚೆಂಬೈರವರೊಡನೆ ನಿಮ್ಮ ಅನುಭವ...

**ಪೊ** : ಅದು ಅಸಾಧಾರಣವಾದ್ದು. ನಾನು ಶೆಮ್ಮನ್‌ಗುಡಿಯವರ ಬಳಿ ಕಲಿಯುತ್ತಿದ್ದಾಗ ತರಗತಿಗೆ ಸಂಜೆವೇಳೆ ಹೋಗುತ್ತಿದ್ದೆ. ಅವರು ಸಿದ್ಧರಾಗಿ ಕಾಯುತ್ತಿರುತ್ತಿದ್ದರು. ಹೀಗಾಗಿ ನಾನು ಹೋದಕೂಡಲೆ ಪಾಠ ಶುರುವಾಗುತ್ತಿತ್ತು. ಒಂದು ಅನುಪಲ್ಲವಿಯೋ ಪಲ್ಲವಿಯೋ ಹೇಳಿಕೊಡುತ್ತಿದ್ದರು. ನಾನದನ್ನು ಚೆನ್ನಾಗಿ ಕಲಿತು ಅಭ್ಯಾಸಮಾಡಿ ತಯಾರಿಯೊಂದಿಗೆ ಮುಂದಿನ ಸಲ ಪಾಠಕ್ಕೆ ಹೋಗಬೇಕಿತ್ತು. ನನಗೆ ಸಂಜೆ ವೇಳೆ ಬಿಡುವಾದ್ದರಿಂದ ಪಾಠ ಆಗ ನಡೆಯುತ್ತಿತ್ತು. ಆಗ ಚೆಂಬೈಯವರು ಕಾಲೇಜಿನ ಪ್ರಾಂಶುಪಾಲರಾಗಿದ್ದುದರಿಂದ ಬಹಳ ಬಿಜ್ಜಿಯಾಗಿರುತ್ತಿದ್ದರು. ಆದರೂ ತಪ್ಪದೆ ತರಗತಿಗೆ ಹೋಗಿ ಪಾಠ ಹೇಳುತ್ತಿದ್ದರು.

**ಹೊ** : ಸಾಮಾನ್ಯ ಮನುಷ್ಯನಿಗೆ ಸಂಗೀತ ಕೇಳುವುದರಿಂದ ಏನಾದರೂ ಪ್ರಯೋಜನವಿದೆ ಎನಿಸುತ್ತದೆಯೆ ?

**ಪೊ** : ಸ್ವಲ್ಪವಾದರೂ ಅದರ ಜ್ಞಾನವಿರಬೇಕು. ಜ್ಞಾನವಿದ್ದು ಕೇಳಿದರೆ ಪ್ರಯೋಜನ.



ರಮಾ ನಾಗೇಂದ್ರನ್, ಜಿ. ಆರ್. ಮತ್ತು ಪೊನ್ನಮ್ಮಾಳ್

**ಹೊ** : ರಸಾಸ್ವಾದವನ್ನು ಹೊರತುಪಡಿಸಿದರೆ ಕೇಳುಗನಿಗೆ ಬೇರಾವ ಲಾಭ ದಕ್ಕುತ್ತದೆ ಎನ್ನುತ್ತೀರಿ ?

**ಪೊ** : ಅದು ದಕ್ಕಿಸಿಕೊಳ್ಳಬೇಕಾದ ವಿಷಯ.

**ಹೊ** : ದೀಕ್ಷಿತರ್, ಸ್ವಾತಿ ತಿರುನಾಳ್, ಶ್ಯಾಮಾಶಾಸ್ತ್ರಿ ಇವರುಗಳೆಲ್ಲರ ಕೃತಿಗಳಲ್ಲಿ ನೀವು ಯಾರದನ್ನು ಹೆಚ್ಚಾಗಿ ಮೆಚ್ಚುತ್ತೀರಿ ?

**ಪೊ** : ಅವರೆಲ್ಲರ ಕೃತಿಗಳೂ ಮಹಾನ್ ಕೃತಿಗಳೇ. ಒಬ್ಬರಿಗಿಂತ ಒಬ್ಬರು ಮಹಾನ್ ಸಂಗೀತಜ್ಞರು. ಒಬ್ಬೊಬ್ಬರಲ್ಲಿ ಒಂದೊಂದು ಮಹತ್ವವಿದೆ.

**ಹೊ** : ಅದು ಸರಿ. ಆದರೂ...

**ಪೊ** : ಯಾರದೂ ಬೇಡವೆನ್ನುವಂತೆಯೇ ಇಲ್ಲ. ಎಲ್ಲರದೂ ಅದ್ಭುತವಾಗಿದೆ. ಎಲ್ಲವೂ ಬೇಕೆನಿಸುವಂತಿದೆ.

**ಹೊ** : ನೀವು ಯಾರ ಕೃತಿಗಳನ್ನು ಹೆಚ್ಚಾಗಿ ಹಾಡುತ್ತೀರಿ ?

**ಪೊ** : ಸಾಮಾನ್ಯವಾಗಿ ಹಾಡುವಾಗ ಎಲ್ಲರದನ್ನೂ ಹಾಡುವೆ. ಕೆಲವು ಸಲ ಆಯಾ ಸನ್ನಿವೇಶ, ಸ್ಥಳ, ದೇವಸ್ಥಾನವಾದಲ್ಲಿ ಅಲ್ಲಿಯ ದೇವದೇವತೆಗಳ ಬಗ್ಗೆ ಹಾಡುಗಳನ್ನು ಹಾಡುತ್ತೇನೆ ಅಥವಾ ಅಲ್ಲಿಯ ಜನರಿಗೆ ಪ್ರಿಯರಾದವರ ಹಾಡು, ಹೀಗೆ. ಮದ್ರಾಸು ಅಕಾಡೆಮಿಯಲ್ಲಿ ಎಲ್ಲಾ ಬೆರಸಿ ಹಾಡಿದೆ.

**ಹೊ** : ಕರ್ನಾಟಕದ ರಚನಾಕಾರರ ಹಾಡುಗಳು : ಪುರಂದರ, ಕನಕ, ಮೈಸೂರ್ ವಾಸುದೇವಾಚಾರ್ಯ...

**ಪೊ** : ಹೌದು, ಅಲ್ಲಿ ಹೋದಾಗ ಅವರುಗಳ ರಚನೆಗಳನ್ನು ಹಾಡಿದ್ದೇನೆ. ಸಾಮಾನ್ಯವಾಗಿ ತ್ಯಾಗರಾಜರ್, ಸ್ವಾತಿ ತಿರುನಾಳ್, ಶ್ಯಾಮಾಶಾಸ್ತ್ರಿ, ದೀಕ್ಷಿತರ್ ಇವರುಗಳ ರಚನೆಗಳನ್ನು ಯಾವಾಗಲೂ ಹಾಡುತ್ತೇನೆ. ಇನ್ನುಳಿದಂತೆ ಆಯಾ ಪ್ರಾಂತ್ಯದ ಭಾಷೆಯ ಕೃತಿಗಳನ್ನು ಹಾಡುತ್ತೇನೆ.

**ಹೊ** : ನೀವೇ ಹಾಡುಗಳಿಗೆ ರಾಗ ಹಾಕಿದ್ದುಂಟೇ ?

**ಪೊ** : ಹೌದು, ರಾಗ ಹಾಕಿದ್ದೇನೆ. ಆದರೆ ಯಾವುದೂ ಪುಸ್ತಕವಾಗಿ ಮುದ್ರಿತವಾಗಿಲ್ಲ. ಆಕಾಶವಾಣಿಗೆ ಸಾಹಿತ್ಯಕ್ಕೆ ಅನೇಕ ವೇಳೆ ರಾಗವನ್ನು ಹಾಕಿಕೊಟ್ಟಿದ್ದೇನೆ. ಸಾಹಿತ್ಯವನ್ನು ಕೊಟ್ಟು ಅದಕ್ಕೆ ರಾಗ ಸಂಯೋಜಿಸಲು ಕೇಳಿ ಕೊಂಡಾಗಲೂ ಹಾಕಿದ್ದುಂಟು.

**ಹೊ** : ನೀವೇ ರಾಗ ಹಾಕಿದ ಯಾವುದಾದರೂ ಹಾಡನ್ನು ಒಮ್ಮೆ ಹಾಡಬಹುದಾದರೆ...

**ಪೊ** : ತಕ್ಷಣ ಯಾವುದೂ ನೆನಪಿಗೆ ಬರಲೊಲ್ಲದು...

**ಹೊ** : ಆಯಿತು, ನಿಮ್ಮಿಷ್ಟದ್ದು ಯಾವುದಾದರೊಂದನ್ನು ಹಾಡಬಹುದಲ್ಲವೆ ?

**ಪೊ** : ಅಗತ್ಯವಾಗಿ. (ಶ್ರುತಿ ಪೆಟ್ಟಿಗೆ ತರಿಸಿ 'ದೇವೀ ಜಗಜ್ಜನನೀ' ಪೂರ್ತಿಯಾಗಿ ಮನಮುಟ್ಟುವಂತೆ ಹಾಡಿ, ಒಂದೊಂದು ಪಾವಿನಷ್ಟು ದೊಡ್ಡದಾದ ಲೋಟಗಳ ತುಂಬ ಕಾಫಿ ತರಿಸಿಕೊಟ್ಟರು).

**ಹೊ** : ನಿಮ್ಮನ್ನು ಕಂಡರೆ 'ಅಜ್ಜಿ' ಎನ್ನಬೇಕೆನಿಸುತ್ತದೆ. ಆಗಬಹುದೆ ?

**ಪೊ** : ಅದಕ್ಕೇನು ? ನಾನು ಅನೇಕ ಮಕ್ಕಳಿಗೆ ಅಜ್ಜಿಯಾಗಿದ್ದೇನೆ.

**ಹೊ** : ಆದರೂ ಹಾಡುವುದರಲ್ಲಿ ನೀವು ಅಜ್ಜಿಯಲ್ಲವಲ್ಲ, ನಾಳೆ ಅರಮನೆಯ ಆವರಣದಲ್ಲಿ ಮೂರು ಗಂಟೆಗಳ ಕಚೇರಿ ನೀಡುತ್ತೀರಲ್ಲವೆ ?

**ಪೊ** : ಹೌದು, ಅನೇಕ ವರ್ಷಗಳಿಂದ ಅಲ್ಲಿ ಕಚೇರಿ ನಡೆಸುತ್ತಾ ಬಂದಿದ್ದೇನೆ. ಈಗ ನನ್ನ ಜೊತೆ ಒಬ್ಬ ಶಿಷ್ಯೆಯೂ ಹಾಡುತ್ತಾಳೆ.

**ಹೊ** : ಬಹಳ ಥ್ಯಾಂಕ್ಸ್, ಅಜ್ಜಿ. ಈ ಊರಿಗೆ ಬಂದು ನಾಲ್ಕು ಸಂಗೀತ ಕಚೇರಿಗಳಿಗೆ ಹೋಗುವುದಲ್ಲದೆ ನಿಮ್ಮನ್ನು ನಿಮ್ಮ ಮನೆಯಲ್ಲೇ ಕಾಣಲು ಅವಕಾಶ ಕೊಟ್ಟಿದ್ದೀರಿ. ನಾವು ನಿಮಗೆ ಋಣಿಗಳು.

**ಪೊ** : ಅಡ್ಡಿಯಿಲ್ಲ, ಮುಂದಿನ ವರ್ಷದ ಉತ್ಸವಕ್ಕೆ ಬನ್ನಿ, ಮತ್ತೆ ನಮ್ಮ ಮನೆಗೂ ಬನ್ನಿ.

**ಹೊ** : ನಮಸ್ಕಾರ, ಇನ್ನೊಮ್ಮೆ ಬರುತ್ತೇವೆ. ಆಗ ನಿಮ್ಮ ಶಿಷ್ಯೆ ಅಪರ್ಣಾ ಸಹ ನಿಮ್ಮ ಜೊತೆ ಹಾಡುತ್ತಾರೆ, ಅಲ್ಲವೆ ?

ಸಂದರ್ಶನ ಲೇಖನ ಸಿದ್ಧಪಡಿಸಿದವರು : ಉಷಾ ಸಂಪತ್ಕುಮಾರ್
ನಂ. ೪೭, ೨ನೇ ಅಡ್ಡರಸ್ತೆ, ಆರ್. ಎಂ.ವಿ. ೨ನೇ ಹಂತ
ಆರ್. ಎಂ. ವಿ. ಕಾಲೋನಿ, ಬೆಂಗಳೂರು - ೫೬೦ ೦೯೪



# ಶನಿ ಗ್ರಹದ ಪುನರಾಗಮನ

## ನಭಾವಲೋಕನ

**ಕ**ಳೆದ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ಫಳಫಳಗುಟ್ಟುತ್ತಿದ್ದ ಶುಕ್ರ ಈ ತಿಂಗಳು ವಿದಾಯ ಹೇಳಲಿದೆ. ಇದು ಕ್ರಮೇಣ ದಿಗಂತವನ್ನು ಸಮೀಪಿಸುತ್ತದೆ ಎಂದು ತಿಂಗಳ ಆರಂಭದಿಂದಲೇ ತಿಳಿಯಬಹುದು. ಆದ್ದರಿಂದ ಆಕಾಶದಲ್ಲಿ ಗ್ರಹಗಳೇ ಇಲ್ಲವೇ ಎಂದು ನಿರಾಶರಾಗಬೇಕಾಗಿಲ್ಲ. ಪೂರ್ವದಲ್ಲಿ ಶನಿ ವಿರಾಜಮಾನವಾಗಿದೆ. ತಿಂಗಳ ಆರಂಭದಲ್ಲಿ ಸೂರ್ಯಾಸ್ತವಾದ ನಂತರ ಕಾಣಿಸುವ ಇದು ತಿಂಗಳ ಕೊನೆಗೆ ಸೂರ್ಯಾಸ್ತದ ಮುನ್ನವೇ ಹಾಜರಾಗಿರುತ್ತದೆ. ೮ರಂದು ವಿಯುತಿ. ಅಂದರೆ ಸೂರ್ಯನಿಗೂ ಶನಿಗೂ ನಡುವೆ ಭೂಮಿ ಎಂದರ್ಥ. ಈ ಸಂದರ್ಭದಲ್ಲಿ ಶನಿ ಅತಿ ಪ್ರಕಾಶಮಾನ ವಾಗಿ ಕಾಣುವುದು ಸಹಜ; ಏಕೆಂದರೆ ಅದು ಭೂಮಿಗೆ ಕನಿಷ್ಠ ದೂರದಲ್ಲಿರುತ್ತದೆ. ಹುಣ್ಣಿಮೆಯ ಚಂದ್ರನಂತೆ ಸೂರ್ಯನಿಗೆ ಎದುರಾಗಿರುವುದರಿಂದ ಅದರ ಪೂರ್ಣ ರೂಪ ನಮಗೆ ದೊರಕುತ್ತದೆ. ಆದರೆ ಸಣ್ಣ ದೂರದರ್ಶಕಗಳಿಂದ ಉಂಗುರಗಳ ಸುಂದರ ನೋಟ ದೊರಕದು. ತೆಳ್ಳನೆಯ ಗೆರೆಗಳ ಹಾಗೆ ಕಾಣಬಹುದಷ್ಟೇ. ಇನ್ನಾರು ತಿಂಗಳು ಕಳೆದ ಮೇಲೆ ದೊಡ್ಡ ದೂರದರ್ಶಕಗಳಿಗೂ ಉಂಗುರದ ನೋಟ ಸಿಗುವುದಿಲ್ಲ. ಚಿಂತೆಯಿಲ್ಲ; ಅದರ ಉಪಗ್ರಹಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದು.




ವಿಯುತಿ ಎಂದರೆ ರಾತ್ರಿ ಇಡೀ ನೋಡಲು ಲಭ್ಯ ಎಂದೂ ಅರ್ಥೈಸಬಹುದು. ಹುಣ್ಣಿಮೆಯ ಚಂದ್ರ ರಾತ್ರಿ ಇಡೀ ಕಾಣುವುದಿಲ್ಲವೇ ಹಾಗೆಯೇ ಶನಿ ಕೂಡ ಸಂಜೆ ಉದಯಿಸಿ ಮುಂಜಾವಿಗೆ ಕಂತುವುದು. ೧೧ರ ಸಂಜೆ ಹುಣ್ಣಿಮೆಯ ಚಂದ್ರನನ್ನು ಒಡಗೂಡುವ ಶನಿಯನ್ನು ಗಮನಿಸಿ. ಅಥವಾ ನೀವು ಸಂಜೆ ಕಂಡುಕೊಂಡಿದ್ದ ಚಿಕ್ಕೆ ಶನಿಯೇ ಎಂದು ಖಾತ್ರಿ ಮಾಡಿಕೊಳ್ಳಿ.

ಶನಿಗ್ರಹದ್ದು ವಿಯುತಿ; ಬುಧ ಮತ್ತು ಶುಕ್ರದ್ದು ಯುತಿ. ಒಂದು ಸೂರ್ಯನ ಮುಂದೆ ಹಾದುಹೋದರೆ ಇನ್ನೊಂದು ಹಿಂದೆ ಹಾದುಹೋಗುತ್ತದೆ. ೫ರಿಂದಲೇ ಹಿನ್ನಡೆಯುವ ಶುಕ್ರ ೨೭ರಂದು ಸೂರ್ಯ ಮತ್ತು ಭೂಮಿಗಳ ನಡುವೆ ಹಾದುಹೋಗುತ್ತದೆ. ಇದೇ ಯುತಿ; ಇದರರ್ಥ ನಾವು ಶುಕ್ರನನ್ನು ನೋಡಲು ಸಾಧ್ಯವಿಲ್ಲ. ಅದು ಸೂರ್ಯನೊಡನೆಯೇ ಉದಯಿಸುತ್ತದೆ; ಸೂರ್ಯನೊಡನೆಯೇ ಕಂತುತ್ತದೆ. ೨೬ರಂದು ಶುಕ್ರ-ಚಂದ್ರ-ಸೂರ್ಯ-ಬುಧ ಗುಂಪುಗೂಡುತ್ತವೆ (ಸೋಹೋ ಉಪಗ್ರಹ ಕಳಿಸುವ ಚಿತ್ರದಲ್ಲಿ ಕಾಣಬಹುದು; ಇಂಟರ್‌ನೆಟ್‌ನಲ್ಲಿ ಲಭ್ಯವಿದೆ.) ಮುಂದಿನ ತಿಂಗಳಿಂದ ಬೆಳಗಿನ ಜಾವ ನೋಡಲು ಸಿಗುತ್ತದೆ. ಬುಧ ಗ್ರಹದ ಯುತಿ ೩೧ರಂದು; ಅದು ಸೂರ್ಯನ ಹಿಂದಿನಿಂದ ಹಾದು ಬರಲಿದೆ. ಮುಂದಿನ ತಿಂಗಳಲ್ಲಿ ಅದು ಸಂಜೆ ಕಾಣಲಿದೆ.



೧೦ನೆಯ ತಾ॥ ಸಂಜೆ ಪೂರ್ವದ ನೋಟ; ಚಂದ್ರ, ಶನಿ ಮತ್ತು ಮಘ ನಕ್ಷತ್ರ

ಇನ್ನುಳಿದ ಗ್ರಹಗಳಾದ ಮಂಗಳ, ಬುಧ ಮತ್ತು ಗುರು ಮೂರೂ ಬೆಳಗಿನ ಜಾವ ಉದಯಿಸುತ್ತವೆ. ಗುರುವನ್ನು ಪತ್ತೆ ಮಾಡುವುದು ಕಷ್ಟವೇನಿಲ್ಲ; ಆದರೆ ಬುಧ ಕ್ರಮೇಣ ದಿಗಂತದ ಅಂಚಿಗೆ ಸರಿಯುತ್ತದೆ. ಮಂಗಳ ಮುಂಜಾವಿನ ಕೆಂಪಿನಲ್ಲಿ ಕರಗಿ ಹೋಗುತ್ತದೆ.

ಕಳೆದ ತಿಂಗಳು ಸುದ್ದಿ ಮಾಡಿದ್ದ ಲುಲಿನ್ ಎಂಬ ಧೂಮಕೇತು ದುರ್ಬೀನಿಗೆ ನಿಲುಕುವಂತಿದೆ. ಮಾರ್ಚ್ ೫ರಂದು ಅದು ಕಟಕ ರಾಶಿಯ ಪ್ರೆಸಿಪಿ ಗುಚ್ಛದ ಸಮೀಪವೇ ಹಾದುಹೋಗುವುದು. ಈ ಅಂಶ ಬಳಸಿ ಅದನ್ನು ಪತ್ತೆ ಮಾಡಬಹುದು.

ತನ್ನ ಕಕ್ಷೆಯಲ್ಲಿನ ಒಂದು ಮುಖ್ಯ ಹಂತವನ್ನು ಭೂಮಿ ೨೦ರಂದು ದಾಟುವುದು. ಅಂದು ವಸಂತ ವಿಷುವ; ಯುಗಾದಿಯ ಸಂಭ್ರಮ. ಹಗಲು ರಾತ್ರಿಗಳ ಅವಧಿ ಸಮ.

**ಖಗೋಳ ದಿನಚರಿ**

- ೧ ಮಂಗಳ - ಬುಧ ಜೋಡಿ
- ೪ ಚಾಂದ್ರಮಾಸದ ಮೊದಲ ಪಾದ
- ೫ ಶುಕ್ರದ ಹಿನ್ನಡೆ ಆರಂಭ
- ೮ ಶನಿಗ್ರಹದ ಯುತಿ
- ೧೧ ಹುಣ್ಣಿಮೆ ೦೮:೦೮ಕ್ಕೆ; ಶನಿ - ಚಂದ್ರ ಜೋಡಿ
- ೧೭ ಚಂದ್ರ - ಜ್ಯೇಷ್ಠಾ ಜೋಡಿ
- ೧೮ ಚಾಂದ್ರಮಾಸದ ಕೊನೆಯ ಪಾದ
- ೨೦ ವಸಂತ ವಿಷುವ ; ೧೭:೧೪ಕ್ಕೆ
- ೨೨ ಚಂದ್ರ - ಗುರು ಜೋಡಿ
- ೨೬ ಚಂದ್ರ - ಬುಧ ಜೋಡಿ
- ೨೬ ಅಮಾವಾಸ್ಯೆ ೨೧:೩೬ಕ್ಕೆ
- ೨೭ ಬುಧ - ಶುಕ್ರ - ಚಂದ್ರ ಜೋಡಿ
- ೩೧ ಬುಧ ಗ್ರಹದ ಯುತಿ


**ಡಾ॥ ಬಿ. ಎಸ್. ಶೈಲಜಾ**

ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೧



# ಮತಾಂತರ ಮತ್ತು ಕೋಜಾ ದಂಗೆಗಳು

ಮತಾಂತರವೆಂಬುದು ಭಾರತದ ಇತಿಹಾಸದಲ್ಲಿ ಸಾವಿರಾರು ವರ್ಷಗಳಷ್ಟು ಪ್ರಾಚೀನವಾದುದು. ಆದರೆ, ಮತಾಂತರವೆಂಬುದು ಮೊನ್ನೆ ತಾನೇ ಆರಂಭವಾಗಿದೆ ಎಂಬಂತೆ, ಕೋಜಾ (ಕೋಮುವಾದಿ ಜಾತಿವಾದಿ) ಆರೆಸ್ಸೆಸ್ ಸಂಘಟನೆಗಳು ಕರ್ನಾಟಕ ಮತ್ತು ಒರಿಸ್ಸಾ ರಾಜ್ಯಗಳಾದ್ಯಂತ, ಕ್ರಿಶ್ಚಿಯನ್ನರ ಮೇಲೆ ನಡೆಸಿರುವ ದೌರ್ಜನ್ಯ ಖಂಡನೀಯ. ಕ್ರೈಸ್ತರು ಮತ್ತು ಅವರ ಚರ್ಚ್‌ಗಳ ಮೇಲೆ ದೌರ್ಜನ್ಯವೆಸಗುವುದರಿಂದ ಮತಾಂತರವನ್ನು ತಡೆಗಟ್ಟಬಹುದೆಂಬ ಕೋಜಾಗಳ ಆಲೋಚನೆಯೇ ಮೂಲತಃ ಮೂರ್ಖತನದ್ದು. ಚರ್ಚ್‌ಗಳನ್ನು ಹೀಗೆ ದಮನ ಮಾಡುವುದರಿಂದ ಪುರೋಹಿತ ಸಂಸ್ಕೃತಿ ಮೂಲದ ಜಾತೀಯ ಅಪಮಾನಗಳಾಗಲಿ, ಅಸ್ಪೃಶ್ಯತೆಯಂಥ ಅಮಾನುಷ ಗುಲಾಮಿ ಆಚರಣೆಯಾಗಲಿ ನಿರ್ನಾಮವಾಗಲು ಸಾಧ್ಯವಿಲ್ಲ. ದೇಶದ ಯಾವ ಯಾವ ರಾಜ್ಯಗಳಲ್ಲಿ ಕೋಜಾಗಳು ಅಧಿಕಾರಕ್ಕೆ ಬರುತ್ತಾರೋ ಅಲ್ಲೆಲ್ಲ, ಕೋಮು ದಂಗೆಗಳು ನಿರಂತರವಾಗಿ ನಡೆಯುತ್ತವೆ. ಈ ರೀತಿಯ ಕೋಮುದಂಗೆಯ ಮೂಲೋದ್ದೇಶ ಎರಡು ರೀತಿಯದು : (೧) ಮತಾಂತರ ವಿರೋಧಿ ಹೆಸರಿನಲ್ಲಿ ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರ ಮೇಲೆ ನರಮೇಧವನ್ನೇ ನಡೆಸುವುದು. ಇದಕ್ಕೆ ಗುಜರಾತ್‌ನ ನರಹಂತಕ ನರೇಂದ್ರ ಮೋದಿ ಒಂದು ಸೂಕ್ತ ನಿದರ್ಶನವೆಂಬುದಕ್ಕೆ ಗೋಧ್ರಾ ಘಟನೆಯನ್ನು ಕುರಿತ ಆಯೋಗದ ವರದಿಯಲ್ಲಿ ಸಾಕಷ್ಟು ನಿದರ್ಶನಗಳೇ ಇವೆ. (೨) ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರ ಮೇಲೆ ಅಮಾನುಷ ನರಮೇಧ ನಡೆಸುವ ಮೂಲಕ ಅಸ್ಪೃಶ್ಯತೆಯ ವಿರುದ್ಧ ಅಸ್ಪೃಶ್ಯರಲ್ಲಿ ಉಂಟಾಗುವ ಪ್ರತಿಭಟನೆಯನ್ನು ನಿರಂತರವಾಗಿ ದಮನ ಮಾಡುತ್ತ ನಡೆಯುವುದು. ಏಕೆಂದರೆ, ಅಸ್ಪೃಶ್ಯರ ಆ ಪ್ರತಿಭಟನೆಯ ಮೂಲದಲ್ಲಿ ಹಿಂದೂ ಧರ್ಮವನ್ನು ಅಸ್ಪೃಶ್ಯರು ತಿರಸ್ಕರಿಸಬೇಕೆಂಬ ಅಂಬೇಡ್ಕರರ ಅಂತಿಮ ಸಿದ್ಧಾಂತವೂ ಅಡಗಿದೆ, ಸಂವಿಧಾನಾತ್ಮಕವಾದ ಧಾರ್ಮಿಕ ಸ್ವಾತಂತ್ರ್ಯ ಅದರ ಹಿಂದಿನ ಪ್ರೇರಣೆಯೂ ಆಗಿದೆ.

ಕರ್ನಾಟಕದಲ್ಲಿ ಕ್ರಿಶ್ಚಿಯನ್ನರ ಮೇಲೆ ನಡೆಯುತ್ತಿದ್ದ ಸಂಘಪರಿವಾರದವರ ದೌರ್ಜನ್ಯಗಳು ಸದ್ಯಕ್ಕೆ ಸ್ಥಗಿತಗೊಂಡಿವೆ. ಸಂವಿಧಾನದ ೩೫೫ ಮತ್ತು ೩೫೬ನೇ ಪರಿಚ್ಛೇದಗಳ ಎಚ್ಚರಿಕೆ ನೀಡುವುದು ಕೇಂದ್ರ ಸರ್ಕಾರಕ್ಕೆ ತೀರಾ ಅನಿವಾರ್ಯವಾದ ಬಳಿಕ, ಕೋಜಾಗಳು ತಮ್ಮ ಸಮಾಜ ವಿರೋಧಿ ಕೃತ್ಯಗಳನ್ನು ಸದ್ಯಕ್ಕೆ ನಿಲ್ಲಿಸಿದ್ದಾರೆ. ಆದರೂ, ಕೆಲವು ಜ್ವಲಂತ ಪ್ರಶ್ನೆಗಳಂತೂ ಹಾಗೆಯೇ ಉಳಿದಿವೆ. ನಿದರ್ಶನಕ್ಕೆ ಕೋಜಾಗಳು ಬಲಿಷ್ಠವಾಗಿರುವ ದಕ್ಷಿಣ ಕನ್ನಡ ಪ್ರದೇಶದ ಮಂಗಳೂರು ಮತ್ತು ಉಡುಪಿಗಳಲ್ಲಿನ ಕ್ರಿಶ್ಚಿಯನ್ ಚರ್ಚ್‌ಗಳ ಮೇಲೆ ದಮನಕಾರಿ ಕೃತ್ಯಗಳು ನಡೆದಿವೆ. ಅದಕ್ಕೆ ಕಾರಣ ಈ ಚರ್ಚ್‌ಗಳ ಮಿಷನರಿಗಳು ಬಲವಂತದ ಮತಾಂತರ ನಡೆಸುತ್ತಿದ್ದರು ಎಂದು ದೂರಲಾಗಿದೆ. ಆದರೆ, ಈ ರೀತಿಯ ಬಲವಂತದ ಮತಾಂತರಗಳು ನಡೆದದ್ದು ಯಾವಾಗ? ಕೋಟಿ ಕೋಟಿ ಹಣ ಸುರಿದು ಪಕ್ಷಾಂತರಿಗಳನ್ನು ಖರೀದಿಸಿ ರಾಜ್ಯದಲ್ಲಿ ಬಿಜೆಪಿ ಅಧಿಕಾರ ಹಿಡಿದ ನಂತರವೆ? ಅಥವಾ ಇದೇ ಬಿಜೆಪಿ, ಜೆಡಿಎಸ್‌ನ ಜೊತೆಗೆ ಸಮ್ಮಿಶ್ರ ಸರ್ಕಾರ ನಡೆಸುತ್ತಿದ್ದಾಗ ಈ ಮತಾಂತರ ನಡೆಯಿತೆ? ಹಾಗಾದರೆ, ಈ ರೀತಿಯ ಬಲವಂತದ ಮತಾಂತರದಂಥ ಸಂವಿಧಾನ ವಿರೋಧಿ ಕೃತ್ಯಗಳ ವಿರುದ್ಧ ಇದುವರೆಗೆ ಎಷ್ಟು ಪೊಲೀಸ್ ಕಂಪ್ಲೇಂಟ್‌ಗಳನ್ನು ದಾಖಲಿಸಿದ್ದಾರೆ? ಅಂತಹ ಎಷ್ಟು ಪ್ರಕರಣಗಳಲ್ಲಿ ಎಫ್‌ಐಆರ್ ಹಾಕಲಾಗಿದೆ? ಈ ರೀತಿಯ ಬಲವಂತದ ಮತಾಂತರದಲ್ಲಿ ತೊಡಗಿದ್ದ ಎಷ್ಟು ಮಂದಿಯನ್ನು ಈವರೆಗೆ ಬಂಧಿಸಲಾಗಿದೆ?

**ಡಾ॥ ಮ. ನ. ಜವರಯ್ಯ**

ಒಂದು ವೇಳೆ ಉಡುಪಿ ಮತ್ತು ಮಂಗಳೂರಿನ ಚರ್ಚ್‌ಗಳಲ್ಲಿ ಬಲವಂತದ ಮತಾಂತರಗಳು ನಡೆದಿದ್ದು ನಿಜವೇ ಆಗಿದ್ದ ಪಕ್ಷದಲ್ಲಿ, ಆ ಸಂಬಂಧವಾಗಿ ಸಂಬಂಧಪಟ್ಟ ಸರ್ವ ದಾಖಲೆಗಳನ್ನು ರಾಷ್ಟ್ರಪತಿಗಳಿಗೂ ಪ್ರಧಾನ ಮಂತ್ರಿಗಳಿಗೂ ರವಾನಿಸಬೇಕಾಗಿದ್ದು ಕರ್ನಾಟಕ ರಾಜ್ಯದ ಬಿಜೆಪಿ ಸರ್ಕಾರದ ಆದ್ಯ ಕರ್ತವ್ಯವೇ ಆಗಿತ್ತು. ಆದರೆ ಹಾಗೇಕೆ ಮಾಡಲಿಲ್ಲ? ದೌರ್ಜನ್ಯಗಳು ಸ್ಥಗಿತಗೊಂಡ ನಂತರ ಬಿಜೆಪಿ ಸರ್ಕಾರಕ್ಕಿಂತಲೂ ಬಹುವಾಗಿ ತಲೆಕೆಡಿಸಿಕೊಂಡಿರುವವರೆಂದರೆ ಆರೆಸ್ಸೆಸ್ ಕಾದಂಬರಿಕಾರರಾದ ಡಾ॥ ಎಸ್. ಎಲ್. ಭೈರಪ್ಪನವರು. ಅವರು ಎಷ್ಟರಮಟ್ಟಿಗೆ ಹತಾಶರಾಗಿದ್ದಾರೆ ಎಂದರೆ, ದಿನಾಂಕ ೧೬-೧೦-೨೦೦೮ರ 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ ಓದುಗನ ತಲೆ ಚಿಟ್ಟು ಹಿಡಿಸುವ ಒಂದೂವರೆ ಪುಟದ ಕುದೀರ್ಘ ಲೇಖನ ಬರೆದಿದ್ದಾರೆ. ಲೇಖನದ ತುಂಬಾ ಅಸಂಬದ್ಧವಾದ ವಿಚಾರಗಳೇ ತುಂಬಿವೆ. ಆರೆಸ್ಸೆಸ್‌ನಲ್ಲಿರುವ ಶೂದ್ರ

ಮತ್ತು ದಲಿತ ಯುವಕರನ್ನು ಪ್ರಚೋದಿಸಿ ಕ್ರಿಸ್ತರು ಮತ್ತು ಮುಸ್ಲಿಮರ ವಿರುದ್ಧದ ಕೋಮುದಂಗೆಗಳನ್ನು ಹುಟ್ಟುಹಾಕಿ, ಈ ಶೂದ್ರರು ಮತ್ತು ದಲಿತರು ಕ್ರಿಸ್ತರು ಮತ್ತು ಮುಸ್ಲಿಮರ ವಿರುದ್ಧ ಬಿಡುವಿಲ್ಲದ ಬಡಿದಾಟದಲ್ಲೂ ಅಮಾನುಷ ಹತ್ಯಾಕಾಂಡದಲ್ಲೂ ತೊಡಗುವುದರಿಂದ ಮಾತ್ರ, ಭೈರಪ್ಪನವರ ಪುರೋಹಿತ ಪಾರಮ್ಯ, ಪುರೋಹಿತ ಸಂಸ್ಕೃತಿ ಮತ್ತು ಅವರ ಜಾತಿಯವರ ಹಿತಾಸಕ್ತಿಗಳು ಸುರಕ್ಷಿತವಾಗಿರಲು ಸಾಧ್ಯ. ತಮ್ಮ ಈ ಪಿತೂರಿ ಸಿದ್ಧಾಂತವನ್ನು ತಮ್ಮ ಜಾತಿಯವರಿಗೆ ಮನದಟ್ಟು ಮಾಡಿಕೊಡುವ ಸಲುವಾಗಿಯೇ ಡಾ|| ಭೈರಪ್ಪನವರು ಕನ್ನಡದಲ್ಲಿ ಕೆಲವು ಕೆಟ್ಟ ಕಾದಂಬರಿಗಳನ್ನು ಬರೆದು ಪ್ರಕಟಿಸಿದ್ದಾರೆ. ಈ ಬಗ್ಗೆ 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ: ಸಮಗ್ರ ಅಧ್ಯಯನ' ಮತ್ತು 'ದಲಿತ ಬಂಡಾಯ ಸಾಹಿತ್ಯ: ಸಿದ್ಧಾಂತದ ನೆಲೆಗಳು' ಎಂಬ ನನ್ನ ಎರಡು ಸಂಶೋಧನ ಸಂಪುಟಗಳಲ್ಲಿ ಸಂಬಂಧಪಟ್ಟ ಅಧ್ಯಾಯಗಳನ್ನು ಆಸಕ್ತರು ಪರಿಶೀಲಿಸಬಹುದಾಗಿದೆ.

ಭರತಖಂಡದ ಅನೇಕ ಭಾಗಗಳನ್ನು ಆಳಿದ ಮುಸ್ಲಿಂ ಸಾಮ್ರಾಟರ ಕಾಲದ ಒಂದು ಘಟ್ಟದ ನಂತರ, ಇನ್ನು ತಮ್ಮ ಜಾತೀಯ ಪಾರಮ್ಯ ಮುಸ್ಲಿಮರ ಮುಂದೆ ನಡೆಯುವುದಿಲ್ಲವೆಂದು ಮನಗಂಡನಂತರ, ಭಾರತವನ್ನು ಆಳಲು ವ್ಯಾಪಾರಿ ಬ್ರಿಟಿಷರನ್ನು ಬರಮಾಡಿಕೊಂಡ ಪ್ರಥಮಿಗರೇ ಬ್ರಾಹ್ಮಣರು. ಬ್ರಿಟಿಷರು ಕೂಡ ತಮ್ಮ ಆಡಳಿತದ ಅತ್ಯಂತ ಸಮೀಪಕ್ಕೆ ಬರಮಾಡಿಕೊಂಡದ್ದು ವಿದ್ಯಾವಂತರಾದ ಬ್ರಾಹ್ಮಣರನ್ನು ಮಾತ್ರ. ಶೂದ್ರರು ಮತ್ತು ಅಸ್ಪೃಶ್ಯರು ವಿದ್ಯಾವಂತರೆನಿಸುವ ಮಾತು ಹಾಗಿರಲಿ, ಆ ಕಾಲದಲ್ಲಿ ಅವರಿಗೆ ಶಿಕ್ಷಣ ಸ್ವಾತಂತ್ರ್ಯವೆಂಬುದೇ ಇರಲಿಲ್ಲವೆಂಬುದಕ್ಕೂ ಚರಿತ್ರೆಯ ಉದ್ದಕ್ಕೂ ಅಸಂಖ್ಯಾತ ನಿದರ್ಶನಗಳೇ ಇವೆ.

ಆದರೆ ಬ್ರಿಟಿಷರ ಆಡಳಿತದ ಒಂದು ಕಾಲದಲ್ಲಿ ಅಷ್ಟೊಂದು ಸಮೀಪವರ್ತಿಗಳಾಗಿದ್ದ ಬ್ರಾಹ್ಮಣರು ಇನ್ನೊಂದು ಕಾಲಘಟ್ಟದಲ್ಲಿ ಬ್ರಿಟಿಷರ ವಿರುದ್ಧ ಬಂಡಾಯದ ಸೂಚನೆಯನ್ನೇ ನೀಡಿದರು. ಇದಕ್ಕೆ ಕಾರಣವೇನು ? ಸದ್ಯಕ್ಕೆ ಚರಿತ್ರೆಯಿಂದ ಎರಡು ನಿದರ್ಶನಗಳನ್ನು ಇಲ್ಲಿ ಉದ್ಧರಿಸಬಹುದಾಗಿದೆ. ಮೊದಲನೆಯದಾಗಿ, ಮೃತನಾದ ಗಂಡನ ಚಿತೆಯ ಮೇಲೆ ಆತನ ಪತ್ನಿಯನ್ನು ಜೀವಂತವಾಗಿ ದಹನ ಮಾಡುತ್ತಿದ್ದ ಅಮಾನುಷ 'ಸತಿ ಪದ್ಧತಿ'ಯನ್ನು ಪ್ರಪ್ರಥಮವಾಗಿ ನಿಷೇಧಿಸಿದವರೇ ಬ್ರಿಟಿಷರು. ಹಾಗೆಯೇ, ಬ್ರಿಟಿಷರು ಅಸ್ಪೃಶ್ಯರನ್ನು ತಮ್ಮ ಸೈನ್ಯಕ್ಕೆ ನೇಮಕ ಮಾಡಿಕೊಳ್ಳ ತೊಡಗಿದ್ದನ್ನು, ಆ ಕಾಲದ ಭೈರಪ್ಪನವರ ಜಾತಿಯ ಜನ ಅಖಂಡವಾಗಿ ವಿರೋಧಿಸಿದ್ದರು. ಬಾಲಗಂಗಾಧರ ತಿಲಕ್‌ರವರಂತೂ, ಡಾ|| ಭೈರಪ್ಪನವರಿಗಿಂತಲೂ ತೀವ್ರ ಆಕ್ರೋಶದಿಂದಲೇ ''ಬ್ರಿಟಿಷರು ನಮ್ಮ ಧರ್ಮದ ಆಂತರಿಕ ವಿಷಯಗಳಲ್ಲಿ ಹಸ್ತಕ್ಷೇಪ ಮಾಡುತ್ತಿದ್ದಾರೆ, ಇದನ್ನು ನಾವು ಎಂದಿಗೂ ಸಹಿಸುವುದಿಲ್ಲ'' ಎಂದು ಅಬ್ಬರಿಸಿದರು. ಈ ನಿದರ್ಶನಕ್ಕೆ ಅಂಬೇಡ್ಕರರ ಸಂಶೋಧನೆಗಳಲ್ಲಿ ಬೇಕಾದಷ್ಟು ಅಧಿಕೃತ ದಾಖಲೆಗಳನ್ನು ಕಾಣಬಹುದಾಗಿದೆ.

ಇನ್ನು ಮೆಕಾಲೆ ಶಿಕ್ಷಣ ನೀತಿ: ಹಲವಾರು ಚಾರಿತ್ರಿಕ ಮಾಹಿತಿಗಳನ್ನು ಒಂದೇ ಒಂದು ಸರಳ ರೂಪಕದಲ್ಲಿ ವ್ಯಕ್ತಪಡಿಸಬಹುದಾಗಿದೆ. ಆ ಕಾಲದಲ್ಲಿ ಮೆಕಾಲೆಯ ಸಾರ್ವಜನಿಕ ಶಿಕ್ಷಣ ನೀತಿ ಜಾರಿ ಆಗದೆ ಹೋಗಿದ್ದ ಪಕ್ಷದಲ್ಲಿ, ಒಬ್ಬನೇ ಒಬ್ಬ ಅಂಬೇಡ್ಕರ್ ಈ ದೇಶದಲ್ಲಿ ತಲೆಯೆತ್ತಲು ಸಾಧ್ಯವಿರಲಿಲ್ಲ. ಒಬ್ಬನೇ ಒಬ್ಬ ಕುವೆಂಪು ಈ ನಾಡಿನಲ್ಲಿ ವಿದ್ಯಾವಂತನಾಗಲು ಸಾಧ್ಯವಿರಲಿಲ್ಲ. ಅಂದರೆ, ಅಸ್ಪೃಶ್ಯರು ಮತ್ತು ಶೂದ್ರರು ಉನ್ನತ ಶಿಕ್ಷಣ ಪಡೆಯುವುದನ್ನು ಡಾ|| ಭೈರಪ್ಪನವರ ಜಾತಿಯವರು ಎಂದೂ ಸಹಿಸಲು ಸಾಧ್ಯವಿರಲಿಲ್ಲ. ಆದರೆ, ಹಾಗೆಂದು ಅವರು ಬಹಿರಂಗವಾಗಿ ಹೇಳುವಂತೆಯೂ ಇರಲಿಲ್ಲ. ಹಾಗಾದರೆ ಅದಕ್ಕಾಗಿ ಅವರು ಕಂಡುಕೊಂಡ ಪರ್ಯಾಯ ಮಾರ್ಗವೇನು ? ಅವರು ಕಂಡುಕೊಂಡ ಪರ್ಯಾಯ ಮಾರ್ಗವೇ, ಮೆಕಾಲೆ ಶಿಕ್ಷಣ ನೀತಿಯನ್ನು ವಿಧವಿಧವಾಗಿ ವ್ಯವಸ್ಥಿತವಾಗಿ ಗೇಲಿ ಮಾಡುವುದು, ಪರಿಪರಿಯಾಗಿ ಟೀಕಿಸುವುದು ಮತ್ತು ಸಾಕಷ್ಟು ಕನಿಷ್ಠವಾದ ಮಾತುಗಳಲ್ಲಿ ನಿಂದಿಸುವುದು.

ಸ್ವಾತಂತ್ರ್ಯಪೂರ್ವ ಯುಗದಲ್ಲಿ ಪೋರ್ಚುಗೀಸರು ಮತ್ತು ಬ್ರಿಟಿಷರು ಅಮಾನುಷ ಹಿಂಸೆ ಮತ್ತು ದೌರ್ಜನ್ಯಗಳಿಂದ ವೈದಿಕರನ್ನು ಮತಾಂತರ ಮಾಡಿದರು ಎಂಬುದಾಗಿ ಬರೆಯುತ್ತಾರೆ. ಆದರೆ, ಯಾವ ಯಾವ ಜಾತಿಯವರನ್ನು ಹಾಗೆ ಮತಾಂತರ ಮಾಡಲಾಯಿತು ? ಅದರಲ್ಲಿ ಬಲವಂತದ ಮತಾಂತರದಂತೆಯೇ ಸ್ವಯಂಪ್ರೇರಿತ ಮತಾಂತರವೂ ನಡೆದಿರುವುದರಲ್ಲಿ ಸಂದೇಹವೇನೂ ಇಲ್ಲ. ವೈದಿಕ ಧರ್ಮದಲ್ಲಿನ ಜಾತೀಯ ಅಪಮಾನ ಮತ್ತು ಅಸ್ಪೃಶ್ಯತೆಯ ಘನಘೋರ ಹಿಂಸೆಗಳು, ಕ್ರೈಸ್ತ ಮತ್ತು ಇಸ್ಲಾಂ ಧರ್ಮಕ್ಕೆ ಮತಾಂತರದ ಹಿಂದಿನ ಶಾಶ್ವತ ಪ್ರೇರಣೆಯೆ ಆಗಿದೆಯಲ್ಲ! ಅದನ್ನೆಂದೂ ಮರೆಯುವಂತೆಯೂ ಇಲ್ಲ, ಡಾ|| ಭೈರಪ್ಪನವರು ಅದನ್ನು ಮರೆಮಾಚುವುದು ಸಾಧ್ಯವೂ ಇಲ್ಲ.

ದೇಶಾದ್ಯಂತ ನಡೆದಿದೆ ಎನ್ನಲಾದ ಮತಾಂತರದ ಹಿಂದೆ ಸೋನಿಯಾ ಗಾಂಧಿಯವರ ಕೈವಾಡವಿದೆ ಎಂತಲೂ ಗಂಭೀರ ಆರೋಪವನ್ನೇ ಮಾಡಿದ್ದಾರೆ. ಆದರೆ, ಸೋನಿಯಾ ಗಾಂಧಿಯವರು ಎಲ್ಲಿ ಮತ್ತು ಯಾವಾಗ ಹೀಗೆ ಮತಾಂತರದ ಹಿಂದೆ ತಮ್ಮ ಕೈವಾಡವನ್ನು ನಡೆಸಿದ್ದಾರೆ ? ಸೋನಿಯಾ ಗಾಂಧಿ ಮತ್ತು ಅಂಬಿಕಾ ಸೋನಿಯವರ ಬಗೆಗೆ ಬರೆಯುವಾಗ, ಅವರನ್ನು, ''ಅವಳು'' ''ಇವಳು'' ''ಆಕೆ'' ''ಈಕೆ'' ಎಂದು ಸಂಬೋಧಿಸುತ್ತಾರೆ. ಮೊದಲನೆಯದಾಗಿ, ಸೋನಿಯಾ ಗಾಂಧಿಯವರನ್ನು ಯಾರೂ ಟೀಕೆ ಮಾಡಬಾರದೆಂದು ಯಾರೂ ಹೇಳಬೇಕಾಗಿಲ್ಲ. ಆದರೆ, ಅದಕ್ಕಿಂತಲೂ ಮುಖ್ಯವಾಗಿ ಅವರ ಬಗೆಗೆ ಬರೆಯುವಾಗ ಡಾ|| ಭೈರಪ್ಪನವರು ಬಳಸುವ ಇಷ್ಟು ಕೀಳುಮಟ್ಟದ ಪದಗಳು ನಾಗರಿಕ ಘನತೆಯೂ ಅಲ್ಲ, ಭಾಷಾಸಂಸ್ಕೃತಿಯಂತೂ ಅಲ್ಲವೇ ಅಲ್ಲ. ಅಷ್ಟೇ ಅಲ್ಲದೆ, ಯಾರೇ ಒಪ್ಪಲಿ ಒಪ್ಪದಿರಲಿ, ಸೋನಿಯಾ ಗಾಂಧಿಯವರು ನಮ್ಮ ಸಮಕಾಲೀನ ರಾಷ್ಟ್ರೀಯ ರಾಜಕಾರಣದ ಮುಂಚೂಣಿಯಲ್ಲಿರುವ ನಾಯಕಿ ಮತ್ತು ಮಹಿಳೆ; ಕೇಂದ್ರ ಸರ್ಕಾರದ ಯುಪಿಎ ಅಧ್ಯಕ್ಷೆ ಮತ್ತು ಎಐಸಿಸಿ ಅಧ್ಯಕ್ಷೆ ಎಂಬುದನ್ನು ಮರೆಯದಿರಬೇಕು. ಒಂದು ವೇಳೆ, ಸ್ವತಃ ಡಾ|| ಭೈರಪ್ಪನವರ ಬ್ರಾಹ್ಮಣ ಜಾತಿಯವರೇ ಆದಂಥ ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಮತ್ತು ಪೇಜಾವರ ಮಠಾಧೀಶರ ಬಗೆಗೆ ನಾನು ಬರೆಯುವಾಗ, ನಾನೂ ಕೂಡ, ''ಅವನು'' ''ಇವನು'' ''ಆತ'' ''ಈತ'' ಎಂಬುದಾಗಿ ಸಂಬೋಧಿಸಿದ್ದೇ ಆದರೆ, ಏನಾಗಬಹುದು ? ಏನೂ ಆಗುವುದಿಲ್ಲ. ಬದಲಾಗಿ, ಅದರಿಂದ ಕೀಳುಮಟ್ಟದ ವ್ಯಕ್ತಿಸಂಸ್ಕೃತಿಯ ಅನಾವರಣವಾಗುತ್ತದೆ, ಅಷ್ಟೇ. ಆದರೆ, ಅಂತಹ ಸಂಸ್ಕೃತಿ ಡಾ|| ಭೈರಪ್ಪನವರಿಗೇ ಇರಲಿ, ನನಗೆ ಬೇಡ.

ಅಷ್ಟೇ ಅಲ್ಲದೆ, ಮತಾಂತರ ತಪ್ಪು ಎಂಬುದಾಗಿ ಸುಪ್ರೀಂ ಕೋರ್ಟ್ ಕೂಡ ಹೇಳಿದೆ ಎಂತಲೂ ಡಾ|| ಭೈರಪ್ಪನವರು ಹೇಳಿದ್ದಾರೆ. ಆದರೆ, ಸುಪ್ರೀಂ ಕೋರ್ಟ್ ಈ ಮಾತನ್ನು ಹೇಳಿರುವುದು ಯಾವ ಜಡ್ಜ್‌ಮೆಂಟ್‌ನಲ್ಲಿ? ಆ ಸಂಬಂಧವಾದ ದಾಖಲೆ ಎಲ್ಲಿ? ಆ ಮೊಕದ್ದಮೆಯ ಹೆಸರೇನು ? 'ಆಲ್ ಇಂಡಿಯಾ ರಿಪೋರ್ಟರ್'ನ ಯಾವ ಸಂಪುಟದಲ್ಲಿ ಡಾ|| ಭೈರಪ್ಪನವರು ಉದ್ಧರಿಸಿರುವ ಮತಾಂತರವನ್ನು ಕುರಿತ ಸುಪ್ರೀಂ ಕೋರ್ಟ್‌ನ ಆ ತೀರ್ಪು ದಾಖಲಾಗಿದೆ ?

ಮತಾಂತರದಲ್ಲಿ ತೊಡಗಿದ್ದ ಕ್ರಿಸ್ತ ಮಿಷನರಿಗಳು ವೈದಿಕ ಗುಡಿಗುಂಡಾರಗಳನ್ನೆಲ್ಲಾ ನಾಶಪಡಿಸಿದರು ಎಂಬ ಬಗೆಗೆ ಅಪಾರ ವಿವರಗಳನ್ನೇ ನೀಡುತ್ತ ನಡೆಯುವ ಡಾ|| ಭೈರಪ್ಪನವರು, ಆ ಬಗೆಗೆ ತಮ್ಮ ಜಾತಿಯವರೇ ಆದ ಅರುಣ್ ಶೌರಿಯನ್ನು

(೪೪ನೇ ಪುಟ ನೋಡಿ)

# ಜಾನಪದವನ್ನು ಹಾಸುಂಡ ಸಂಗಣ್ಣ



*ಹೊಸಪೇಟೆಯ ಆಕಾಶವಾಣಿ ನಿಲಯ ನಿರ್ದೇಶಕ ಶ್ರೀ ಆನಂದ ಪಾಟೀಲ,*
*ಸಂದರ್ಶಕ ಡಾ|| ಮೃತ್ಯುಂಜಯ ರುಮಾಲೆಯವರೊಂದಿಗೆ ಶ್ರೀ ಮುದೇನೂರ ಸಂಗಣ್ಣನವರು*

**ಜುಲೈ ೮, ೨೦೦೫ರಂದು ಮುದೇನೂರ ಸಂಗಣ್ಣನವರ ಚಿಗಟೇರಿಯ ಮನೆಯಲ್ಲಿ ಅವರೊಡನೆ ಹೊಸಪೇಟೆ ಆಕಾಶ ವಾಣಿಯ ಗ್ರಂಥಾಲಯದ ಸಂಗ್ರಹಕ್ಕಾಗಿ ಸುಮಾರು ಎಂಟು ತಾಸುಗಳ ಸುದೀರ್ಘ ಸಂದರ್ಶನ ನಡೆಸಿ ಅವರ ಜಾನಪದ ಆಸಕ್ತಿ, ಅಧ್ಯಯನಗಳನ್ನು ಚಿಂತನೆಗಳನ್ನು ಮಾತ್ರ ಆಯ್ಕೆಮಾಡಿಕೊಂಡು ಬರೆದ ಗೌರವ ಸೂಚಕ ಲೇಖನವಿದು.**

ಸಾಧ್ಯವಾದರೆ ಜಗತ್ತಿನಲ್ಲಿ ಬೇರೇನಾಗಲು ನೀವು ಬಯಸುತ್ತೀರಿ, ಎಂಬ ಪ್ರಶ್ನೆಗೆ, ''ಜಾನಪದ ಸಾಹಿತ್ಯ ಸಂಸ್ಕೃತಿಗಳ ಕಿಂಕರ'' ಎಂದೂ; ನಿಮ್ಮ ಬದುಕಿನ ಅತ್ಯಂತ ಸಂತಸದ ಕ್ಷಣ ಯಾವುದು, ಎಂಬ ಪ್ರಶ್ನೆಗೆ, ''ಜಾನಪದ ಸಾಹಿತ್ಯ, ಕಲೆಗಳು ವಿಶ್ವವಿದ್ಯಾಲಯದಲ್ಲಿ ಅಧ್ಯಯನದ ಸ್ಥಾನ ಪಡೆದದ್ದು'' ಎಂದೂ; ಹಳ್ಳಿಯ ಬದುಕು ನಿಮ್ಮ ಸಾಹಿತ್ಯಕ ಕೃಷಿಗೇನಾದರೂ ಕೊರತೆ ಅಥವಾ ಮಿತಿ ಒಡ್ಡಿದಿಯೇ, ಎಂಬ ಪ್ರಶ್ನೆಗೆ, ''ಒಡ್ಡಿಲ್ಲ; ಸಾಹಿತ್ಯ ಕೃಷಿಗೆ ಬೇಕಾದ ವೈವಿಧ್ಯಮಯ ವಸ್ತು ದ್ರವ್ಯವನ್ನೆಲ್ಲಾ ಒದಗಿಸುವ ಗಂಗೋತ್ರಿ ಅದು'' ಎಂದೂ ಉತ್ತರಿಸಿದ್ದರು ಮುದೇನೂರ ಸಂಗಣ್ಣನವರು. ವಾಸ್ತವವಾಗಿ ಈ ಮೂರು ಪ್ರಶ್ನೆಗಳೂ ಮತ್ತು ಮೂರು ಉತ್ತರಗಳೂ ಒಂದೇ ಅರ್ಥದ ಹಾಗೂ ಒಂದೇ ಆಶಯದವುಗಳೇ ಆಗಿವೆ.

ಸಂಗಣ್ಣನವರಿಗೆ ಜಾನಪದವೆಂದರೆ ತಾದಾತ್ಮ್ಯ, ಕ್ರಿಯಾಶೀಲತೆ, ಜೀವನ ಪ್ರೀತಿ, ಜೀವನಾನುಭವ, ನಿಸ್ಪೃಹ, ಅಭಿನ್ನ ಪ್ರತಿಭೆಗಳು ತುಂಬಿದ ಬದುಕುಗಳ ಹಾಗೂ ಸಂಸ್ಕೃತಿಯೊಂದಿಗೆ ನೇರ ಒಪ್ಪಂದ ಮಾಡಿಕೊಂಡ ಜೀವನ ವಿಧಾನ. ಅಂಥವುಗಳ ಮೊತ್ತವಾಗಿರುವ ಶ್ರದ್ಧೆಯ ಸಮಾಜದ ವ್ಯಾಖ್ಯಾನವೆಂದೇ! ಸಂಗಣ್ಣನವರೇ ಸಂಪಾದಿಸಿರುವ 'ಗೊಂದಲಿಗರ ದೇವೇಂದ್ರಪ್ಪನ ಆಟಗಳು' ಎಂಬ ಕೃತಿ ದೇವೇಂದ್ರಪ್ಪನ ಪ್ರತಿಭೆಯು ಹೀಗೆ ಹೇಳುವ ಇಂಥ ಬದುಕಿನ ಕೆಲವು ಅಂಶಗಳ ವ್ಯಾಖ್ಯಾನವಾಗಿದೆ. ಸ್ಥಿತ್ಯಂತರಗೊಳ್ಳುವ ಕಾಲದೊಂದಿಗೆ ಮುಖಾಮುಖಿಯಾಗುತ್ತಿದ್ದಂತೆಯೇ ಜಾನಪದ ಕಲೆಗಳು ಬದಲಾಗುತ್ತಿದ್ದರೂ ದೇವೇಂದ್ರಪ್ಪನಂಥ ಒಬ್ಬ ಕಲಾನಿಷ್ಠ ಬದುಕಿನ ಜೀವನಾನುಭವ ನಿಷ್ಠೆ ತೋರಿಸುತ್ತಿರುವುದನ್ನು ಸಂಗಣ್ಣನವರು ಗುರುತಿಸಿದ್ದರು. ೬೬ ಪುಟಗಳ ಪೀಠಿಕೆಯಲ್ಲಿ, ಗೊಂದಲಿಗರದು ''ಕತೆಯಲ್ಲ ಆಟ'' ಎಂದು ತೋರಿಸುವ ಮತ್ತು ಒಂದು ಜಾನಪದ ಕಲೆ – ಭಾಷೆ, ಪ್ರದೇಶ, ಜನಾಂಗ, ಧರ್ಮ,ಇತ್ಯಾದಿಗಳನ್ನು ಮೀರಿ ಬದುಕನ್ನು ಕಲಾತ್ಮಕವಾಗಿ ಕಾಣುವ ಹಿನ್ನೆಲೆಯಲ್ಲಿ ದುಡಿಯುತ್ತದೆ ಎಂಬುದನ್ನು ಪ್ರಮೇಯಾತ್ಮಕ ವಿಶ್ಲೇಷಣೆಯ ಮೂಲಕ ತಿಳಿಸುತ್ತಾರೆ. 'ಗೊಂದಲಿಗರ ಕಥೆ' ನಿಜಾರ್ಥದಲ್ಲಿ ಅದು ಕತೆಯಲ್ಲ, ಆಟ ಎಂದು ಮನನ ಮಾಡುವಾಗ ಅವರು ಈ ಕಲಾಪ್ರಕಾರಕ್ಕಿರುವ ''ವಾಕ್ಸಂಪ್ರದಾಯ, ಕಥೆಯ ಕತೆ, ಕಥಾಕೀರ್ತನ, ಪೌರಾಣಿಕ - ಕಾಲ್ಪನಿಕ ಕಥಾ ಸಂಬಂಧ, ಗದ್ಯಪದ್ಯ ಕಥನಗಳು, ಗೊಂದಲಿಗರ ಕಲ್ಪನಾವಿಲಾಸ, ಗೊಂದಲಿಗರು, ಕಿನ್ನರಿ-ಗೊಂದಲಿ ಜೋಗಿಗಳು, ಗೊಂದಲಿ - ಕರ್ನಾಟಕದಲ್ಲಿ, ಬೆಳಗಾವಿ ವಿಭಾಗದಲ್ಲಿ, ಕರಾವಳಿ ಭಾಗದಲ್ಲಿ ಹೈದರಾಬಾದ್ ಕರ್ನಾಟಕದಲ್ಲಿ, ಆಂಧ್ರ ಪ್ರದೇಶದಲ್ಲಿ, ಕರ್ನಾಟಕ-ಮಹಾರಾಷ್ಟ್ರ ಸಂಬಂಧ, ಭಾಷಾ ಬಾಂಧವ್ಯ ಗೊಂದಲ - ಮಹಾರಾಷ್ಟ್ರ ಕಥೆಯಲ್ಲಿ ಆಟ ರಂಗಸ್ಥಳ ಕಥೋದ್ದೇಶ, ಕಥಾ ಬಾಂಧವ್ಯಗಳು, ಕಥಾವಸ್ತುಗಳ ಹೆಸರು, ಇವನ್ನು ಬಳಸಿಕೊಳ್ಳುವ ವಿವಿಧ ಕಲಾವಿದರು, ಕಿನ್ನರಿ ಜೋಗಿಗಳು - ಗೊಂದಲಿಗರು...'' ಹೀಗೆ ಸಂಗಣ್ಣನವರು ನೀಡುವ ಐವತ್ತೆರಡು ಉಪಶೀರ್ಷಿಕೆಗಳು ಅಧ್ಯಯನದ ಆಳ, ಗ್ರಹಿಕೆಯ ಸ್ಪಷ್ಟತೆಯನ್ನೂ ಹೇಳುತ್ತದೆ.

ದೇವೇಂದ್ರಪ್ಪ ಕಲೆಯೊಂದಿಗೇ ಬದುಕು ಸಾಗಿಸುತ್ತಿರುವುದರಿಂದ ಆತನಿಗೆ ಕಲಾನಿಷ್ಠ ಬದುಕು ಮುಖ್ಯವಾಗುತ್ತಿದೆಯೇ ವಿನಾ ವ್ಯವಹೃತವಾದ ಅಥವಾ ಉಪಜೀವನಕ್ಕಾಗಿ ಬದಲು ಮಾಡಬೇಕಾದ ಹಾಗೂ ಕಲೆಯನ್ನು ಒಂದೆ ಸೇರಿಸಿ ಬದುಕನ್ನು ಜಡವಾಗಿ ಲೌಕಿಕಗೊಳಿಸುವ ಬದುಕಿನ ವಿಧಾನ ಮುಖ್ಯವಾಗುವುದಿಲ್ಲ. ಹೀಗಾಗಿ ದೇವೇಂದ್ರಪ್ಪನ ವಿಷಯದಲ್ಲಿ ಅಥವಾ ಜೀವನ ಪ್ರೀತಿಯ, ಜೀವನಿಷ್ಠೆಯ ದೇವೇಂದ್ರಪ್ಪನಂಥವರ ವಿಷಯದಲ್ಲಿ ''ಕಲೆ ಎಂಬುದು ಬದುಕಿನ ಉಪಜೀವನಕ್ಕೆ ದಾರಿಯಾಗುತ್ತದೆ, ಬದುಕಿನ ಒಂದು ವ್ಯಾವಹಾರಿಕ ಮಾಧ್ಯಮವಾಗುತ್ತದೆ'' – ಎಂಬ ಸೂತ್ರ ಅನ್ವಯವಾಗುವುದಿಲ್ಲ. ಸಂಗಣ್ಣನವರೇ ಹೇಳುವಂತೆ, ಗೊಂದಲಿಗರ ದೇವೇಂದ್ರಪ್ಪನ ಹಾಡು-ಆಟವಾಗಲೀ, ಕಲೆಯಾಗಲೀ ಸತ್ತುಹೋಗಿದ್ದು ದೇವೇಂದ್ರಪ್ಪನ ಸಾವಿನಿಂದಲೇ! ಕಲಾನಿಷ್ಠ ಕಲಾವಿದನಾಗಿ ದೇವೇಂದ್ರಪ್ಪ ಒಬ್ಬ ನಿಜವಾದ ಪೂರ್ಣಪ್ರಮಾಣದ ಜೀವನಾನು ಭವದ ಸಮಾಜಜೀವಿಯಾಗಿ ಸಂಗಣ್ಣನವರಿಗೆ ಕಂಡಿದ್ದು ಇಲ್ಲಿ ವಿಶೇಷ! ಏಕಕಾಲದಲ್ಲಿ ದೇವೇಂದ್ರಪ್ಪನ ಜಾನಪದ ನಿಯತ್ತೂ ಸಂಗಣ್ಣನವರ ಜಾನಪದ ಆಸಕ್ತಿಗಳೂ ನಮಗೆ ಮುಖ್ಯವಾಗುತ್ತವೆ. ವಿಪರ್ಯಾಸವೆಂದರೆ, ದೇವೇಂದ್ರಪ್ಪ ಬದುಕು ಕೇಂದ್ರಿತವಾದ ದೃಷ್ಟಿಯುಳ್ಳವನಾಗಿದ್ದರೂ ಕಲೆ ಆತನ ಈ ದೃಷ್ಟಿಯಲ್ಲಿ ಬೆಸೆದುಕೊಂಡಿತ್ತು. ಆತನಿಗೆ ''ಬದುಕುವುದೆಂದರೆ ಕಲೆಯನ್ನು ಹೊರತುಪಡಿಸಿ ಅಥವಾ ಬದುಕಿನ ತಾದಾತ್ಮ್ಯವನ್ನು ಹೊರತುಪಡಿಸಿ ಜೀವನ ಸಾಗಿಸುವುದು ಕೂಡದು'' ಎಂಬಂಥ ಹೊಂದಾಣಿಕೆಯುಳ್ಳದ್ದಾಗಿದೆ. ಆತನ ಮಕ್ಕಳಿಗೆ ಆ ಕಾಲೀನ ಬದುಕು ಮುಖ್ಯವಾಗಿ ಸಾಮಾಜಿಕ ವಿದ್ಯಮಾನದೊಂದಿಗೆ ತಮ್ಮನ್ನೂ ಗುರುತಿಸಿಕೊಂಡಿದ್ದರಿಂದ ಕಲೆ ಅವರ ಬದುಕಿನ ನೇಪಥ್ಯಕ್ಕೆ ಸೇರಿಸಿಕೊಂಡಿತು ಎಂಬುದು ಗಮನಾರ್ಹ. ದೇವೇಂದ್ರಪ್ಪ ಬದಲಾಗುತ್ತಿರುವ ಹಂತಹಂತದ ಸಾಮಾಜಿಕ ಬದುಕಿಗೆ ಸ್ಪಂದಿಸುತ್ತಿದ್ದನಾದರೂ ಆತನಿಗೆ ಮಣ್ಣಿನ ಗುಣವನ್ನು ಬಿಟ್ಟು ಬದುಕುವುದು ಯಾವತ್ತೂ ಸಾಧ್ಯವಾಗಲಿಲ್ಲ. ಅಂದರೆ ಸಂಗಣ್ಣನವರ ಪ್ರಕಾರ ಕಾಲ, ಭಾಷೆ, ವಿದ್ಯಮಾನಗಳ ಬದುಕಿದರೂ ಜೀವನಾನುಭವದ ಬದುಕಿಗೆ ಬೆಲೆಕೊಟ್ಟು ದೇವೇಂದ್ರಪ್ಪನು ಜಾನಪದ ಎಂಬ ಒಂದು ಶೈಕ್ಷಣಿಕ ಅಧ್ಯಯನದ ವಿಷಯವಾಗಿ ಅದನ್ನು ಜೋಪಾನವಾಗಿಟ್ಟ ಒಬ್ಬ ವಾರಸುದಾರನಂತೇ ಗೋಚರವಾಗುತ್ತಾನೆ.

ಗೊಂದಲಿಗರ ದೇವೇಂದ್ರಪ್ಪನ ಅದ್ಭುತ ಪ್ರತಿಭೆಯನ್ನು ಶಿವರಾಮ ಕಾರಂತರೂ ಮೆಚ್ಚಿಕೊಂಡಿದ್ದರೆಂಬುದು ಆತನಿಗೆ ಸಂಗಣ್ಣನವರು ಕೊಡುವ ಪ್ರಶಸ್ತಿ!

ಕಲೆಯನ್ನು ಬದುಕಿನ ಒಂದು ಅವಿಭಾಜ್ಯಭಾಗವಾಗಿ

**ಡಾ|| ಮೃತ್ಯುಂಜಯ ರುಮಾಲೆ**

ಪರಿಗಣಿಸಿದ್ದ ಸಂಗಣ್ಣನವರಿಗೆ ಬದಲಾಗುತ್ತಿರುವ ಕಾಲಮಾನವು ಕಲಾಹೀನ ಮತ್ತು ಕಲಾರಹಿತವಾದ ಬದುಕಿಗೆ ಎಡೆಮಾಡಿ ಕೊಡುತ್ತದೆ ಎಂದು ಬೇಸರವಿತ್ತು. ಅಂದರೆ ಕಲೆ ಅದು ರೇಖೆ ರೇಖೆ ಕೂಡಿಸಿ ಬರೆಯುವ ರಂಗೋಲಿ ಇರಬಹುದು; ಪ್ರತಿಭಾ ಪೂರ್ವಕವಾದ ಮಾತುಗಾರಿಕೆಯಾಗಿರಬಹುದು; ವಿಶಾಲಗ್ರಹಿಕೆಯ ದೃಷ್ಟಿಕೋನವಾಗಿರಬಹುದು; ನಮ್ಮ ಪೂರ್ವಜರಿಗೆ ಅರ್ಥವತ್ತಾದ ಸಾತ್ವಿಕವಾದ ಬದುಕನ್ನು ಬದುಕಲು ಸಾಧ್ಯವಾಗಿದ್ದು ಯಾವ ಹಿನ್ನೆಲೆಯಿಂದ ? ನಿರಾಡಂಬರವಾದ, ವ್ಯಾಮೋಹ ಇಲ್ಲದ, ವೈಚಾರಿಕತೆ, ಜೀವನ ಶ್ರದ್ಧೆಗಳನ್ನು ತಮ್ಮ ನಿರಂತರ ದುಡಿಮೆಗೆ ತಂದುಕೊಂಡಿದ್ದು ಯಾವ ಹಿನ್ನೆಲೆಯಿಂದ ?! ಈ ಪ್ರಶ್ನೆಯೇ ಸಂಗಣ್ಣನವರಿಗೆ ಏಕಕಾಲದಲ್ಲಿ ಪ್ರಗತಿಶೀಲವಾಗಿ ಚಿಂತಿಸಲು ಜಾನಪದವನ್ನು ಒಂದು ತುಂಬು ಬದುಕಿನ ನೆಲೆಯ ಸೃಷ್ಟಿ ಎಂದು ಪರಿಭಾವಿಸಲು ಎಡೆಮಾಡಿಕೊಟ್ಟಿತು. ಈ ಹಿನ್ನೆಲೆಯಲ್ಲಿ 'ರಂಗೋಲಿ' ಮನೆಯ ಮುಂದಿನ ಅಂಗಳದಲ್ಲಿ ಬರೆಯದೇ ಹೋದ ಕಾಲವೈಪರೀತ್ಯವನ್ನು ಕಂಡು ಪಡುವ ಬೇಸರ ಅವರಿಗೆ ಸೂಕ್ಷ್ಮಮನಸ್ಸನ್ನು ತೋರಿಸುವುದರ ಜೊತೆಗೇ ನೇತ್ಯಾತ್ಮಕ ರೀತಿಯಲ್ಲಿ ಬದಲಾವಣೆಯಾಗುತ್ತಿರುವುದರ ಬಗ್ಗೆ ಸಾತ್ವಿಕವಾದ ಸಿಟ್ಟೂ ಇದೆ.

* * *

ಜನಪದರು ತಮ್ಮದು ಬದುಕಿಗೆ ಅಭಿಮುಖಗೊಂಡ ಜಾನಪದವೆಂಬ ಸೃಜನಾತ್ಮಕ ಸೃಷ್ಟಿಶೀಲ ಪ್ರತಿಕ್ರಿಯೆ ಎಂದು ಗೊತ್ತಾಗದಂಥ ತಾದಾತ್ಮ್ಯವನ್ನು ತಮ್ಮ ಬದುಕಿನ ಒಂದು ಉಪ ಉತ್ಪಾದನೆಯೆಂಬಂತೇ ಹೊಂದಿರುವುದರಿಂದ ಮತ್ತು ಜೀವನಾನುಭವದ ಒಂದು ಉತ್ಪನ್ನದಂತೆ ಅದನ್ನು ಕಂಡುಕೊಂಡಿರುವುದರಿಂದ ಅದರ ಸೊಗಸು ಅವರ ಬದುಕಿನಿಂದ ಹೊರತಾದುದಲ್ಲ! ಆದರೆ ಸಂಗಣ್ಣನಂಥ ಜಾನಪದ ತಜ್ಞರಿಗೆ ಪೂರ್ಣ ಪ್ರಮಾಣದಲ್ಲಿ ಅದನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಸಂಗಣ್ಣನವರು ಜಾನಪದ ಕ್ಷೇತ್ರ ಕುತೂಹಲಿಗಳಾಗಿ, ಆಸಕ್ತಿಪರರಾಗಿ ಹೊರಗಿನಿಂದ ಪ್ರವೇಶಿಸಿದವರು. ತಮ್ಮನ್ನು ಜಾನಪದಕ್ಕೆ ತೊಡಗಿಸಿಕೊಂಡುದಕ್ಕೆ, ಅವರು ಕೊಡುವ ಕಾರಣಗಳು ಇವು : ತಮ್ಮ ಮನೆಯಲ್ಲಿದ್ದ ಎಂಟು ಜನ ಒಕ್ಕಲುತನದ ಆಳುಗಳು ಅಭಿನ್ನವೆಂಬಂತೆ 'ಒಂದು ಸುಪ್ತಪ್ರತಿಭೆ'ಯೊಂದಿಗೆ ದುಡಿಯುತ್ತಿದ್ದದ್ದು; ಹಿಂದುಳಿದ ವರ್ಗಗಳ ನಿವಾಸಗಳಿಗೆ ಅಂಟಿಕೊಂಡೇ ಇದ್ದ ಅವರ ಮನೆ, ಪರಿಸರ; ಬುಟ್ನೂರು ನಾಗಪ್ಪನೆಂಬ ಕಟ್ಟುಮಸ್ತಾದ ಆಳು ಕಾಳು ಬೀಸಿಕೊಂಡು ತನ್ನದೇ ಲಹರಿಯಲ್ಲಿ ಹಾಡುತ್ತಿದ್ದ ಬೀಸೋ ಪದ, ಇತ್ಯಾದಿ; ಹಂದಿಗನೂರಿನ ಸಿದ್ದಪ್ಪ, ರಾಮಪ್ಪ, ಅದೃಶ್ಯಪ್ಪ, ಬ್ಯಾಡಿಗಿ ಸಾವಿತ್ರವ್ವನಂಥ ಜನ್ಮತಃ ಕಲಾವಿದರು -ಹಾಡುಗಾರರು ಅವರೊಂದಿಗೆ ಇದ್ದ ಆಸಕ್ತಿ; ತಮ್ಮೂರಿಗೆ ನಿಯತಕಾಲಿಕವಾಗಿ ಬಂದು ಹೋಗುತ್ತಿದ್ದ ಆ ಕಾಲದ ಕಲಾವಿದರು; ಮೈಸೂರು ಸಂಸ್ಥಾನ ಮತ್ತು ಮದ್ರಾಸ್ ಪ್ರಾಂತದ ಅಂಚಿನಲ್ಲಿ ಹರಪನಹಳ್ಳಿ ತಾಲೂಕಿನ ಚಿಗಟೇರಿ ಗ್ರಾಮ ಇದ್ದುದರಿಂದ ಪಾರಸ್ಪರಿಕವಾಗಿದ್ದ ಸಾಂಸ್ಕೃತಿಕ ಕೊಳಕೊಡೆಯ ಪ್ರಭಾವ; ಜಾನಪದ ಅಭಿವ್ಯಕ್ತಿಯಲ್ಲಿದ್ದ ಸಹಜತೆ, ಅರ್ಥವಂತಿಕೆ, ವೈಚಾರಿಕತೆ, ಭಾವುಕತೆ ಮತ್ತು ವಿಶಿಷ್ಟ ಜೀವನಾನುಭವ – ಇವು ಸಂಗಣ್ಣನವರ ವ್ಯಕ್ತಿತ್ವಕ್ಕೆ ಜಾನಪದವನ್ನು ತುಂಬಿದ ಮೌಲ್ಯಗಳಾಗಿದ್ದವು.



*ಚಿಗಟೇರಿಯ ಸಂಗಣ್ಣನವರ ಮನೆಯ ಮುಂದೆ ಹೊಸಪೇಟೆಯ ಆಕಾಶವಾಣಿ ತಂಡ ಹಾಗೂ ಸಂದರ್ಶಕರೊಂದಿಗೆ ಮುದೇನೂರ ಸಂಗಣ್ಣ*

ಬಹುಶಃ ಈ ಪರಿಸರದ ಪ್ರೇರಣೆ ಸಂಗಣ್ಣನವರಿಗೆ ಇರದಿದ್ದರೆ ಅಥವಾ ಅವರ ಬದುಕಿನ ಧಾತುವೇ ಇಂಥ ಪರಿಸರದ ಮಧ್ಯೆಯೇ ಇರದಿದ್ದರೆ ಅವರ ಆಸಕ್ತಿ ಇಷ್ಟೊಂದು ಗಾಢವಾಗಿರುತ್ತಿತ್ತೆ ? !

ಜನ ಜಾನಪದದಲ್ಲಿ ಬದುಕುತ್ತಲೇ, ಕ್ರಮೇಣ ಅದನ್ನು ವಿಸ್ತರಿಸಲು, ಬೆಳೆಸಲು ವಯಸ್ಸು ಒಪ್ಪದಾದಾಗ, ಅಂದರೆ ಅದನ್ನು ದುಡಿಯಲು ಸ್ಥಿತಿಗತಿ ಒಪ್ಪದಾದಾಗ ಅದನ್ನ ದುಡಿಸಿಕೊಳ್ಳಲು 'ಮಾಸ್ತರ'ರಾಗುತ್ತಿದ್ದರು. ಮತ್ತೊಂದು ಪೀಳಿಗೆ ತಮ್ಮ ಮುಂದೆ ಬೆಳೆದುಬರುತ್ತಿದ್ದಂತೆಯೇ ಇವರು 'ನಿವೃತ್ತ'ರಾಗಿ 'ಮಾಸ್ತರ'ರಾಗಿ ಪರಿವರ್ತನೆಯಾಗುವುದು ಕಲೆಯನ್ನು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ರವಾನಿಸುವ ಕ್ರಿಯೆ ಎಂಬುದು ಸಂಗಣ್ಣನವರ ಗ್ರಹಿಕೆ. ಒಬ್ಬ ನಿವೃತ್ತ ಕಲಾವಿದ ತನ್ನ ನಂತರದ ಪೀಳಿಗೆಗೆ ಬದುಕಿನ ಪ್ರೀತಿಯನ್ನು ತುಂಬಿಸಲು ಅಥವಾ ತುಂಬಿಸುವ ಕಾರ್ಯವನ್ನು ಕರ್ತವ್ಯದಂತೆ ಮಾಡಲು ಅವನಿಗಿರುವ ಒಂದು ಪ್ರಮುಖ ದಾರಿಯೆಂದರೆ ಅವನು 'ಮಾಸ್ತರ'ನಾಗುವುದು. ಈ 'ಮಾಸ್ತರಿಕೆ' – ಅಶಾಸ್ತ್ರೀಯ, ಅಶೈಕ್ಷಣಿಕ ಪರಿಸರದಲ್ಲಿ ಬಂದಿದ್ದರೂ ತುಂಬು ಮನಸ್ಸಿನ ಹಾಗೂ ತುಂಬು ಉದ್ದೇಶದ ಅರ್ಹತೆಯಿಂದ ಬಂದಂತಹುದು ! ಇಂಥವರಿಗೆ ಕಲೆ ಮತ್ತು ವಿಶೇಷವಾಗಿ ಕಲಾನಿಷ್ಠ ಬದುಕು ಮುಖ್ಯವಾಗುತ್ತಿರುವದರಿಂದ ಅದು ಜಾತಿ, ಮತ, ಆಸ್ತಿ- ಅಂತಸ್ತುಗಳಂಥ ಲೌಕಿಕ ಮಾನದಂಡಗಳಿಗೆ ಅತೀತವಾಗಿರುತ್ತದೆ. 'ನಿನ್ನ ತತ್ತ್ವಪದಗಳಿಗೆ ನನ್ನ ಹೊಲಮನಿ ಬರೆದುಕೊಟ್ಟೇನು...' ಎಂದು ಒಬ್ಬ ಸಾಹುಕಾರ ಶರೀಫನಿಗೆ ಹೇಳುವಾಗ ಸಂಸ್ಕೃತಿ ಮತ್ತು ನಾಗರಿಕತೆಗಳು ಮುಖಾಮುಖಿಯಾಗಿ ಅನುಭವಿಸಿದ ಭಾವುಕತೆಯನ್ನು ಗಮನಿಸಬೇಕು.

* * *

ಸಂಗಣ್ಣನವರು ಕನ್ನಡ ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಮಾಡಿದ ಘಟಿಕೋತ್ಸವದ ಭಾಷಣ (೨೮-೧೨-೨೦೦೧) ಮುಖ್ಯವಾಗಿ ಜಾನಪದ ಕೇಂದ್ರಿತವಾಗಿಯೇ ಇತ್ತು. ''ನಮ್ಮ ಕನ್ನಡ ಸಾಹಿತ್ಯ ಸಂಸ್ಕೃತಿಗಳಿಗೆ ತಾಯಿಬೇರಾದ ಜಾನಪದ ಸಾಹಿತ್ಯ - ಕಲೆಗಳನ್ನು ಕುರಿತಂತೆ ನಾನು ತಳೆದಿರುವ ಸಕ್ರಿಯ ಆಸಕ್ತಿಯನ್ನೇ ಪ್ರೀತಿಯ ರನ್ನಗನ್ನಡಿಯಲ್ಲಿ ದೊಡ್ಡದಾಗಿ ಕಂಡು ಈ ಕನ್ನಡ ವಿಶ್ವವಿದ್ಯಾಲಯದ ಸಮಸ್ತರು ಒಮ್ಮನದಿಂದ ನನ್ನನ್ನು ಇಂದಿನ ಈ ನುಡಿಹಬ್ಬದಲ್ಲಿ ಮುಖ್ಯ ಭಾಷಣ ಮಾಡಲು ಬರಮಾಡಿಕೊಂಡಿದ್ದಾರೆ. ಅನಿರೀಕ್ಷಿತವಾಗಿ ಇವರು ನೀಡಿರುವ ಈ ಗೌರವ ನಮ್ಮ ಕನ್ನಡ ಜನಪದ ದೈವಕ್ಕೆ ಸಲ್ಲುತ್ತದೆ'' – ಸಂಸ್ಕೃತಿಯ ತಲಕಾವೇರಿಯನ್ನು 'ದೈವ'ವಾಗಿ ಕಾಣುವ ಅವರ ಈ ಪರಿಭಾವನೆ ಅತಿಭಾವುಕ ಸಾಪೇಕ್ಷಿತವೆನಿಸಿದರೂ ಅದು ವಾಸ್ತವಿಕವಾದುದೇ ಆಗಿದೆ. ಅವರು ಜಾನಪದರ ದೇಸೀಯತೆಯ ಬಗ್ಗೆ ಪಡುವ ಹೆಮ್ಮೆ ಹೀಗಿದೆ – ''ಸಾಂಘಿಕಗುಣದ ಜನಪದ ಕಲ್ಪನೆ ತುಂಬಾ ಪುರಾತನವಾದುದು. ರಾಜ್ಯ ರಾಜ ಪದ್ಧತಿಗೂ ಮೊದಲಿನದು. ಇಂದಿಗೂ ಈ ಘಟಕ ನಾಮ ಹಾಗೇ ಉಳಿದಿರುವುದೊಂದು ಅಚ್ಚರಿ. ನಮ್ಮ ದೇಸೀತನದ ತಾಯಿಬೇರಿರುವುದೇ ಜನಸಾಮಾನ್ಯರ ಜೀವನ ವಿಧಾನದಲ್ಲಿ. ಸ್ಥಳೀಯ, ಪ್ರಾದೇಶಿಕ, ಭೌಗೋಳಿಕ, ಪಾರಿಸರಿಕ ಪರಿಸ್ಥಿತಿಗಳನ್ನು ದೇಸಿ ಹೊಂದಿಕೊಂಡಿದೆ. ಜನಪದರ ಜೀವನ ವಿಧಾನದಲ್ಲಿ, ನಂಬುಗೆ, ಆಚರಣೆ ಸಾಮಾಜಿಕ ಸಂರಚನೆಗಳಲ್ಲಿ ಸ್ವಂತಿಕೆಯ, ವೈವಿಧ್ಯತೆ ಇದೆ. ಊಟ, ಉಡುಗೆ, ಕಾಯಕ ಮುಂತಾದವುಗಳಲ್ಲಿ ವಿಭಿನ್ನತೆ ಇದ್ದರೂ ಪರಸ್ಪರ ವಿಶ್ವಾಸ ಪ್ರೀತಿ ಅನುಕಂಪ ಮಾನವೀಯತೆ ಆಗರವದು. ಕಾಯಕಕ್ಕಂತೂ ವಿಭಿನ್ನ ಸಾಮಾಜಿಕರು ಒಬ್ಬರಿಗೊಬ್ಬರು ಪೂರಕರು. ಜನಪದರು ತಮ್ಮ ಒಡನಾಟದ ಜನಾಶ್ರಿತ ಬದುಕಿನ ಆರಾಧಕರು. ಅದಕ್ಕೆಂದೇ ಅದರ ಬಗ್ಗೆ ಅವರಿಗೆ ಎಲ್ಲಿಲ್ಲದ ಕಾಳಜಿ. ಈ ಜೀವ ಹರನ ಮಂದಹಾಸವೆಂದಿದ್ದಾರೆ. 'ಉರಿಯಾಗಬೆಂದು, ನೀರಾಗ ಮುಳುಗಿ, ತಿರುಗುವ ಗಾಣಕ್ಕೆ ತಲೆಯಿಟ್ಟೂ ಸ್ಥಿರವಾಗಿ' – ತಾವು ಮರ್ತ್ಯಗೆದ್ದುದನ್ನು ಸಾರಿದ್ದಾರೆ. ಬೆವರಿನ ಬದುಕಿನ ಅವರು ತಮ್ಮ ತೋಳಿನ ಮೇಲೆ ಸಿರಿದೇವಿಯನ್ನು ಮೆರೆದಿದ್ದಾರೆ. ಜೀವ ಜಗತ್ತುಗಳ ಅವಿನಾಭಾವ ಸಂಬಂಧವನ್ನು ತೆರೆದ ಅಂತಃಕರಣದ ಬಿಡುಗಣ್ಣಿನಿಂದ ಕಂಡು ಬದುಕಿನ ಅರ್ಥವನ್ನು ತಿಳಿದ ಆರೋಗ್ಯಯುತ ಮನಸ್ಸು ಅವರದು. ಮಾನವಜನ್ಮ ದೊಡ್ಡದೆಂಬ ನಂಬುಗೆ ಈ ಅಖ್ಯಾತ ನಾಮರಿಗೆ. ಜನಪದರ ಅನುಭವ ನಿವೇದನೆಯಲ್ಲಿ ಪ್ರಖರ ಪಾಂಡಿತ್ಯವಿರುವುದಿಲ್ಲ ನಿಜ. ಆದರೆ ತಮ್ಮ ಬದುಕಿನ ದೇಸೀ ಚೆಲುವನ್ನು ಉದ್ದೀಪನೆಗೊಳ್ಳುವ, ಅದನ್ನು ಆರಾಧಿಸುವ ನಯವಿನಯವಿದೆ. ಶ್ರೀಸಾಮಾನ್ಯನ ಅಭಿವ್ಯಕ್ತಿಯ ದೃಷ್ಟಿಕೋನ ಕುಟುಂಬ ಮತ್ತು ಸಮಾಜಕೇಂದ್ರಿತ. ಇವೆರಡೂ ಕೂಡ ತಮ್ಮ ಪರಿವೇಷದಲ್ಲಿ ವ್ಯಕ್ತಿಯ ಜತನದ ಹೊಣೆ ನಿರ್ವಹಿಸುತ್ತವೆ. ಹೀಗೆ ಹೊಣೆ ಹಕ್ಕುಗಳ ಸಮ ಸಮುಚ್ಚಯ ಜನಪದ ಅಭಿವ್ಯಕ್ತಿಯ ಹಿರಿಯಗುಣ'' – ಬದಲಾಗುತ್ತಿರುವ ಮಾನದಂಡಗಳಿಗೆ ಸಿಕ್ಕ ಈ ಸಾಂಘಿಕ ಪ್ರತಿಭೆ ಕೃಶವಾಗುತ್ತಿರುವುದರ ಬಗ್ಗೆ ಅವರ ಕಾಳಜಿ ಪ್ರಗತಿಪರ,

ಮುಕ್ತ ನಿಲುವು ತಾಳುವಂಥ ಅಭಿಪ್ರಾಯ ಹೊಂದಿರುವುದು ಸಹಜವಾದುದೇ!

* * *

ಜನಪದರು ಜಾನಪದದ ಮೂಲಕ ತಮ್ಮನ್ನು ತಾವು ಕಂಡುಕೊಂಡ ಬಗೆಯೇ ಸಂಗಣ್ಣನವರ ಆಸಕ್ತಿಯ ಕೇಂದ್ರ. ಅದು ಕಲೆಯ ವಿವಿಧ ಪ್ರಕಾರಗಳಾಗಿರಲಿ, ವಿವಿಧ ಶಾಖೆಯಿಂದ ಒದಗಿಬರುವ ಆನಂದವಾಗಲಿ, ಅವರ ಬದುಕನ್ನು ಪೂರ್ಣಪ್ರಮಾಣ ದಲ್ಲಿರಿಸುವ ಅವರು ಪೂರ್ಣಪ್ರಮಾಣದಲ್ಲಿ ಇರಿಸಿಕೊಳ್ಳುವ ತಂತ್ರವೇ ಅವರ ಜೀವನ ದೃಷ್ಟಿಯ ಇತ್ಯಾತ್ಮಕತೆಯನ್ನು ತೋರಿಸುತ್ತದೆ. ಅವರ ಬಗ್ಗೆ ಸಂಗಣ್ಣನವರಿಗಿರುವ ಗೌರವ ಈ ಕಾರಣಕ್ಕಾಗಿಯೇ ಮಾದಾರ ಚೆನ್ನಯ್ಯ ತನ್ನ ಗುಡಿಸಲಿನಲ್ಲಿ ಇಷ್ಟಲಿಂಗ ಪೂಜಿಮಾಡಿ ಮಣ್ಣಿನ ತಟ್ಟೆಯಲ್ಲಿ ಗಂಜಿಯನ್ನು ನೈವೇದ್ಯ ಮಾಡುವಾಗ ಅನುಭವಿಸುವ ಭಾವುಕತೆಗಿಂತಲೂ ಶರಣರು ತಮ್ಮ ಬದುಕಿನಲ್ಲಿ ದೈವತ್ವವನ್ನು ಅನುಭವಿಸಲು ಕಂಡುಕೊಂಡ ಈ ಅನುಭಾವಿಕ ತಂತ್ರಗಾರಿಕೆ ಸಂಗಣ್ಣನಂಥವರಿಗೆ ಮೆಚ್ಚುಗೆಯನ್ನುಂಟುಮಾಡುತ್ತದೆ. ಆದ್ದರಿಂದ, ''ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ. ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ...'' ಎಂಬ ಸೂಳೆ ಸಂಕವ್ವೆಯ ಏಕೈಕ ವಚನದ ಈ ಸಾಲುಗಳು ಆಕೆಯ ಜೀವನವನ್ನು ರೂಪಿಸಲು ಸಾಧ್ಯವಾಯಿತು.

ಜನಪದರು ತಮ್ಮ 'ಅದ್ಭುತ ಪ್ರತಿಭೆ'ಯ ಸಂವಹನಕ್ಕೆ ತಲೆಕೆಡಿಸಿಕೊಂಡವರಲ್ಲ. ಸಹಜ ವಾಗಿಯೇ ಇದ್ದುದರಿಂದ ಅದು ಸಹಜವಾಗಿಯೇ ಸಮಷ್ಟಿಗೊಳ್ಳುತ್ತಿತ್ತು. ತಮ್ಮ ಕಲೆಯನ್ನು ಸಮಷ್ಟಿಗೊಳಿಸುವ ಕಲಾಮಿಶ್ರಿತವಾದ ಅವರ ಬದುಕು ಅಥವಾ ಬದುಕಿನ ಅವಿಭಾಜ್ಯ ವೆನಿಸಿರುವ ಈ ಸಾಂಸ್ಕೃತಿಕತೆಯೇ ಸಂಗಣ್ಣನಂಥವರು ಅವರ ಬಗ್ಗೆ ಪೂರ್ಣ ಪ್ರಮಾಣದಲ್ಲಿ ಪ್ರೀತಿಯನ್ನು ತಾಳುವುದಕ್ಕೆ ಕಾರಣವಾಗಿತ್ತು. ಸಂಗಣ್ಣನವರು ಇಂಥವರನ್ನು ನಂಬಿ, ನೆಚ್ಚಿ, ಗೌರವಿಸಿದ್ದು ಯಾವುದೋ ಒಂದು ಔಪಚಾರಿಕವಾದ ಶೈಕ್ಷಣಿಕ ವಿಧಾನಕ್ಕಾಗಿ ಅಲ್ಲ; ಅವರಿಗೆ ಇಂಥ ವಿಧಾನದ ಮೂಲಕ ಗ್ರಹಿಸುವ ಜಾನಪದ ಕೇವಲ ಔಪಚಾರಿಕವಾದ ಮತ್ತು ವ್ಯವಹೃತ ವಾಗುವ ಆತಂಕವಿತ್ತು. ಈ ಕಾರಣಕ್ಕಾಗಿ ಅವರು ಮುಲಾಜಿಲ್ಲದ, ನಿರ್ಭೀತವಾದ ಅಭಿಪ್ರಾಯ ವ್ಯಕ್ತಪಡಿಸುವಷ್ಟರಮಟ್ಟಿಗೆ ಬದ್ಧರಾಗಿರುತ್ತಿದ್ದರು. ಹೀಗಾಗಿಯೇ ಸೂಳೆ ಸಂಕವ್ವೆಯಂಥ ಮಾಹಿತಿಗಳೇ ಅಲಭ್ಯವಾಗಿರುವ ವಚನಕಾರ್ತಿಯನ್ನು ಕುರಿತು ನಾಟಕ ಬರೆಯುವಾಗ ಅವರಿಗೆ, 'ಒತ್ತೆಯ...' ಎಂಬ ಸಾಲು ಆಕೆಯ ಬದುಕಿನ ಸಾರಲೇಖದಂತೆ ಕೆಲಸಮಾಡುತ್ತದೆ.

ಸಂಗಣ್ಣನವರ ಜಾನಪದ ಗ್ರಹಿಕೆಯು ತೊಡಗಿಸಿಕೊಳ್ಳುವುದರಿಂದ, ಬಳಸಿಕೊಳ್ಳುವುದರ ಮೂಲಕ ಹಾಗೂ ಅದನ್ನು ಸಂವಹನಗೊಳಿಸಿ ಆಯಾ ಕಾಲಾನುಸಾರವಾಗಿ ಆಶಯಕ್ಕೆ ವ್ಯತ್ಯಾಸ ಗೊಳ್ಳದೆ ಪರಿವರ್ತಿಸುವುದು ನಿಜಾರ್ಥದಲ್ಲಿ ಅದನ್ನು 'ಜೋಪಾನ' ಮಾಡುವಂತೆಯೇ ಇರುತ್ತಿತ್ತು. ಜಾನಪದ ಕಲೆಗಳು ಸ್ಥಳೀಯವಾಗದೇ ಹೋಗುತ್ತಿರುವುದು ಈ ಕಾರಣ ಕ್ಕಾಗಿಯೇ ಎಂಬುದು ಸಂಗಣ್ಣನವರ ಗ್ರಹಿಕೆ. ತಮ್ಮೂರಿ (ಚಿಗಟೇರಿ)ನಲ್ಲಿ ಹಲವು 'ಕೃಷ್ಣ ಪಾರಿಜಾತ'ಗಳಿರುವುದು ಅವರಿಗೆ ಹೆಮ್ಮೆ, ಆನಂದ ಹಾಗೂ ಅಚ್ಚರಿಯನ್ನುಂಟುಮಾಡುತ್ತದೆ. ಅವರ ಆವೇಶಭರಿತ ಪ್ರತಿಭೆಯಾಗಲೀ, ಅಶಾಸ್ತ್ರೀಯವಾದ ಆದರೆ ತಾದಾತ್ಮ್ಯದ ಅಭಿವ್ಯಕ್ತಿ ಯಾಗಲೀ ಸಾರ್ಥಕ್ಯ ಪಡೆಯುವಂಥ ಫಲಶ್ರುತಿ ಪಡೆಯುವುದು ಮುಖ್ಯವಾಗುತ್ತದೆ. ಹೆಳವರು, ನೀಲಗಾರರು, ವೇಷಗಾರರು, ಮೊದಲಾದವರು ತಮ್ಮ ಎಂತೆಂತಹ ಪ್ರತಿಭೆಗಳಲ್ಲಿ ಬದುಕುತ್ತಿದ್ದರೆಂದರೆ ಈ ಹಿನ್ನೆಲೆಯಲ್ಲಿ ಅವರ ಮನೆಯ ಒಂದು ಪ್ರಮುಖ ಭಾಗ 'ರಂಗಸ್ಥಳ'ವಾಗಿಯೇ ಇರುತ್ತಿತ್ತು.

ಸಂಗಣ್ಣನವರಿಗೆ ಅವು ಪಾಠಶಾಲೆಗಳೂ ಪ್ರಯೋಗಶಾಲೆಗಳೂ ಆಗಿದ್ದವು! ಇಂಥ ಪ್ರತಿಭೆ ಉಳಿಯಬೇಕೆಂದರೆ ಜನಸಮುದಾಯವೇ ಪ್ರಾಯೋಜಕತ್ವ ವಹಿಸಬೇಕು. ಆಗ ಕಲೆಗೆ ನಿಜವಾದ ಅರ್ಥ ಬರುತ್ತದೆ. ಜನಸಮುದಾಯವು ಇಂಥ ಹಿನ್ನೆಲೆಯಲ್ಲಿ ಸಹೃದಯ ಗೊಂಡಷ್ಟು ಕಲೆ ಪೂರ್ಣಪ್ರಮಾಣದಲ್ಲಿ ತನ್ನ ಉದ್ದೇಶವನ್ನು ನೆರವೇರಿಸಿಕೊಂಡಂತಾಗುತ್ತದೆ. ಸರಕಾರ ಇಂಥದ್ದನ್ನು ಉಳಿಸಬೇಕೆಂದು ಮಾಡುವ ಪ್ರಯತ್ನಗಳಾಗಲೀ, ಆಕಾಶವಾಣಿ - ದೂರದರ್ಶನಗಳ ಕಾರ್ಯಕ್ರಮಗಳಾಗಲೀ ಕ್ರಮೇಣ ಔಪಚಾರಿಕವಾಗುವಂತಾಗಿದ್ದರಿಂದ ಉದ್ದೇಶ ಸ್ಪಷ್ಟವಾಗುವುದಿಲ್ಲ.

* * *

೨೭-೦೪-೯೮ರಲ್ಲಿ ಹೂವಿನಹಡಗಲಿಯಲ್ಲಿ ನಡೆದ ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಮುದೇನೂರ ಸಂಗಣ್ಣನವರು ತಮ್ಮ ಅಧ್ಯಕ್ಷ ಭಾಷಣದಲ್ಲಿ – ''ಜನಪದ ಪ್ರಪಂಚಕ್ಕೆ ಸತ್ತ ನಂತರದ ಸ್ವರ್ಗಕ್ಕಿಂತ ವರ್ತಮಾನದ ಬದುಕು ಮುಖ್ಯ. ಜನಪದ ಅಭಿವ್ಯಕ್ತಿ ಕೇವಲ ಸಾಹಿತ್ಯಕ್ಕೆ ಸೀಮಿತವಲ್ಲ. ಅದು ತನ್ನವರಿಗೆ ಕರ್ತವ್ಯ ಹೇಳುವ, ಆತ್ಮವಿಶ್ವಾಸ ಮೂಡಿಸುವ, ಜೀವನವನ್ನು ಆರಾಧಿಸುವಂತೆ ಮನವೊಲಿಸುವ ಸಾಹಿತ್ಯ, ಎಲ್ಲಾ ರೋಗಗಳಿಗೆ ಸಿದ್ಧೌಷಧ'' ಮತ್ತು ''ಇದು ಜನತಾಯುಗ; ಬರೆಹಗಾರ ಯಾರಿಗೆ ಬರೆಯುತ್ತಿದ್ದಾನೆಯೋ ಅವರಿಗೆ ನೇರವಾಗಿ ಅರ್ಥವಾಗದಿದ್ದರೆ ವಾಚಕರ ಸಂಖ್ಯೆ ಹೆಚ್ಚಾಗಲಾರದು. ಯಾವ ವಿಧಾಯಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರದೇ ಬರೀ ಪ್ರತಿನಿಂದೆಯ ಮಾತಿನಲ್ಲಿ ಜಗದೋದ್ಧಾರವಾಗುವುದು ಎನ್ನುವುದು ವಂಚನೆಯ ಕೆಲಸವೇ. ಸಾಮಾಜಿಕ ಗತಿಶೀಲತೆಗೆ ತಕ್ಕಂತೆ ಪ್ರತಿಕ್ರಿಯಿಸಿ ಬರೆದ ನಮ್ಮ ಲೇಖಕ ಬಳಗದಿಂದ ಉತ್ತಮ ಕೃತಿಗಳನ್ನು ನಿರೀಕ್ಷಿಸಬಹುದು. ಸಾಹಿತ್ಯ ಕಲೆಗಳು ಕೇವಲ ಉತ್ಸವಗಳಲ್ಲಿ ಮಾತ್ರ ಬೆಳೆಯಲಾರವು. ಸಾಹಿತ್ಯದ ಚಳುವಳಿ ಜನತೆಯ ದೈನಂದಿನ ನೂಕು ನುಗ್ಗಲಿನಲ್ಲಿ ಬೆಳೆಯಬಲ್ಲದು'' – ಮುಗ್ಧ ಹಾಗೂ ಪ್ರಾಮಾಣಿಕ ಬದುಕಿನ ನೇರ ಉಪ ಉತ್ಪಾದನೆಯಾದ ಜಾನಪದದಂಥ ಸೃಷ್ಟಿಶೀಲ ಪ್ರಕ್ರಿಯೆಯು ಸಂಗಣ್ಣನವರಿಗೆ ಇಷ್ಟವಾಗುವ ಮುಖ್ಯಕಾರಣಗಳನ್ನೇ ಈ ಮಾತು ಹೇಳುತ್ತಿರುವಂತಿದೆ.

* * *

'ಕಲ್ಲಮೇಲಿನ ಬರೆಹಗಳನ್ನು ಓದಿದರೆ ಆಯುಷ್ಯ ಕಡಿಮೆಯಾಗುತ್ತದೆ; ನಮ್ಮ ಧ್ವನಿಯನ್ನು ಕೇಳಿದರೆ ಸತ್ತು ಹೋಗ್ತೀವಿ' – ಎಂಬ ಮೂಢನಂಬಿಕೆಗಳು ಶಾಸನಗಳ ಸಂಗ್ರಹ ಮತ್ತು ಅಧ್ಯಯನಕ್ಕೆ, ಜಾನಪದ ಸಂಪತ್ತನ್ನು ಧ್ವನಿಮುದ್ರಣದಲ್ಲಿ ಸಂಗ್ರಹಿಸುವುದಕ್ಕೆ ಉಂಟು ಮಾಡುತ್ತಿದ್ದ ಹಿನ್ನಡೆಯು ಸಂಗಣ್ಣನವರಿಗೂ ಅಚ್ಚರಿಯೇನಲ್ಲ; ಆದರೆ ಇದು ದುರದೃಷ್ಟಕರ! 'ಕರುಣ ಬಂದರೆ ಕಾಯಿ ಮರಣ ಬಂದರೆ ಕೊಲ್ಲು' - ಎಂಬ ಜೀವನ ವಿಧಾನವೇ ಈ ಜನಪದ ಅಧ್ಯಾತ್ಮವೆಂಬುದು ಸಂಗಣ್ಣನವರಿಗೆ ತಿಳಿದಿತ್ತು. ಜೀವನಕ್ಕೆ ಅರ್ಥಕೊಡುವ ಪುರುಷಾರ್ಥವನ್ನು ಜನಪದರು ರೂಢಿಸಿಕೊಂಡಿದ್ದರಿಂದ 'ಮಂದಿ ಮಕ್ಕಳೊಳಗೆ ಚಂದಾಗಿರ ಬೇಕು, ನಂದಿಯ ಶಿವನ ದಯೆಯಿಂದ ಹೋದಾಗ ಮಂದಿಯ ಬಾಯಾಗೇ ಇರಬೇಕು' 'ನೀರಾಗಿ ಮುಣುಗೇನು, ಬೆಂಕ್ಯಾಗ ಬೆಂದೇನು, ಗಾಣಾದಾಗ ಸಿಕ್ಕೇನು, ನಗುನಗುತಾ ಈ ಬದುಕಗೆದ್ದೇನಾ...' – ಎಂಬ ಮಾತುಗಳು ಬದುಕಿನ ವ್ಯಾಕರಣವನ್ನೆ ಸಾರುತ್ತವೆ.

ಜಾನಪದವನ್ನು ಮಾನವಶಾಸ್ತ್ರೀಯ, ಸಾಮಾಜಿಕ-ಸಾಂಸ್ಕೃತಿಕವಾಗಿ ಅಧ್ಯಯನ ಮಾಡಿದ ಪಾಶ್ಚಾತ್ಯ ಸಂಶೋಧನ ವಿಧಾನವು ಸರಿಯಾಗಿಯೇ ಇರುವಂತೆಯೇ ನಾವು ಜಾನಪದೀಯರಾಗಿ ಜಾನಪದದ ಆಳ-ವೈಶಾಲ್ಯವನ್ನು ಅರಿಯಬೇಕು ಎಂಬುದು ಸಂಗಣ್ಣನವರ ಸಲಹೆ. 'ಜಾನಪದ ಕಲೆ ಧನ್ಯತೆಯಿಂದ ಪ್ರತಿಫಲಾಪೇಕ್ಷೆಗೆ ಬದಲಾಗಿದ್ದು ಉಳಿವಿನ ದೃಷ್ಟಿಯಿಂದ ಆದ ದೊಡ್ಡ ಪ್ರತಿಕೂಲ ಬದಲಾವಣೆ.'

'ನಮ್ಮೂರಿಗೆ ಈ ಸಾಲಿ ತರಾಕ' – ಎಂಬ ೮೦-೮೫ ವರ್ಷದ ಗುಡ್ಡಾನೂರ ಗೋಣೆಜ್ಜನ ಒಂದು ಪ್ರಾಸಂಗಿಕ ಸಂದರ್ಭದ ಮಾತು (೧೯೬೫-೭೦ರ ಸುಮಾರಿನಲ್ಲಿ) ಸಂಗಣ್ಣನವರನ್ನು ಕೆಣಕಿದ್ದರಿಂದ 'ಚಿಗಟೇರಿ ಪದಕೋಶ' ರಚನೆಯಾಗಲು ಸಾಧ್ಯವಾಯಿತು. ಅವರ ಪ್ರಕಾರ ಚಿಗಟೇರಿ ಎಂಬ ಊರು (ಅಥವಾ ಅಂಥ ಯಾವುದೇ ಊರುಗಳು) ಕೇರಿಕೇರಿಗಳಲ್ಲಿ, ಓಣಿ ಓಣಿಗಳಲ್ಲಿ ಒಂದೊಂದು ವಿಭಿನ್ನವಾದ ಭಾಷೆಯ ರಚನೆಯ ವೇದಿಕೆಯಾಗಿರುತ್ತದೆ. ''ಮುಂದೆ ಬರಬಹುದಾದ ಬೃಹತ್ ಕನ್ನಡ ನಿಘಂಟು ಇಂಥ ಸ್ಥಳೀಯ ಕ್ಷೇತ್ರಾನ್ವೇಷಣೆಯ ಮೂಲಕ ರೂಪುಗೊಂಡಾಗ ಎಂಥ ಹಿಮಾಲಯ ಸದೃಶವಾದ ಕನ್ನಡ ನಿಘಂಟು ರೂಪು ತಳೆಯಬಹುದೆಂಬುದಕ್ಕೆ ಚಿಗಟೇರಿ ಪದಕೋಶದ ಅಮೂಲ್ಯ ಪದಭಂಡಾರ ಸಾಕ್ಷಿಯಾಗಬಲ್ಲದು'' – ಎಂದು ಕೋಶವನ್ನು ಪ್ರಕಟಿಸಿದ ಉಡುಪಿಯ ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರದ ಪರವಾಗಿ ಕು. ಶಿ. ಹರಿದಾಸ ಭಟ್ಟ ಅವರು ಹೇಳಿದ ಮಾತುಗಳು ಬರೀ ಪ್ರಶಂಸೆಯ ಮಾತುಗಳಲ್ಲ!

ದಿನಾಂಕ ೬-೪-೨೦೦೨ ರಂದು ಶಿವಮೊಗ್ಗದ ಕರ್ನಾಟಕ ಸಂಘವು ಸಂಗಣ್ಣನವರಿಗೆ ಗೌರವ ಸದಸ್ಯತ್ವ ನೀಡಿ ಗೌರವಿಸಿತು.

ಹಸೂಡಿ ಮನೆತನದ ಹಿರಿಯರೊಂದಿಗೆ ಹಾಗೂ ಕರ್ನಾಟಕ ಸಂಘದ ಕಾರ್ಯಕ್ರಮ ಗಳೊಂದಿಗೆ ಜಾನಪದವನ್ನು ಒಳಗೊಂಡಂತೆಯೇ ಇದ್ದ ಅವರ ಸುದೀರ್ಘ ಮಾತುಗಳನ್ನು ಕೇಳಿದ ಶಿವಮೊಗ್ಗದ ಹಿರಿಯರೊಬ್ಬರು – ''ನಮಗೆ ಶಿವರಾಮ ಕಾರಂತರ ಭಾಷಣ ಕೇಳಿದಂತೆ ಭಾಸವಾಯಿತು'' ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಇದು ಸಂಗಣ್ಣನವರಿಗೆ ಸಿಕ್ಕ ''ಮತ್ತೊಂದು ರೀತಿಯ ಪ್ರಶಸ್ತಿ'' ಎನಿಸಿತು. ಹೀಗೆ ೧೯೨೭ ಮೇ ೨೭ರಂದು ಜನಿಸಿ, ೨೦೦೮ ಅಕ್ಟೋಬರ್ ೨೬ರಂದು ತೀರಿಕೊಂಡ ಮುದೇನೂರ ಸಂಗಣ್ಣನವರು ಕೊನೆಯ ವರೆಗೂ ಓದುತ್ತಿದ್ದ, ಕೊನೆಯವರೆಗೂ ಬರೆಯುತ್ತಿದ್ದ ಮತ್ತು ಹೀಗೆ ಮಾಡುತ್ತಿರುವುದರ ಮೂಲಕ ಬದುಕಿನ ಕ್ರಿಯಾಶೀಲತೆಯನ್ನು ಜೀವಂತವಾಗಿಟ್ಟುಕೊಂಡವರು. ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಚಿಗಟೇರಿಯಂಥ ತಮ್ಮೂರಿನ ಸಂಘಟನೆಗಳಿಂದ ಹಿಡಿದು ರಾಜ್ಯದ ಪ್ರತಿಷ್ಠಿತ ರಾಜ್ಯೋತ್ಸವ, ಏಕೀಕರಣ, ನಾಡೋಜ ಪ್ರಶಸ್ತಿಗೆ ಭಾಜನರಾಗಿದ್ದವರು.

ಡಾ|| ಮೃತ್ಯುಂಜಯ ರುಮಾಲೆ
ಪ್ರಣವ, ಬಸವೇಶ್ವರ ಬಡಾವಣೆ, ಹೊಸಪೇಟೆ - ೫೮೩ ೨೦೧

# ತತ್ವಪದಕಾರರಲ್ಲಿ ವಿದ್ಯೆಯ ಸಂಕಥನ

ವಿದ್ಯೆಯಿಂದ ಮನುಷ್ಯನಲ್ಲಿ ನಷ್ಟವಾಗುವ ಹೀನ ಗುಣಗಳು, ಸೃಷ್ಟಿಗೊಳ್ಳುವ ಉತ್ತಮ ಗುಣಗಳ ಮೌಲಿಕತೆಯನ್ನು ಪದ್ಯ ಹೇಳುತ್ತದೆ. ತತ್ವಪದಕಾರರ ಆತ್ಮಮುಖಿ ಹಾಗೂ ಅಂತರ್ಮುಖಿ ವಿದ್ಯೆಯ ಚಿಂತನೆಗೆ ಇದು ಹಿಡಿದ ಕನ್ನಡಿಯಾಗಿದೆ. ಅಂದರೆ ಬುದ್ಧಿ ಹಾಗೂ ಭಾವಗಳ ನಡುವಿನ ಸುಸಂಬದ್ಧತೆ ಇದ್ದಾಗ ನಮ್ಮ ಮಾತು ಮತ್ತು ರೀತಿಗೆ ಅರ್ಥ ಪ್ರಾಪ್ತಿಯಾಗುತ್ತದೆ. ಸುಸಂಗತ ಮಾತುಗಾರಿಕೆ ಜೊತೆಗೆ ಸುಸಂಬದ್ಧ ವರ್ತನೆಯೂ ಕೂಡಿಕೊಳ್ಳಬೇಕು. ಅಧ್ಯಾತ್ಮಮೂಲ ಆಶಯಗಳೊಂದಿಗೆ ಮಾನವರನ್ನು ಎಲ್ಲ ಸಂಬಂಧಗಳಿಂದ ಸಂಕುಚಿತತೆ – ಪೂರ್ವಗ್ರಹಗಳಿಂದ ಬಿಡುಗಡೆಗೊಳಿಸುವ ಆಶಯ ತತ್ವಪದಕಾರರ ವಿದ್ಯೆಯ ಪರಿಕಲ್ಪನೆಯಾಗಿತ್ತು. ದೇವರು, ಗುರು ಅವರಿಗೆ ಸಂಕೇತಮಾತ್ರ. ಈಶ್ವರನ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದೆ ಮನಸ್ಸು ಹಾಗೂ ಶರೀರಗಳ ಸುಸಂಗತತೆಗೆ ಹೆಚ್ಚು ಗಮನಕೊಟ್ಟರು. ಯೋಗಿಮಾರ್ಗವು ಸಂಪ್ರದಾಯದ ಜಡತ್ವ, ಸಂಕುಚಿತತೆ, ಅವೈಚಾರಿಕ ಆಚರಣೆ, ನಂಬಿಕೆಗಳನ್ನು ತಿರಸ್ಕರಿಸುತ್ತದೆ. ಯೋಗ ಇಹದಲ್ಲಿಯೇ ಇದ್ದು ಸಾಧಿಸಬಹುದಾದ ಒಂದು ಮಾರ್ಗ.

**ಡಾ|| ವೀರೇಶ ಬಡಿಗೇರ**

"ಬಾಯಿಲೊಂದು ಆಡ್ತೀರಿ ಮನಸಿನೊಳಗೊಂದು ಮಾಡ್ತೀರಿ. ಬರದಿಟ್ಟಿದ್ದು ಓದಿಕೊಂಡು ಭ್ರಾಂತಿಗೆಟ್ಟು ಹೋಗತೀರಿ." ಕಡಕೋಳ ಮಡಿವಾಳಪ್ಪನ ಈ ಮಾತು ಆಧುನಿಕ ಮನುಷ್ಯನ ಆಕ್ಷರಿಕ ವಿದ್ಯೆ ಹಾಗೂ ನಡವಳಿಕೆಗಳ ಮಧ್ಯದ ವಿಪರ್ಯಾಸವನ್ನು ಸೂಚಿಸುವಂತಿದೆ. ಭಾರತದಲ್ಲಿ ಬ್ರಿಟಿಷರು ರೋಮನ್ ಲಿಪಿಗೆ ಮಹತ್ವ ಕೊಡುವವರೆಗೆ ನಮ್ಮವರು ಅಕ್ಷರ (ಲಿಪಿ) ಕಲಿಕೆಗಿಂತ ಅರಿವಿಗೆ ಹೆಚ್ಚು ಮಹತ್ವ ನೀಡಿದ್ದರು. ನಮ್ಮವರ ದೃಷ್ಟಿಯಲ್ಲಿ ವಿದ್ಯೆ ಎನ್ನುವುದು ಕಲಿಯುವುದಾಗಿರಲಿಲ್ಲ. ಅದು ತಿಳಿಯುವುದಾಗಿತ್ತು. ತತ್ವಪದಕಾರರಂಥವರು ಅಮೂರ್ತ ತಾತ್ವಿಕ ದರ್ಶನವನ್ನು ಮಾತ್ರವಲ್ಲ, ಮೂರ್ತವೂ ಜನೋಪಯೋಗಿಯೂ ಆದ ಜ್ಞಾನ ಮತ್ತು ಕುಶಲತೆಗಳ ಜೊತೆಗೆ ನಂಟು ಹೊಂದಿದ್ದರು. ಭಕ್ತಿ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ ಶರಣ, ದಾಸ, ತತ್ವಪದಕಾರರಂಥ ದಾರ್ಶನಿಕರೆಲ್ಲರೂ ದುಡಿಯುವ ಲೋಕದಿಂದ ಬಂದವರಾಗಿದ್ದರು. ಕೃಷಿ, ಪಶುಪಾಲನೆ, ನೇಕಾರಿಕೆ, ಕಮ್ಮಾರಿಕೆ, ಬಡಿಗತನ ಮುಂತಾದ ಶ್ರಮ ಸಂಸ್ಕೃತಿಯ ಜೊತೆ ಕರುಳಬಳ್ಳಿ ಸಂಬಂಧ ಹೊಂದಿದ್ದರು. ಹಾಗೆ ಬೇಟೆ, ವೈದ್ಯ, ಮಂತ್ರ-ತಂತ್ರದಂತಹ ಅನೇಕ ವಿಷಯಗಳ ವೈವಿಧ್ಯತೆಯ ಜಗತ್ತು ಅವರದಾಗಿತ್ತು. ಅದಕ್ಕೆ ಕೃತಕತೆ ಹಾಗೂ ಭೌತಿಕ ಸಾರ್ಥಕತೆಯ ತಾತ್ಕಾಲಿಕ ಲಾಭವಿರಲಿಲ್ಲ. ಹಾಗಾಗಿ ಗಾಂಧೀಜಿಯಂಥ ಆಧುನಿಕ ಚಿಂತಕರೂ ಕ್ರಿಯಾಶೀಲ ಹಾಗೂ ಕೌಶಲ್ಯಯುತ ಶಿಕ್ಷಣಕ್ಕೆ ಒತ್ತುಕೊಟ್ಟದ್ದು ಇದೇ ಕಾರಣಕ್ಕಾಗಿ.

ಗುರುಮುಖೇನ ವಿದ್ಯೆ ಪಡೆಯುವ ಎಲ್ಲ ಪಂಥಗಳೂ ಹುಟ್ಟಿನಿಂದ ಬರುವ ಶ್ರೇಷ್ಠ-ಕನಿಷ್ಠಗಳ ಜೊತೆಗೆ ಗ್ರಂಥಸ್ಥ ಜ್ಞಾನವನ್ನು ದೊಡ್ಡದೆಂದು ತಿಳಿಯುವುದಿಲ್ಲ. ನಾಥ ಪಂಥಗಳಾದಿಯಾಗಿ ಎಲ್ಲವೂ ವೇದಶಾಸ್ತ್ರ ಸ್ಮೃತಿಗಳನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ಸ್ವಾನುಭವದಿಂದಲೇ ಪರತತ್ವ ಪಡೆಯಬೇಕು. ಇದಕ್ಕೆ ಗುರುವಿನ ಮಾರ್ಗ ದರ್ಶನ ಅಗತ್ಯ ಎಂದು ಹೇಳುತ್ತವೆ. ದೈವಸಾಕ್ಷಾತ್ಕಾರದ ಅನುಭವಕ್ಕಾಗಿ ತನ್ಮಯತೆಯನ್ನು ಹೊಂದಲು ಲೌಕಿಕದ ಕಟ್ಟುಪಾಡುಗಳನ್ನು ಬದಿಗಿರಿಸಿ ಒಳದನಿಗೆ ಓಗೊಟ್ಟವರು ಕನ್ನಡದ ತತ್ವಪದಕಾರರು. ಸಮಾಜದ ಭೌತಿಕ ಬದಲಾವಣೆಗಿಂತ ವ್ಯಕ್ತಿಯ ಆತ್ಮೋನ್ನತಿಯನ್ನು ಬಯಸಿದವರು. ಅದಕ್ಕಾಗಿ ಗುರುವಿನ ನೆರವನ್ನು ಉತ್ಕಟವಾಗಿ ಬಯಸಿದರು. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ", "ಗುರುವಿನ ಮಗ ತಾ ಆದ ಬಳಿಕ ಹ್ಯಾಂಗಿರಬೇಕೋ! ಅಲ್ಲಿ ಅರಿವು ತಿಳಿದು ಮರುವಿನ್ಯಾಗ ಬೀಳೋದ್ಯಾಕೋ! ಮೆಟ್ಟಿಲೆ ಹೊಡದಾರ ಎಂದ ಎಚ್ಚರಿಸಬೇಕೋ" ಎನ್ನುವ ಮಾತುಗಳು ಮನುಷ್ಯನ ನೈತಿಕ ಪ್ರಶ್ನೆಗಳಾಗಿವೆ. ಗುರುವಿನೊಂದಿಗಿನ ಸಲಿಗೆ, ಚರ್ಚೆ, ಮೌನಸಂಧಾನ, ತಲ್ಲಣಗಳು ತನ್ನತನದ ಹುಟುಕಾಟವೇ ಆಗಿತ್ತು. ಗುರು ಒಂದು ಪರವಸ್ತು ಆಗಿರಲಿಲ್ಲ, ಸ್ವ-ವಸ್ತು ಆಗಿತ್ತು. ತತ್ವಪದಕಾರರಲ್ಲಿ ಗುರುವಿನ ಭೌತಿಕ ಅಸ್ತಿತ್ವಕ್ಕಿಂತ ಆಂತರಿಕ ಅಸ್ತಿತ್ವ ಮುಖ್ಯವಾಗಿತ್ತು. ಗುರು ಅವರಿಗೆ ಸೂಚಕ ಮಾತ್ರ. ಅವನೇ ಎಲ್ಲವೂ ಅಲ್ಲ. ಗುರುವೆನ್ನುವುದು ಅಂಗಸ್ತರವಾಗಿರದೇ ಅದು ಅರಿವಿನ ಸ್ತರವಾಗಿತ್ತು. ಅಂತರಂಗ ಬಹಿರಂಗಗಳಲ್ಲಿ ಒಂದೇ ಸ್ಥಿತಿಯನ್ನು ಹೊಂದುವುದಾಗಿತ್ತು.

ತತ್ವಪದಕಾರರು ಮೂಲತಃ ತೋಂಡಿ ಪರಂಪರೆಗೆ ಸೇರಿದವರು. ವೇದ, ಶಾಸ್ತ್ರ, ಪುರಾಣಗಳನ್ನು ಓದಿ ಜ್ಞಾನ ಸಂಪಾದನೆ ಮಾಡಿದವರಲ್ಲ. ಬದಲಾಗಿ ಸ್ವಾನುಭವ ಸಾಧನೆಗಳಿಂದಲೇ ಕಲಿಯಲು ಹಾತೊರೆದವರು. ಅಕ್ಷರ ಹಾಗೂ ವಿದ್ಯೆಗಳನ್ನು ಮಾರಾಟದ ವಸ್ತುವನ್ನಾಗಿಸಿದ ಪ್ರವೃತ್ತಿಗಳ ವಿರುದ್ಧ ಸಿಡಿದೆದ್ದವರು. ಬೌದ್ಧಿಕ ಕ್ರಿಯೆಗಿಂತ ಅಂತರಂಗದ 'ನಿಜಸುಖ'ಕ್ಕೆ ಮಿಡಿದವರು.

ಶಾಸ್ತ್ರ ಪುರಾಣ ವೇದ ಆಗಮ
ಮಾಡಿ ಇಟ್ಟಾರೋ ಮುಂದೆ ಓದುದಕ
ನಿಲುಕದ ಮಾತಿಗೆ ನಿಗರ್‍ಯಾಡಿ ಸತ್ತಾರೋ

–ಎನ್ನುವ ಮಡಿವಾಳಪ್ಪನ ಮಾತುಗಳಂತೂ ಲಿಖಿತ ರೂಪದ ಜ್ಞಾನದ ಶೋಷಿತ ಹಾಗೂ ನಿರ್ವೀರ್ಯ ನೆಲೆಗಳನ್ನು ನಿಷ್ಠುರವಾಗಿ ಖಂಡಿಸುತ್ತವೆ. ಶಂಕರದೇವರು ಹೇಳುವಂತೆ "ಕೃತಕದ ಕುಲಛಲವಿದ್ಯಾಮದ ವಿತತಿಯೆಂಟರೊಳು। ಮತಿಯೆನಿಸಿ ಎನ್ನೊಳಗೆ ನಾನು ಸಾವು ಹುಟ್ಟುತ್ತೈದನೋ" ಎನ್ನುವ ಮಾತು ಅಕ್ಷರ ವಿದ್ಯೆಯ ಶುಷ್ಕತೆಯನ್ನು ಹೇಳುತ್ತದೆ. ಬದುಕನ್ನು ರೂಪಿಸದ ಸ್ವಾನುಭವವನ್ನು ಮೂಡಿಸದ ಪರಾವಲಂಬಿ ವಿದ್ಯೆಯ ಬಗ್ಗೆ ಕಿಡಿಕಾರುತ್ತಾರೆ. ಬರೆದಿಟ್ಟ ಓದಿನ ತರ್ಕ-ಕುತರ್ಕ ಹಾಗೂ ಅದು ಸೃಷ್ಟಿಸುವ ಪಾಪ-ಪುಣ್ಯ, ಕರ್ಮ-ಪೂರ್ವಜನ್ಮ, ಶ್ರೇಷ್ಠ-ಕನಿಷ್ಠ, ಪಂಡಿತ-ಪಾಮರ ಎನ್ನುವ ಭೇದ ಕಲ್ಪನೆಗಳನ್ನು ಹೊಡೆದುಹಾಕುತ್ತವೆ. ದೇಹ ಹಾಗೂ ಮನಸ್ಸನ್ನು ಅಗಲಿಸಿ ಪವಿತ್ರೀಕರಿಸುವ ಮೇಲು-ಕೀಳಿನ ಮಾದರಿಗಳನ್ನು ದಿಕ್ಕೆಡಿಸುತ್ತಾರೆ. ಬರೆದಿಟ್ಟ ಜ್ಞಾನದ ಸ್ವಾರ್ಥ ಹಾಗೂ ಶೋಷಿತ ಮುಖವನ್ನು ತೆರೆದು ತೋರುತ್ತಾರೆ.

ವೇದ ಶಾಸ್ತ್ರಗಳ ಅನುದಿನ ಓದಿ
ಬಾಯೀ ಮಾಡತೀದಿ ಕಲಾ ಕಲಾ
ಗಾದೆಯ ಮಾತುಗಳಾಡುತ ಅನುದಿನ
ಏನು ಕಲಿತಿಯೋ ಛಲಾ ಛಲಾ.

ಅಕ್ಷರ ಬಲ್ಲ ಪಂಡಿತರು ಮತ್ತು ಅರಿವಿನ ಮೂಲದ ಅನುಭಾವಿಗಳ ನಡುವಿನ ಈ ತಿಕ್ಕಾಟ ಸಣ್ಣ ಪ್ರಮಾಣದ್ದೇನಲ್ಲ. ಅಕ್ಷರಸ್ಥ ಜ್ಞಾನ ಅಮಾನವೀಯತೆಗೆ ಕಾರಣವಾದರೆ ಅರಿವಿನಿಂದ ಪಡೆದ ಜ್ಞಾನ ಮಾನವೀಯತೆಗೆ ಕಾರಣವಾಗಿರುವ ಸಂಗತಿಗಳನ್ನು ಇಂಥ ತಿಕ್ಕಾಟಗಳಲ್ಲಿ ಕಾಣುತ್ತೇವೆ. ಬದುಕಿನಿಂದ ಪಡೆದ ಜ್ಞಾನಕ್ಕಿಂತ ಓದಿನಿಂದ ಪಡೆದ ಜ್ಞಾನಕ್ಕೇ ಹೆಚ್ಚು ಮನ್ನಣೆಯಿರುವ ಇಂದಿನ ಸಂದರ್ಭದಲ್ಲಿ ತತ್ವಪದಕಾರರ ಇಂಥ ಮಾತುಗಳು ನಿಂತು ಆಲೋಚನೆ ಮಾಡಲು

ಪ್ರೇರೇಪಿಸುತ್ತವೆ. ಪದವಿ ಹಾಗೂ ಅರ್ಥ (ಹಣ) ಪ್ರಧಾನವಾದ ಇಂದಿನ ತಾಂತ್ರಿಕ ವಾಸ್ತವಕ್ಕೂ ಶಾಸ್ತ್ರದ ಓದು ಹಾಗೂ ವರ್ಣಾಶ್ರಮ ಪ್ರಧಾನವಾದ ಅಂದಿನ ವಾಸ್ತವಕ್ಕೂ ಅಂಥ ವ್ಯತ್ಯಾಸವೇನಿಲ್ಲ. ಆದರೆ ಭಕ್ತಿ ಪರಂಪರೆಗಳು ನಿರೂಪಿಸಿದ ಜ್ಞಾನ ಈ ಎರಡೂ ಜ್ಞಾನದ ಪಾತಳಿಗಿಂತ ಭಿನ್ನವಾದದ್ದು. ಮಾಹಿತಿ ಹಾಗೂ ತಾಂತ್ರಿಕ ಪರ್ಯಟನದಲ್ಲಿ ವಿಶ್ವವನ್ನೇ ಗೆದ್ದೆವೆಂದು ಬೀಗುವ ತಾಂತ್ರಿಕ ಬೀರರು ಪಾಡರ್ ಕೋಳಿಗಳಿದ್ದಂತೆ. ಎಲ್ಲವನ್ನೂ ಸಿದ್ಧಮಾದರಿಯ ಸ್ಟೀರಿಯೋ ವಿಧಾನದಲ್ಲಿ ಸ್ವೀಕರಿಸುವ ಇಂದಿನ ಶೈಕ್ಷಣಿಕ ಸ್ಥಿತಿ ಸಹಜವಾಗಿಯೇ ಬಹುಮುಖೀ ದೃಷ್ಟಿಕೋನಗಳನ್ನು ಕಳೆದುಕೊಂಡಿದೆ. ಇಂಥ ಸ್ಥಿತಿ ಕುರಿತು ಕೂಡಲೂರು ಬಸವಲಿಂಗಪ್ಪ ಹಾಡಿದ ಹಾಡು ಅರ್ಥಪೂರ್ಣವಾದುದಾಗಿದೆ.

ಕುಲಛಲಕೆ ಹೋರಾಡಿ ನೆಲಗತ್ತಲಾಗುವ
ಛಲ ಮಾರಿಗಳೆಲ್ಲಾ ಪಂಡಿತರೇ ?
ಹಲವು ದೇಶವ ತಿರುಗಿ ನಾನಾ ಭಾಷೆಯ ಕಲಿತು
ಬಲು ಶ್ಯಾಣಾರಾದವರು ಪಂಡಿತರೇ ?
ಸುಲಭದಿ ಸೂಕ್ಷ್ಮದಿ ನಿಜವಸ್ತು ತಿಳಿಯದ
ಬಲು ಡಾಂಭಿಕರಿವರೆಲ್ಲಾ ಪಂಡಿತರೇ ?

ಬಹುಭಾಷೆ ಕಲಿತರೂ ಬಹುದೇಶ ತಿರುಗಿದರೂ ಕ್ರಿಯಾಶೀಲವಾಗದ, ಅಂತರಂಗ ವಿಕಾಸ ಮಾಡದ ಜ್ಞಾನ ಎಂಥ ಜ್ಞಾನ ? ನೆಲದ ಮೂಲದ ಭಾಷಾ ಸಂವೇದನೆಗಳಿಗೆ ಹಂಬಲಿಸದ, ಲಿಖಿತ ಭಾಷೆಯ ಹಂಗು ಹರಿದ ತತ್ವಪದಕಾರರು ಸಿದ್ಧ ಹಾಗೂ ಎರವಲು ಜ್ಞಾನದಿಂದ 'ನಿಜವಸ್ತು' ಸಿಗುವುದಿಲ್ಲ ಎಂದು ದಿಟವಾಗಿ ಹೇಳುತ್ತಾರೆ. 'ಅನ್ಯಶಾಸ್ತ್ರಕ್ಕೊಂದು ಅವಧರಿಪನವ ಹೊಲೆಯ', 'ಅಕ್ಕರಾಡಂಬರ ವಿತರ್ಕ ಮಾಡುವವನ್ಹೊಲೆಯ' ಎನ್ನುವಲ್ಲಿ ಅಕ್ಷರ ಸಂಸ್ಕೃತಿಯ ದುರ್ಬಲ ನೆಲೆಗಳನ್ನು ಮೂದಲಿಸುತ್ತಾರೆ. ಭೌತಿಕ ಸ್ವರೂಪದ ಸಿದ್ಧ ತಿಳುವಳಿಕೆಗಿಂತ ಸ್ವಾನುಭವ ಪ್ರಧಾನವಾದ ಅಂತರಿಕ ರೂಪಿ ಅರಿವಿಗೆ ಆದ್ಯತೆ ನೀಡುತ್ತಾರೆ.

ಜ್ಞಾನದಿಂದ ನದಿಸ್ನಾನವ ಮಾಡುತ
ಜ್ಞಾನಸಿಂಧು ಬಹಳೋದಿದಿರಿ
ಸ್ವಾನುಭಾವ ಸುಖ ಮೌನದಿ ತಿಳಿಯದೆ
ಹೀನ ಗುಣದಿ ಚರಿಶ್ಯಾಡದಿರಿ.

ಓದಿನಿಂದ ದಕ್ಕುವ ಸ್ವಾನುಭವದ ಸುಖವನ್ನು ಮೌನದಿಂದ ಅನುಭವಿಸದೆ ಅದನ್ನು ವಸ್ತುರೂಪಿಯಾದ ಬಾಹ್ಯಾಡಂಬರಕ್ಕೆ ಅಣಿಗೊಳಿಸುವ ಪರಿಯನ್ನು ಎತ್ತಿ ತೋರಿಸುತ್ತಾರೆ. 'ಕಲತ ಹಾಡವರೆಲ್ಲಾ ಪಂಡಿತರಾಗಿದ್ದಾರೆ, ಅಕ್ಷರ ತಿಳಿದಿಲ್ಲ ಸಮತೂಕ' ಎನ್ನುವ ಲಾವಣಿ ಹಾಡು ಅಕ್ಷರ ಜ್ಞಾನ ಹಾಗೂ ಅರಿವಿನ ನಡುವಿರುವ ಅಂತರವನ್ನೇ ಹೇಳುತ್ತದೆ. ಸದಾ ಅಮೇರಿಕಾದಂತಹ ಮುಂದುವರಿದ ರಾಷ್ಟ್ರಗಳ ನಕಲಾಗುತ್ತಿರುವ ನಮ್ಮ ಅಕ್ಷರಸ್ಥರಲ್ಲಿ ಇಚ್ಛಾಶಕ್ತಿಯ ಕೊರತೆ ತುಂಬಿ ತುಳುಕುತ್ತಿದೆ. ನಮ್ಮ ಮೇಲೆ ನಮಗೇ ನಂಬಿಕೆ ಹೊರಟುಹೋಗುತ್ತಿದೆ. ಸದಾ ಆತಂಕ, ಭಯ, ಅಭದ್ರತೆ ಹತಾಶೆಯಿಂದ ನಲುಗಿ ಬದುಕನ್ನೇ ಕಳೆದುಕೊಳ್ಳುತ್ತಿದೆ ಯುವಪೀಳಿಗೆ. ಇದೂ ಬರೀ ಆಧುನಿಕತೆಯ ಪರಿಣಾಮ ಎಂದರೆ ಸಾಲದು. ಮನುಷ್ಯನಲ್ಲಾಗುತ್ತಿರುವ ಇಂಥ ನಿಷ್ಕ್ರಿಯ ಬದಲಾವಣೆ ತತ್ವಪದಕಾರರನ್ನು ಕಂಗೆಡಿಸಿದೆ.

ಶ್ಯಾಣ್ಯಾನಂದರ ಯಾತರ ಶ್ಯಾಣ್ಯಾ
ಮೂರು ಮಲದ ಕಸ ಮುಸುರಿ ಇಟಗೊಂಡು ನಾ
ಧೀರನೆಂದರೆ ಯಾತರ ಶ್ಯಾಣ್ಯಾ
ಬೇರೆ ಬೇರೆ ಕುಲ ಭಾವಿಸಿ ಭವದ
ವಿಚಾರವಿಲ್ಲದವ ಯಾತರ ಶ್ಯಾಣ್ಯಾ
ನಾನಂಬುದು ನರಕ ಹೌದು
'ನಾ'ನಳಿಯದವ ಯಾತರ ಶ್ಯಾಣ್ಯಾ
ಮಾನವ ಜನ್ಮದ ಖೂನ ತಿಳಿಯದೆ
ಶ್ವಾನನಾದರ ಯಾತರ ಶ್ಯಾಣ್ಯಾ.
ಜ್ಞಾನಭರಿತ ನಮ್ಮ ಇಟಪೊರೀಶನೊಳು
ತಾನೇತಾನದವನೇ ಶ್ಯಾಣ್ಯಾ.

–ಮೋಟ್ನಳ್ಳಿ ಹಸನಸಾಬನ ಈ ಹಾಡು ಅಕ್ಷರದ ಅಹಂಕಾರವನ್ನು ಮತ್ತು ಅದರ ನಿಷ್ಪ್ರಯೋಜಕತೆಯನ್ನು ಹೇಳುತ್ತದೆ. ಅಕ್ಷರದಿಂದ ಬರುವ ಅರಿವಿಗಿಂತ ಅರ್ಥ (ಹಣ)ಕ್ಕೆ ಹೆಚ್ಚು ಬೆಲೆ. ಇಂದು ಅಕ್ಷರ ಮನುಷ್ಯನಲ್ಲಿ ಅರಿವಾಗಿ ಪರಿವರ್ತನೆಯಾಗಿ ಅನ್ನವಾಗಿ ಪೋಷಕವಾಗುವುದಕ್ಕಿಂತ ಹೆಚ್ಚಾಗಿ ಅವನಲ್ಲಿ ಮಾನವ ವಿಮುಖಿಯಾದ ವಿಕೃತತೆಯನ್ನೇ ಹುಟ್ಟುಹಾಕುತ್ತಿದೆ. ಅಕ್ಷರದೊಂದಿಗೆ ತಳುಕು ಹಾಕಿಕೊಂಡಿರುವ ಹಣ ಹಾಗೂ

ಶ್ರೀಮಂತಿಕೆಗಳು ಮನುಷ್ಯನ 'ಖೂನ'ವನ್ನೇ ಕಳೆದುಹಾಕಿವೆ. ಹಣದ ಮುಂದೆ ಎಲ್ಲ ಸಂಬಂಧ ಸಂಸ್ಕಾರಗಳು ತೃಣವಾಗಿವೆ. ವೇದಶಾಸ್ತ್ರ ಓದಿ ಅದರ ಭೇದವನರಿಯದೆ ಬರೆ ಓದಿದರೇನೋ ಫಲ, ಸಾಧಿಸಿ ತಾ ಸದ್ಗತಿ ಪಡೆಯದೆ ಭವಬಾಧೆಯಲ್ಲಿ ತೇಲುವ ಹೀನ ಗುಣಗಳೇ ಹೆಚ್ಚಾಗುತ್ತಿವೆ.

ಹಾಡಿನಲ್ಲಿ ಬಳಕೆಯಾಗುವ 'ಶ್ಯಾಣ್ಯಾ' ಪದದ ಪುನರುಕ್ತಿ ಅಕ್ಷರದ ಅಹಂಕಾರವನ್ನು, ಅದರ ಮತಿಹೀನತೆಯನ್ನು, ಸಂಸ್ಕೃತಿ ಹೀನತೆಯನ್ನು ತೆರೆದು ತೋರಿಸುವಲ್ಲಿ ಸೂಕ್ತ ಪಾತ್ರ ವಹಿಸಿದೆ. ಸ್ವಾನುಭವ ಜ್ಞಾನ, ಅರಿವಿನ ಜ್ಞಾನ, ಮನುಷ್ಯತ್ವದ ಮತಿಯುಳ್ಳ ಅರಿವು ಜ್ಞಾನವೇ ಹೊರತು ಓದಿನ ಅಹಂಕಾರ ಜ್ಞಾನವಲ್ಲ ಎಂಬುದನ್ನು ಹಸನಸಾಬ ಥಾಳವಾಗಿ ತೋರಿಸಿಕೊಟ್ಟಿದ್ದಾನೆ.

ತತ್ವಪದಕಾರರು ವ್ಯಕ್ತಿವಾದಿ ಸಾಧಕರಾದರೂ ಸಮಾಜವಾದಿ ಅನುಪಾಲಕರು. ಹೀಗಾಗಿ ಒಂದು ಸಮೃದ್ಧ ಸಾಮಾಜಿಕ ಚಿತ್ರಣವನ್ನು ಕಾಣಬಯಸಿದವರು. ಅವರ ಕಲ್ಪನೆಯ ಸಮಾಜವೆಂದರೆ ಅರಿವಿನ ಸಮಾಜ. ಸ್ವಾನುಭವ ಸಮಾಜ. ನಾವು ವ್ಯಕ್ತಿಯಾಗಿ ಉಳಿದು ಮಾನವರಾಗದೇ ಬದುಕುತ್ತಿದ್ದೇವೆ. ಕಾರಣ ಸಮಾಜ ಜಡವಾದಂತೆ ವ್ಯಕ್ತಿ ಜಡವಾಗುತ್ತಾನೆ. ಸಮಾಜ ಮತ್ತು ವ್ಯಕ್ತಿ ಎಷ್ಟು ಕ್ರಿಯಾಶೀಲರಾಗಿರುತ್ತಾರೋ ಅಷ್ಟು ಆ ಸಂಸ್ಕೃತಿ ಪರಿಪೂರ್ಣತೆಯತ್ತ ಸಾಗುತ್ತದೆ. ಅದಕ್ಕೊಂದು ವಿಕಾಸ ಮಾನವತ್ವದ ಜೀವನಪ್ರೀತಿ ಉಂಟಾಗುತ್ತದೆ. ಈ ಜೀವನಪ್ರೀತಿ ಸೃಷ್ಟಿಶೀಲ ಹಾಗೂ ತುಂಬಿದ ಸಾಮಾಜಿಕ ಸಂಚಲನೆಗಳಿಗೆ ದಾರಿಯಾಗುತ್ತದೆ. ತತ್ವಪದಕಾರರು ಇಂಥ ಆತ್ಮಮುಖಿ, ನೀತಿಮುಖಿ, ಭಕ್ತಿಮುಖಿ ಚಿಂತನೆಗಳ ಮೂಲಕ ಒಂದು ಸಮೃದ್ಧ ಸಮಾಜವನ್ನು ಕಟ್ಟಲು ಯತ್ನಿಸಿದವರು. ಆ ಕಟ್ಟುವಿಕೆ ಅನ್ಯ ಆಧಾರಗಳಿಂದಾಗದೆ ಆಂತರಿಕ ಆಧಾರಗಳಿಂದಾಗಬೇಕೆಂದು ಹೇಳಿದರು. ಮನುಷ್ಯನ ವೈಭವೀಕೃತ ಸ್ವರೂಪದ ವಿಕಾಸಕ್ಕಿಂತ ಸಹಜ ಹಾಗೂ ಗುಣಾತ್ಮಕ ವಿಕಾಸಕ್ಕೆ ಬೆಲೆಕೊಟ್ಟರು.

ಧನವಗಳಿಸಬೇಕೆಂಥಾದ್ದು ಈ ಜನರಿಗೆ
ಕಾಣಸದಂಥಾದ್ದು
..................................
ಕೊಟ್ಟರೆ ಹೋಗದಂಥಾದ್ದು ಅದು
ಇಟ್ಟರೆ ತೀರದಂಥಾದ್ದು
ಕಟ್ಟದ ಗಂಟು ಬಯಲೊಳಗಿಟ್ಟರೆ
ಮುಟ್ಟಲು ಬಾರದಂಥಾದ್ದು

–ಎನ್ನುವಲ್ಲಿ ಕಡಕೋಳ ಮಡಿವಾಳಪ್ಪನು ಜ್ಞಾನದ ಅರ್ಥಪೂರ್ಣ ವ್ಯಾಖ್ಯಾನ ಮಾಡುತ್ತಾನೆ. ವಸ್ತುರೂಪದ ಜ್ಞಾನಕ್ಕಿಂತ ಆತ್ಮಸಾಕ್ಷಾತ್ಕಾರ ಸ್ವರೂಪಿ, ನಿಜ ವಸ್ತುರೂಪಿ ಜ್ಞಾನದ ಮಹತ್ವವನ್ನು ಹೇಳುತ್ತಾನೆ. ಜ್ಞಾನವು ಬಳಸಿದಷ್ಟು ವೃದ್ಧಿಯಾಗುವಂಥದ್ದು ಹೊರತು ಮುಗಿದು ಹೋಗುವಂಥದ್ದಲ್ಲ.

ಜ್ಞಾನವೊಂದು ಕೌಶಲ್ಯ ಇದ್ದಂತೆ. ಅದೊಂದು 'ಒಳದನಿ.' ಅದೊಂದು ಅಂತರ್ಜಲ. ನನ್ನ ನಾನರಿವ ಪರಿಯದು. ಕೌಶಲ್ಯ, ಸ್ವಾನುಭವ ಹಾಗೂ ಸಾಧನೆಗಳಿಂದ ಕಲಿಯುವಂಥದ್ದು. ಅಕ್ಷರ ಬೌದ್ಧಿಕ ಕ್ರಿಯೆಯಾದರೆ, ಕೌಶಲ್ಯ ಅಂತರಂಗದ ಕ್ರಿಯೆ. ಕೌಶಲ್ಯ ಮತ್ತು ಬುದ್ಧಿ ಏಕೀಭವಿಸಿದ ಹೊರತು ಸೃಷ್ಟಿಶೀಲತೆ ಎನ್ನುವುದು ಹುಟ್ಟಲು ಸಾಧ್ಯವಿಲ್ಲ.

ಜ್ಞಾನವನು ಹೇಳುತಿಹ ಜ್ಞಾನವನು ತಾನರಿಯ
ಜ್ಞಾನಿಗಳನಡೆಯನು ಮೊದಲೇ ತಿಳಿಯ
ಜ್ಞಾನಿಗಳನೇ ಕಂಡು ಜ್ಞಾನವಿಲ್ಲೆಂದೆಂಬ
ಜ್ಞಾನಿ ತಾನೆಂತೆಂದು ಬರೆ ಬಣ್ಣಿಸುವವಗೆ.

ಓದಿ ಮರುಳಾದವರೆಲ್ಲ ಕೂಚಿಭಟ್ಟರು. ಓದಿ ನೋಡಲು ತಿಳಿಯದೆ ಕೆಟ್ಟರು. ಮತ್ತೊಬ್ಬರಿಗೆ ಓದಿ ಹೇಳುವ, ಬುದ್ಧಿಹೇಳುವ ಜನರು ಆ ಓದಿನ ಅರ್ಥ ಹಾಗೂ ಮಾತಿನ ಮರ್ಮವನ್ನು ತಾವೇ ತಿಳಿಯದಿರುವುದು. ಇಂದಿನ ಆಧುನಿಕ ಓದು ಇದೇ ರೀತಿಯದ್ದು. ಇವರ ಓದಿನ ಫಲ ಸಮಾಜಕ್ಕಾಗಲೀ ಸಂಸ್ಕೃತಿಗಾಗಲೀ ಉಪಯುಕ್ತವಾಗುತ್ತಿಲ್ಲ. ಓದು ಸಮಾಜಮುಖೀ ಚಿಂತನೆಯಾಗದೆ ವ್ಯಕ್ತಿಯ ಅಹಂಅನ್ನು ಬೆಳೆಸುತ್ತದೆ. ಸಂಸ್ಕಾರ ನೀಡಬೇಕಾದ ಅಕ್ಷರ ಸಂಹಾರ ರೂಪಿಯಾಗುತ್ತಿದೆ. ಇಂಥ ಜ್ಞಾನಕ್ಕೆ ಪುನರುತ್ಪತ್ತಿ ಸಾಮರ್ಥ್ಯವೇ ಬರುವುದಿಲ್ಲ. ಸಿದ್ಧರಾಮ ಹೇಳುವಂತೆ ''ಓದಿನ ಫಲ ಪರಾಶರನಂತಾಗಬಾರದು. ಓದಿನ ಫಲ ಮಯೂರನಂತಾಗಬಾರದು. ಓದಿನ ಫಲ ನಮ್ಮ ಹಾವಿನಹಾಳ ಕಲ್ಲಯ್ಯನ ಮನೆಯ ಸ್ವಾನನಂತಾಗಬೇಕು'' ಅಂದರೆ ಸಾರ್ಥಕವಾಗಬೇಕು.

ಶಿಲ್ಲಪ್ಪ ಎನ್ನುವ ಅನುಭಾವಿ ತನ್ನ ಭವದ ಬಾಜಾರ ಎನ್ನುವ ಹಾಡಿನಲ್ಲಿ ಇಂಥ ನಿರ್ವೀರ್ಯ ಅರಿವಿನ ನೆಲೆಗಳ ಕುರಿತು ಅರ್ಥಪೂರ್ಣವಾಗಿ ಹೇಳುತ್ತಾನೆ. ಆಧುನಿಕ ಶಿಕ್ಷಣ ಹಾಗೂ ಅದು ಕೊಟ್ಟ ಭೋಗ ಹಾಗೂ ಬಾಹ್ಯಾಡಂಬರ ಪ್ರಧಾನ ನೆಲೆಗಳ ಕುರಿತು –

ಬಟ್ಟೆ ತೊಟ್ಟನಿ ಚೆಸ್ಟರ್ ಮಲ್ ಮಲ್
ಕೋಟ ಕಮೀಸ ಮೈ ಒಳಗ
ಸೂಟ್ ಬೂಟ್ ಪಟ್ಲೋನ ನೆಕ್ಟಾಯ್
ಬೆಲ್ಟ್ ಕಟ್ಟಿದೇನ ಟೊಂಕನ್ಯಾಗ
..................................
ಸಾಲಿ ಬರದ ನಾ ಕಾಲೇಜದೊಳಗ
ಮೇಲಾಗಿ ಮ್ಯಾಟ್ರಿಕ್ ಬಿ.ಎ.ದೊಳಗ
ಕನ್ನಡ ಮರಾಠಿ ಹಿಂದಿ ಅರಬ್ಬೀ
ಇಂಗ್ಲಿಷ್ ಮಾರ್ವಾಡಿ ತೆಲಗ
ಕಲಕಲ್ತು ಬ್ಯಾಸರಾದೇನಲ್ಲ
ಕಾಲೇಜು ವಿದ್ಯೆವು ಮುಗಿಯಲಿಲ್ಲ

–ಹಲವು ಬಗೆಯ ಉಡುಪು ಉಟ್ಟು, ಸುಗಂಧಗಳನ್ನು ಪೂಸಿಸಿ ಹಲವು ಭಾಷೆಗಳನ್ನು ಕಲಿತರೂ ತೃಪ್ತಿಯಿಲ್ಲ. ಬಾಹ್ಯಾಡಂಬರವೇ ಪ್ರಧಾನವಾಯಿತೇ ವಿನಾ ಅಂತರಂಗ ವಿಕಾಸವಾಗಲಿಲ್ಲ. ಉಪಭೋಗವೇ ಪ್ರಧಾನವಾದ ಉತ್ಪಾದನಾ ರಹಿತವಾದ ಬದುಕಿನ ನಿರ್ಭಾವುಕ ನೆಲೆಗಳನ್ನು ಮೇಲಿನ ಹಾಡು ಗ್ರಹಿಕೆಗೆ ತರುತ್ತದೆ. ಆಧುನಿಕ ಮನುಷ್ಯ ಅತಿಯಾದ ಇಂಥ ಲೌಕಿಕ ಅಪೇಕ್ಷೆಗಳಿಂದಾಗಿ ಅನೈತಿಕತೆ, ಭ್ರಷ್ಟಾಚಾರ, ಅಧಿಕಾರದ ವ್ಯಾಮೋಹಕ್ಕೆ ಒಳಗಾಗಿ ಅಧೋಗತಿಗಿಳಿದಿದ್ದಾನೆ. ಜೀವನಪರಿಯಂತ ಕಲಿತರೂ ವಿವೇಕವಂತನಾಗದ ನೈತಿಕ ಅಧಃಪತನವನ್ನು ಮನುಷ್ಯ ಕಂಡಿದ್ದಾನೆ. ವೈಯಕ್ತಿಕ ನೈತಿಕತೆ ಹಾಗೂ ಸಾಂಸ್ಕೃತಿಕ ಬೆಳವಣಿಗೆ ಕುಂಠಿತಗೊಂಡಿವೆ.

**ವಿದ್ವತ್ತು-ವಿದ್ಯುತ್ತು**

ಇಂದು ಪುಸ್ತಕ ಸಂಸ್ಕೃತಿಯನ್ನು, ಮಾಹಿತಿಜ್ಞಾನವನ್ನು ಪ್ರಧಾನವಾಗಿ ಅಪ್ಪಿಕೊಂಡಿದ್ದೇವೆ. ಇಡೀ ಮಾಹಿತಿ ಮಸ್ತಕಕ್ಕಿಂತ ಪುಸ್ತಕದಲ್ಲೇ ಜಾಸ್ತಿಯಿದೆ. ಆ ಪುಸ್ತಕವಿಂದು ಡಿಜಿಟಲ್ ರೂಪ ಪಡೆದುಕೊಳ್ಳುತ್ತಿದ್ದು ತನ್ನ ಸ್ಥಿರರೂಪವನ್ನೇ ಕಳೆದುಕೊಳ್ಳುತ್ತಿದೆ. ಅಂದರೆ ಜ್ಞಾನದ ಪರಿಕರಗಳೇ ಇಂದು ಅಮೂರ್ತರೂಪಿಯಾಗುತ್ತಿವೆ. ಅದೃಶ್ಯ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ. ಇಡೀ ವಿದ್ವತ್ತು ವಿದ್ಯುತ್ತೀಕರಣಗೊಳ್ಳುತ್ತಿದೆ. ಮಾಹಿತಿ ಪ್ರಧಾನವಾದ ಈ ವಿದ್ಯುತ್‌ರೂಪದ ವಿದ್ವತ್ತು ಸರಾಗವಾಗಿ ಹರಿದಾಡಿದರೂ ಅದಕ್ಕೆ ವಿವೇಕಕ್ಕಿಂತ ವ್ಯಾವಹಾರಿಕತನವೇ ಮೊದಲಾಗುತ್ತಿದೆ.

ವಿದ್ಯೆಯ ಬಹುಮುಖೀ ನೆಲೆಗಳನ್ನು ನಮಗೆ ಗೊತ್ತಿಲ್ಲದೆಯೇ ಇದು ಏಕತ್ರಗೊಳಿಸುತ್ತದೆ.

ಪುಸ್ತಕಂಗಳ ಪಿಡಿದು
ಪುಸ್ತಕದೊಳಿದ್ದುದನು ವಿಸ್ತರಿಸಿ ಎಲ್ಲರಿಗೆ ಹೇಳುತಿಹನು
ಪುಸ್ತಕದ ಅರ್ಥವನು ಮನಕೆ ತಾರದಲೆ
ಪುಸ್ತಕದ ಅಕ್ಷರವ ಪೇಳುವವರ್ಗೆ.

–ಮುದ್ರಣದಲ್ಲಾದ ತಾಂತ್ರಿಕ ಆವಿಷ್ಕಾರಗಳು ಮಸ್ತಕಕ್ಕೂ ಪುಸ್ತಕಕ್ಕೂ ನಡುವೆ ದೊಡ್ಡ ಕಂದರವನ್ನು ಸೃಷ್ಟಿಮಾಡಿವೆ. ಮಸ್ತಕದಲ್ಲಿರುವುದು ಪುಸ್ತಕದಲ್ಲಿರಬೇಕಾಗಿಲ್ಲ. ಪುಸ್ತಕದಲ್ಲಿರುವುದು ಮಸ್ತಕಕ್ಕೇ ಹೋಗಬೇಕಾಗಿಲ್ಲ. ಅಂತಹ ಯಾಂತ್ರಿಕ ಬದುಕು ಮನುಷ್ಯ ವಿವೇಕದಲ್ಲಿ ತಲೆದೋರಿದೆ. ಇಂದು ಪುಸ್ತಕ ಸಂಸ್ಕೃತಿಯನ್ನು ನಾವು ಪ್ರಶಂಸಿಸುತ್ತೇವೆ. ಅದು ಮಹತ್ವಪೂರ್ಣವಾದದ್ದು ನಿಜ. ಆದರೆ ಫ್ರೆಂಚ್ ವಿದ್ವಾಂಸ ರೋಮೆ ರೋಲಾ ಅವರ ಈ ಉಕ್ತಿ ಕುತೂಹಲಕರವಾಗಿದೆ. ''ಪುಸ್ತಕಗಳು ತೆಪ್ಪಗಿರಲಿ : ಅವು ವಿಪರೀತ ಹರಟುತ್ತವೆ'' ಎನ್ನುವ ಮಾತು ಗಮನಾರ್ಹವಾದುದು. ಡಿ.ವಿ.ಜಿ. ಅವರು ಹೇಳುವಂತೆ –

ಪುಸ್ತಕದಿ ದೊರೆತರಿವು ಪುಸ್ತಕದಿ ತಳೆದ ಮಣಿ
ಚಿತ್ತದೊಳ್ ತಳೆದರಿವು ತರು ತಳೆದ ಪುಷ್ಪ
ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ
ಶಾಸ್ತ್ರಿತನದಿಂದಲ್ಲ - ಮಂಕುತಿಮ್ಮ.

ಆದಿಯಿಂದ ಆಧುನಿಕರವರೆಗೂ ಎಲ್ಲ ದೇಸೀ ಚಿಂತಕರು ಹೇಳುವುದಿದೇ ಮಾತು. ಪುಸ್ತಕ ಜ್ಞಾನಕ್ಕಿಂತ ಶಾಸ್ತ್ರ ಪಾಂಡಿತ್ಯಕ್ಕಿಂತ ಮುಖ್ಯವಾದುದು ಸ್ವಾನುಭವ. ಅಪರೋಕ್ಷಾನುಭೂತಿ : ಸಾಕ್ಷಾತ್ಕಾರ. ಅಂತರಂಗ ವಿಕಾಸ ಎಂಬುದು. ಜ್ಞಾನಕ್ಕೆ ವ್ಯಕ್ತಿಯದಾಗಲೀ ಪುಸ್ತಕದ್ದಾಗಲೀ ಹಂಗು ಬೇಕು. ಅದೇ ಸರ್ವಸ್ವವಲ್ಲ. ಒಂದು ಹಂತದವರೆಗೆ ಮಾತ್ರ ಗುರು ಮತ್ತು ಪುಸ್ತಕದಂಥ ಬಾಹ್ಯ ಪರಿಕರಗಳು ವ್ಯಕ್ತಿಯನ್ನು ಕೊಂಡೊಯ್ಯಬಲ್ಲವು. ಆದರೆ ಅದೇ ಅಂತಿಮವಲ್ಲ. ತತ್ವಪದಕಾರರ ಗುರುವಿನ ಕಲ್ಪನೆ ಈ ರೀತಿಯದು. ನಿಜಗುಣ ಶಿವಯೋಗಿಗಳು ಹೇಳುವಂತೆ ''ಮಾತುಮನಗಳಿಂದತ್ತತ್ತ ಮೀರಿದ ಪರಂಜ್ಯೋತಿ'' ಅರಿವಿನ ಗುರಿಯಾಗಬೇಕು. ಆ ಪರಮ ಲಾಭಕ್ಕೆ ಮೌನವೇ ಅತ್ಯುನ್ನತ ಸಾಧನ. ವಿದ್ಯೆಗೆ ಅಂಟಿಕೊಂಡಿದ್ದ ಆತ್ಮವಾದಿ ಹಾಗೂ ಅಧ್ಯಾತ್ಮವಾದಿ ನಿಲುವುಗಳು ವಿದ್ಯೆಯ ಪರಿಕಲ್ಪನೆಯನ್ನು ನಿರ್ದಿಷ್ಟಗೊಳಿಸಿದ್ದವು. ಅವಿನಾಶಿ, ಅನಾದಿ, ಅನಂತತೆಯ ಅಭಿವ್ಯಕ್ತಿಯಾಗಿ ವಿದ್ಯೆಯ ಪರಿಕಲ್ಪನೆ ವರ್ಣಾಶ್ರಮ ರೂಪವನ್ನು ಪಡೆಯಿತು. ವರ್ಣಾಶ್ರಮ ಧರ್ಮದ ಸಾಮಾಜಿಕ ಸಿದ್ಧಾಂತವೊಂದು ಇದನ್ನಾಧರಿಸಿ ಕೆಲವೇ

ನಿರ್ದಿಷ್ಟ ಜನಸಮೂಹಕ್ಕೆ ಎಲ್ಲಾ ಬಗೆಯ ಅಧಿಕಾರವನ್ನು ದಕ್ಕಿಸಿಕೊಡುವ ಉದ್ಯೋಗದಲ್ಲಿ ತೊಡಗಿತ್ತು. ವಿದ್ಯೆ ಎನ್ನುವುದು ಲೋಕಗ್ರಹಿಕೆ ತತ್ವವಾಗುವ ಬದಲು ಪಾರಭೌತಿಕ ಪರಿಕಲ್ಪನೆಯಾಯಿತು. ತತ್ವಪದಕಾರರಂಥ ಅದ್ವಯವಾದಿಗಳು ಅರಿವಿನ ಇಂಥ ಪಾರಭೌತಿಕ ಪರಿಕಲ್ಪನೆಯನ್ನು ಕಿತ್ತುಹಾಕಿ ಅರಿವಿನ ಸಾರ್ವತ್ರೀಕರಣಕ್ಕೆ ಕಾರಣರಾದರು.

ತತ್ವಪದಕಾರರ ಕಾಲದ ಸಾಮಾಜಿಕ ಅರಾಜಕತೆ, ರಾಜಕೀಯ ಅಸ್ಥಿರತೆ, ಪಂಡಿತ-ಪಾಮರ ಎನ್ನುವ ಭೇದ ಕಲ್ಪನೆಗಳು ಜನರ ನೆಮ್ಮದಿಯನ್ನು ಹಾಳುಮಾಡಿದವು. ಸಾಮಾಜಿಕ ಸ್ವಾಸ್ಥ್ಯ ಕನಸಿನ ಮಾತಾಗಿತ್ತು. ದೈಹಿಕವಾಗಿ ಹಾಗೂ ಮಾನಸಿಕವಾಗಿ ಜನ ಕುಸಿದು ಹೋಗಿದ್ದರು. ಅಂಥ ಹೊತ್ತಲ್ಲಿ ತತ್ವಪದಕಾರರು ತಮ್ಮ ಹಾಡುಗಳ ಮೂಲಕ ದುಗುಡಗೊಂಡ ಜನಸಮುದಾಯಗಳಲ್ಲಿ ಸಂತಸ ಮೂಡಿಸಿದರು. ಅಂಥ ಸಾಮಾಜಿಕ ಸಂದರ್ಭದಲ್ಲಿ ರೂಪಗೊಂಡಿದ್ದ ಜನವಿರೋಧಿ ಜ್ಞಾನದ ಸಂಕಥನಗಳ ಒಡಲಲ್ಲಿ ತಮ್ಮ ಸಹಜ ಚಿಂತನೆಗಳ ಮೂಲಕ ತಳಮಳ ಹುಟ್ಟಿಸಿದರು. ಹೊಸ ಜ್ಞಾನಮಾರ್ಗದ ಸೃಷ್ಟಿಗೆ ಕಾರಣರಾದರು. ನಾಗರಹಳ್ಳಿ ಶರಣಬಸವ ಹೇಳುವಂತೆ –

*ಓದು ಕಲಿಸಿದ ಸದ್ಗುರು ಎನಗ ಓದು ಕಲಿಸಿದ*
*ಭೇದ ಗುಣಗಳ ಎಲ್ಲಾ ಅಳಿದು*
*ನಾದಬ್ರಹ್ಮ ಕಳೆಯತಿಳಿದು*
*ಭೇದ ಮಾಡಿದ ಎನ್ನ ಗುರು*
*ಓದುಕಲಿಸಿದ ಸದ್ಗುರು ನನಗ*
*ಕರ್ಮವೆಂಬ ಕತ್ತಲ ಕಳೆದು*
*ಧರ್ಮವೆಂಬ ಜ್ಯೋತಿಯ ತುಂಬಿ*
*ನಿರ್ಮಲವೆಂಬ ಬೆಳಕಿನೊಳ್*
*ನಿಜವದಿಂದ ಕುಳಿತುಕೊಂಡು*
*ಅಷ್ಟಮದವ ನಷ್ಟಮಾಡಿ*
*ಶ್ರೇಷ್ಠವಾದ ಧ್ಯಾನತುಂಬಿ*
*ಸೃಷ್ಟಿಗೆ ಅಧಿಪತಿಯೇ ಆದ*
*ಗುರುನಾಗರಹಳ್ಳಿ ಶರಣಬಸವ.*

ಈ ಇಡೀ ಪದ್ಯ ಅರಿವಿನ ವ್ಯಾಖ್ಯಾನವನ್ನು ಮಾಡುತ್ತದೆ. ಗುರುಶಿಷ್ಯ ಹಾಗೂ ಓದು-ವಿದ್ಯೆಯ ಸಂಸ್ಕೃತಿಮುಖಿ ಸಂಕಥನವನ್ನು ಹಾಡು ಕಟ್ಟಿಕೊಡುತ್ತದೆ. ವಿದ್ಯೆಯಿಂದ ಮನುಷ್ಯನಲ್ಲಿ ನಷ್ಟವಾಗುವ ಹೀನ ಗುಣಗಳು, ಸೃಷ್ಟಿಗೊಳ್ಳುವ ಉತ್ತಮ ಗುಣಗಳ ಮೌಲಿಕತೆಯನ್ನು ಪದ್ಯ ಹೇಳುತ್ತದೆ. ತತ್ವಪದಕಾರರ ಆತ್ಮಮುಖಿ ಹಾಗೂ ಅಂತರ್ಮುಖಿ ವಿದ್ಯೆಯ ಚಿಂತನೆಗೆ ಇದು ಹಿಡಿದ ಕನ್ನಡಿಯಾಗಿದೆ. ಅಂದರೆ ಬುದ್ಧಿ ಹಾಗೂ ಭಾವಗಳ ನಡುವಿನ ಸುಸಂಬದ್ಧತೆ ಇದ್ದಾಗ ನಮ್ಮ ಮಾತು ಮತ್ತು ರೀತಿಗೆ ಅರ್ಥ ಪ್ರಾಪ್ತಿಯಾಗುತ್ತದೆ. ಸುಸಂಗತ ಮಾತುಗಾರಿಕೆ ಜೊತೆಗೆ ಸುಸಂಬದ್ಧ ವರ್ತನೆಯೂ ಕೂಡಿಕೊಳ್ಳಬೇಕು. ಅಧ್ಯಾತ್ಮಮೂಲ ಆಶಯಗಳೊಂದಿಗೆ ಮಾನವರನ್ನು ಎಲ್ಲ ಸಂಬಂಧಗಳಿಂದ ಸಂಕುಚಿತತೆ – ಪೂರ್ವಗ್ರಹಗಳಿಂದ ಬಿಡುಗಡೆಗೊಳಿಸುವ ಆಶಯ ತತ್ವಪದಕಾರರ ವಿದ್ಯೆಯ ಪರಿಕಲ್ಪನೆಯಾಗಿತ್ತು. ದೇವರು, ಗುರು ಅವರಿಗೆ ಸಂಕೇತಮಾತ್ರ. ಈಶ್ವರನ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದೆ ಮನಸ್ಸು ಹಾಗೂ ಶರೀರಗಳ ಸುಸಂಗತತೆಗೆ ಹೆಚ್ಚು ಗಮನಕೊಟ್ಟರು. ಯೋಗಿಮಾರ್ಗವು ಸಂಪ್ರದಾಯದ ಜಡತ್ವ, ಸಂಕುಚಿತತೆ, ಅವೈಚಾರಿಕ ಆಚರಣೆ, ನಂಬಿಕೆಗಳನ್ನು ತಿರಸ್ಕರಿಸುತ್ತದೆ. ಯೋಗ ಇಹದಲ್ಲಿಯೇ ಇದ್ದು ಸಾಧಿಸಬಹುದಾದ ಒಂದು ಮಾರ್ಗ. ಮನಸ್ಸಿನ ಆರೋಗ್ಯಕ್ಕೆ ದೇಹದ ಆರೋಗ್ಯ ಮುಖ್ಯವೆಂದು ಅದು ತಿಳಿಯುತ್ತದೆ. ಈ ಕಾರಣ ಅನುಭಾವಿಗಳಿಗೆ ಯೋಗಮಾರ್ಗ ಹೆಚ್ಚು ಪ್ರಿಯವಾಯಿತು.

ತತ್ವಪದಕಾರರದು ಬೋಧಮಾರ್ಗ. ಅಂದರೆ ಶಾಸ್ತ್ರ ಧರ್ಮಗಳಾಚೆ ಹೋಗಿ ಗುರುಮಾರ್ಗದರ್ಶನದಲ್ಲಿ ಸ್ವತಂತ್ರವಾಗಿ ಕಂಡುಕೊಳ್ಳುವಂಥದ್ದು. ಸಾಂಸ್ಥಿಕ ಜಡತೆಯ ಭಾಗವಾಗಿದ್ದ ದೇವರು, ಧರ್ಮ ಗುರು ಹಾಗೂ ವಿದ್ಯೆಯ ಸಾಂಪ್ರದಾಯಿಕ ಪರಿಕಲ್ಪನೆ ಮೀರಿದ್ದ ಅರಿವಿನ ಖೂನ ತತ್ವಪದಕಾರರದಾಗಿತ್ತು.

ಡಾ॥ ವೀರೇಶ ಬಡಿಗೇರ
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

*(ಮತಾಂತರ ಮತ್ತು ಕೋಜಾ ದಂಗೆಗಳು ... ೩೩ನೇ ಪುಟದಿಂದ)*

ಮಾತ್ರ ಉದ್ಧರಿಸುತ್ತಾರೆ. ಆದರೆ, ಅದೇ ವೈದಿಕ ಗುಡಿಗುಂಡಾರಗಳನ್ನು ಪ್ರವೇಶಿಸಲು ಯತ್ನಿಸಿದ ಸಾವಿರಾರು ಅಸ್ಪೃಶ್ಯ ಮಾನವ ಜೀವಗಳ ಮೇಲೆ ಹೇಗೆ ಮತ್ತು ಎಂತೆಂಥ ನರಮೇಧವನ್ನೇ ನಡೆಸಲಾಯಿತು ಎಂಬುದಕ್ಕೆ, ಅಂಬೇಡ್ಕರ್ ಸಾಹಿತ್ಯದಲ್ಲಿ ಬೇಕಾದಷ್ಟು ನಿದರ್ಶನಗಳೇ ಇವೆ. ಆದರೆ, ಡಾ॥ ಭೈರಪ್ಪನವರು ತಮ್ಮ ಇಡೀ ಲೇಖನದ ಯಾವೊಂದು ವಾಕ್ಯದಲ್ಲೂ ಅಂಬೇಡ್ಕರರ ಹೆಸರನ್ನು ಬರೆಯುವುದಿಲ್ಲ. ಅದೇ ಸಂದರ್ಭದಲ್ಲಿ, ಭಾರತದಲ್ಲಿ ಮತಾಂತರದ ಹಿಂದಿನ ಮೂಲಕಾರಣೀಭೂತ ಸಿದ್ಧಾಂತವನ್ನು ತೋರಿಸಿಕೊಟ್ಟ ಪ್ರಪ್ರಥಮ ಅಧ್ಯಾತ್ಮ ಚಿಂತಕರೇ ಅಂಬೇಡ್ಕರ್ ಎಂಬುದನ್ನೂ ಮರೆಯುವಂತಿಲ್ಲ.

ದೇಶದ ಶೋಷಿತವರ್ಗಗಳು ನಿರಂತರವಾಗಿಯೂ ಅನ್ಯಾನ್ಯ ಧರ್ಮಗಳಿಗೆ ಧರ್ಮಾಂತರ ಅಥವಾ ಮತಾಂತರಗೊಳ್ಳುತ್ತಿರಬಹುದಾದುದರ ಬಗೆಗೆ ಡಾ॥ ಭೈರಪ್ಪನವರು ಎಷ್ಟರಮಟ್ಟಿಗೆ ದಿಗ್ಭ್ರಮೆಗೊಂಡಿದ್ದಾರೆ ಎಂದರೆ, ಕೋಜಾ ಬಿಜೆಪಿಗಳನ್ನು ಹೊರತುಪಡಿಸಿ, ಉಳಿದೆಲ್ಲರನ್ನೂ ಭಿನ್ನ ಭಿನ್ನ ಮಾತುಗಳಲ್ಲಿ ಅವರು ಟೀಕಿಸುತ್ತಾರೆ ಮತ್ತು ವ್ಯಂಗ್ಯ ಮಾಡುತ್ತಾರೆ. ಕಾಂಗ್ರೆಸ್ಸಿಗರನ್ನು ಒಂದು ಥರ ಟೀಕಿಸಿದರೆ, ಎಡಪಂಥೀಯರನ್ನು ಇನ್ನೊಂದು ರೀತಿಯಲ್ಲಿ ಗೇಲಿ ಮಾಡುತ್ತಾರೆ. ದೇಶದ ಮಾಧ್ಯಮ ಲೋಕವನ್ನಂತೂ ಸಮಸ್ತವಾಗಿ ಜರಿಯುತ್ತಾರೆ. ದಲಿತ ವರ್ಗದ ಲೇಖಕರನ್ನು ಬುದ್ಧಿಜೀವಿಗಳೆಂದು ಕರೆಯುತ್ತ, ಒಂದು ರೀತಿಯಲ್ಲಿ ಇವರೆಲ್ಲಾ ಹಿಂದೂಧರ್ಮ ದ್ರೋಹಿಗಳು ಎಂಬಂತೆ ಬಿಂಬಿಸುತ್ತಾರೆ. ಇಸ್ಲಾಂನ ಪ್ರವಾದಿಗಳನ್ನು ಹೀಗಳೆಯುತ್ತಾರೆ. ಕ್ರಿಸ್ತರ ಧರ್ಮಕ್ಷೇತ್ರವಾದ ವ್ಯಾಟಿಕನ್ ಮತ್ತು ಪೋಪ್ ಜಾನ್ ಪಾಲ್‌ರನ್ನು ಅರ್ಥಶೂನ್ಯ ಅಧ್ಯಾತ್ಮಿಗಳೆಂದು ಅಲ್ಲಗಳೆಯುತ್ತಾರೆ. ಅಂದರೆ, ಲೋಕದ ಅನ್ಯಧರ್ಮಗಳನ್ನೂ ಧರ್ಮ ಬೋಧೆಗಳನ್ನೂ ಇಷ್ಟೊಂದು ಪೂರ್ವಗ್ರಹಪೀಡಿತರಾಗಿ ಟೀಕಿಸಿ ಅವುಗಳನ್ನೆಲ್ಲಾ ಅರ್ಥಶೂನ್ಯವೆಂದು ತಿರಸ್ಕರಿಸುವ ಡಾ॥ ಭೈರಪ್ಪನವರು, ಅವರ ಜಾತೀಯ ಪಾರಮ್ಯದ 'ಮನುಸ್ಮೃತಿ'ಯಲ್ಲಿ, ಅಖಂಡ ಭಾರತದ ಮುಕ್ಕಾಲು ಭಾಗ ಜನಸಂಖ್ಯೆಯೇ ಆಗಿರುವ, ಶೂದ್ರರು, ಹಿಂದುಳಿದವರು ಮತ್ತು ಅಸ್ಪೃಶ್ಯರು ಏನಾಗಿದ್ದಾರೆ ಎಂಬ ಬಗೆಗೆ ಕೇವಲ ಕೆಲವೇ ಮಾತುಗಳನ್ನಾದರೂ ಅವರು ವ್ಯಕ್ತಪಡಿಸಿದ್ದಲ್ಲಿ, ಇವರ ಪಾಂಡಿತ್ಯ ನಿಜಕ್ಕೂ ಆರೆಸ್ಸೆಸ್‌ನ ಢೋಂಗಿ ಪಾಂಡಿತ್ಯವಲ್ಲವೆಂದು ತಿಳಿಯಬಹುದಿತ್ತು. 'ಮನುಸ್ಮೃತಿ'ಯಲ್ಲಿ ಶೂದ್ರಾತಿಶೂದ್ರರೆಲ್ಲಾ ಏನಾಗಿದ್ದಾರೆ ಎಂಬ ಬಗೆಗೆ 'ಅಂಬೇಡ್ಕರ್ ವರ್ಸಸ್ ಮನುವಾದ' ಎಂಬ ಗ್ರಂಥದಲ್ಲಿ ಬೇಕಾದಷ್ಟು ಅಧಿಕೃತ ಮಾಹಿತಿಗಳನ್ನು ದಾಖಲಿಸಿದ್ದೇನೆ. ಆಸಕ್ತರು ಪರಿಶೀಲಿಸಬಹುದು. ಕ್ರಿಸ್ತಧರ್ಮ, ಅದರ ಅನುಪಾಲಕರು, ಇಸ್ಲಾಂ ಧರ್ಮ, ಅದರ ಪ್ರವಾದಿಗಳು ತಮ್ಮ ಅನುಪಾಲಕರಿಗೆ ಹೇಳುವ ಅಥವಾ ಬೋಧಿಸುವ ವಿಚಾರಗಳೆಲ್ಲ ಸುಳ್ಳು, ಹಿಂಸೆ ಮತ್ತು ಅಸಹನೆಯಿಂದ ತುಂಬಿವೆ ಎಂಬುದಾಗಿ ವ್ಯಾಖ್ಯಾನ ಮಾಡುವ ಡಾ॥ ಭೈರಪ್ಪನವರು ವೇದಧರ್ಮದ ಒಂದು ಸಣ್ಣ ವಾಕ್ಯವನ್ನು ಕೊನೆಯಲ್ಲಿ ಹೀಗೆ ವ್ಯಾಖ್ಯಾನಿಸುತ್ತಾರೆ: ''ಭಾರತ ಧರ್ಮದ ಅತ್ಯಂತ ಪ್ರಾಚೀನ ಅಭಿವ್ಯಕ್ತಿಯಾದ ವೇದದ ಬಹುಮುಖ್ಯವಾದ ಬೋಧೆ 'ಏಕಂ ಸತ್ ವಿಪ್ರಾಃ ಬಹುಧಾ ವದಂತಿ.' ಸತ್ ಎಂಬುದು ಒಂದೇ. ತಿಳಿದವರು ಅದನ್ನು ಹಲವು ವಿಧಗಳಲ್ಲಿ ಹೇಳುತ್ತಾರೆ.'' ಅಲ್ಲದೆ, ಈ ವೇದವಾಕ್ಯ ಅತ್ಯಂತ ಮುಕ್ತ ಕಲ್ಪನೆ ಎಂತಲೂ ಅವರು ಅರ್ಥವಿಸುತ್ತಾರೆ. ಅಂದರೆ 'ಸತ್' ಎಂಬುದು ಒಂದೇ. ಆದರೆ ಆ 'ಸತ್' ಅನ್ನು 'ತಿಳಿದವರು' ಹಲವು ವಿಧದಲ್ಲಿ ಹೇಳುತ್ತಾರೆ ಎನ್ನಲಾಗಿದೆ. ಹಾಗಾದರೆ, ಯಾರು ಈ ತಿಳಿದವರು ಎಂಬ ಪ್ರಶ್ನೆಗೆ, ಆ 'ಸತ್' ಅನ್ನು ತಿಳಿದವರು ವಿಪ್ರರು ಎಂದು ಉತ್ತರ. ವಿಪ್ರರು ಎಂದರೆ ಯಾರು? ಒಂದು ಸ್ಪಷ್ಟ ಜಾತಿ ಸೂಚಕ ಪದದ ಅರ್ಥವನ್ನು ಭೈರಪ್ಪನವರು ಎಷ್ಟರಮಟ್ಟಿಗೆ ಮರೆಮಾಚುತ್ತಿರುವರೆಂಬುದು ಇಲ್ಲಿ ಅತಿ ಸ್ಪಷ್ಟವಾಗಿಯೇ ಇದೆ. ಹಾಗೆ ನೋಡಿದರೆ, ಸ್ವತಃ ಅಂಬೇಡ್ಕರರೇ ಹೇಳುವಂತೆ, ವೇದಗಳಲ್ಲಿ ಇದಕ್ಕಿಂತಲೂ ಉತ್ತಮವಾದ ವಾಕ್ಯಗಳಿವೆ. ಆದರೆ, ಭೈರಪ್ಪನವರು ಹೋಗಿ ಹೋಗಿ ಈ ಒಂದು ವಾಕ್ಯವನ್ನು ಕೋಟ್ ಮಾಡಿದ್ದಾರೆ. ಅವರ ತಲೆಯಲ್ಲಿ ಏನು ತುಂಬಿದೆಯೆಂಬುದಕ್ಕೆ ಇದೊಂದು ನಿದರ್ಶನ ಸಾಕು.

ಡಾ॥ ಮ. ನ. ಜವರಯ್ಯ
ಸಂಖ್ಯೆ ಎಮ್ -೧೩, ೨ನೇ ಮುಖ್ಯ ರಸ್ತೆ, ೨ನೇ ಅಡ್ಡರಸ್ತೆ
೨ನೇ ಹಂತ, ಇ ಎಂಡ್ ಎಫ್ ಬ್ಲಾಕ್, ದಟ್ಟಗಳ್ಳಿ, ರಾಮಕೃಷ್ಣನಗರ, ಮೈಸೂರು - ೫೭೦ ೦೨೨




# ಇಕ್ಕಟ್ಟಿನಲ್ಲಿ ತತ್ತರಿಸುತ್ತಿರುವ ಪಾಕಿಸ್ತಾನ

**ಭಾ**ರತದ ವಾಣಿಜ್ಯ ನಗರ ಮುಂಬೈ ಮೇಲೆ ನವೆಂಬರ್ ೨೬ರಂದು ಜರುಗಿದ ಭಯೋತ್ಪಾದಕರ ದಾಳಿ ಪ್ರಕರಣದ ನಂತರ ಮೊದಲ ಬಾರಿಗೆ ಪಾಕಿಸ್ತಾನದ ಸರಕಾರ ಅಧಿಕೃತವಾಗಿ ಸಂಚಿಗೆ ಮೂಲ ತಮ್ಮ ದೇಶವೆ ಎಂಬುದನ್ನು ಒಪ್ಪಿಕೊಂಡಿದೆ. ಭಾರತ ಸರಕಾರ ನೀಡಿದ್ದ ಸಾಕ್ಷ್ಯಾಧಾರಗಳನ್ನು ಹೆಚ್ಚು ಕಡಿಮೆ ಅಂಗೀಕರಿಸಿ ಕ್ರಮಕ್ಕೈಗೊಳ್ಳುವ ಆಶ್ವಾಸನೆ ನೀಡಿದೆ. ಸುಮಾರು ಮೂರು ತಿಂಗಳು ನಿರಾಕರಣೆಯ ಧೋರಣೆಯನ್ನೇ ಪಟ್ಟಾಗಿ ಹಿಡಿದಿದ್ದ ಪಾಕಿಸ್ತಾನ ಸರಕಾರ ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದಿದೆ. ಕಳೆದ ವರ್ಷ ಅಸ್ತಿತ್ವಕ್ಕೆ ಬಂದ ಪಾಕಿಸ್ತಾನದ ಪ್ರಜಾಪ್ರಭುತ್ವ ಸರಕಾರ ಇಂದು ಅಡಕತ್ತರಿಯಲ್ಲಿ ಸಿಕ್ಕಿಕೊಂಡಿದೆ. ಪಾಕಿಸ್ತಾನದಲ್ಲಿ ಬೇರು ಬಿಟ್ಟಿರುವ ಭಯೋತ್ಪಾದನಾ ಸಂಘಟನೆಗಳ ಮೇಲೆ, ತರಬೇತಿ ಕೇಂದ್ರಗಳ ಮೇಲೆ ಕ್ರಮ ಕೈಗೊಳ್ಳುವಂತೆ ಒತ್ತಡ ಹೆಚ್ಚಾಗಿದೆ. ಅಲ್‌ಖೈದಾ ಮತ್ತು ತಾಲಿಬಾನ್‌ಗಳ ಹಾವಳಿ ವಿಪರೀತದ ಮಟ್ಟಕ್ಕೆ ಹೋಗಿದೆ. ದೇಶವನ್ನೇ ಈ ದುಷ್ಟಶಕ್ತಿಗಳು ಕಬಳಿಸಿಯಾವು ಎಂಬ ಭೀತಿಯನ್ನು ಪಾಕಿಸ್ತಾನದ ಅಧ್ಯಕ್ಷ ಅಸಿಫ್ ಅಲಿ ಜರ್ದಾರಿ ಇತ್ತೀಚೆಗೆ ವ್ಯಕ್ತಪಡಿಸಿದ್ದಾರೆ. ಆಫ್ಘಾನಿಸ್ತಾನದ ಈಶಾನ್ಯ ಗಡಿಯಲ್ಲಿ ಅಲ್‌ಖೈದಾ ಮತ್ತು ತಾಲಿಬಾನ್‌ಗಳ ಅಡಗುದಾಣಗಳನ್ನು ಧ್ವಂಸ ಮಾಡುವ ಹೆಸರಿನಲ್ಲಿ ಅಮೆರಿಕಾದ ಸೇನೆ ನಡೆಸುತ್ತಿರುವ ಕ್ಷಿಪಣಿದಾಳಿಯಿಂದಾಗಿ ಈಗಾಗಲೇ ನೂರಾರು ಮಂದಿ ಪಾಕಿಸ್ತಾನಿ ನಾಗರಿಕರು ಹತರಾಗಿದ್ದಾರೆ. ಕಳೆದ ಸೆಪ್ಟೆಂಬರ್ ತಿಂಗಳಿಂದ ಪಾಕಿಸ್ತಾನದ ಸರಹದ್ದಿನ ಮೇಲೆ ೩೦ಕ್ಕಿಂತ ಹೆಚ್ಚು ಕ್ಷಿಪಣಿ ದಾಳಿಗಳು ನಡೆದಿವೆ. ಅಮೆರಿಕಾದ ಈ ದಾಳಿಗಳ ಬಗ್ಗೆ ಪಾಕಿಸ್ತಾನ ಸರಕಾರದ ಪ್ರತಿಭಟನೆಗಳಿಂದ ಯಾವ ಪ್ರಯೋಜನವೂ ಆಗಿಲ್ಲ. ಅದಕ್ಕೆ ಪ್ರತಿಯಾಗಿ ಈ ದಾಳಿಗಳು ಇನ್ನಷ್ಟು ಹೆಚ್ಚುವ ಸಂಭವ ಹೆಚ್ಚಾಗಿದೆ. ಅಮೆರಿಕಾದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಿರುವ ಬರಾಕ್ ಒಬಾಮಾ ಚುನಾವಣೆಯ ಪ್ರಚಾರದ ಸಮಯದಲ್ಲೇ ಅಂಥ ಸೂಚನೆಯನ್ನು ನೀಡಿದ್ದಾರೆ. ತಾಲಿಬಾನ್ ಮತ್ತು ಅಲ್‌ಖೈದಾ ಕಾರ್ಯಕರ್ತರನ್ನು, ಅವರ ಬೆಂಬಲಿಗರನ್ನು ಹತ್ತಿಕ್ಕಲು ಈಗಾಗಲೇ ಆಫ್ಘಾನಿಸ್ತಾನದಲ್ಲಿ ನೆಲೆಗೊಂಡಿರುವ ೪೦ ಸಾವಿರ ಅಮೆರಿಕಾದ ಸೇನೆಯ ಜೊತೆಗೆ ಇನ್ನೂ ೨೦ ಸಾವಿರ ಯೋಧರನ್ನು ಕಳಿಸುವ ವಿಚಾರವನ್ನು ಪ್ರಸ್ತಾಪಮಾಡಿದ್ದಾರೆ. ಅಗತ್ಯಬಿದ್ದರೆ ಭಯೋತ್ಪಾದಕರ ಬೆನ್ನಟ್ಟಿ ಪಾಕಿಸ್ತಾನದೊಳಗೂ ಪ್ರವೇಶಿಸಲು ಅಡ್ಡಿ ಇಲ್ಲ ಎಂದೂ ಹೇಳಿದ್ದಾರೆ. ಅರ್ಥಾತ್ ಪಾಕಿಸ್ತಾನವನ್ನು ಆಕ್ರಮಿಸುವ ಸೂಚನೆ ನೀಡಿದ್ದಾರೆ. ಹಾಗಾಗಿ ಇಂದು ಪಾಕಿಸ್ತಾನ ಎಲ್ಲ ರೀತಿಯಲ್ಲಿಯೂ ಅಳಿವು ಉಳಿವಿನ ಪ್ರಶ್ನೆ ಎದುರಿಸುತ್ತಿದೆ. ಪಾಕಿಸ್ತಾನದ ಮೇಲೆ ಒತ್ತಡ ಹೇರಲು ಅಮೆರಿಕಾ ವಿಶೇಷ ಪ್ರತಿನಿಧಿ ರಿಚರ್ಡ್ ಹೋಲ್‌ಬ್ರೂಕ್‌ರನ್ನು ಉಪಖಂಡಕ್ಕೆ ರವಾನಿಸಿದೆ. ಈತ ಆಫ್ಘಾನಿಸ್ತಾನ ಮತ್ತು ಭಾರತಗಳಿಗೂ ಭೇಟಿ ಕೊಟ್ಟಿದ್ದಾನೆ.

ಪಾಕಿಸ್ತಾನದಲ್ಲಿ ಹಿಂಸಾಚಾರದ ಹಿನ್ನೆಲೆಯಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳ ನಂತರ ಅಸ್ತಿತ್ವಕ್ಕೆ ಬಂದಿರುವ ಪಾಕಿಸ್ತಾನ ಸರಕಾರ ಇನ್ನೂ ತನ್ನ ನೆಲೆ ಕಂಡುಕೊಂಡಿಲ್ಲ. ಸರ್ವಾಧಿಕಾರಿ ಮುಷರಫ್ ಆಡಳಿತವನ್ನು ಅಂತ್ಯಗೊಳಿಸುವುದರಲ್ಲಿ ಸಫಲಗೊಂಡು ಸ್ಥಾಪಿತವಾದ ಪಾಕಿಸ್ತಾನ ಪೀಪಲ್ಸ್ ಪಾರ್ಟಿ ಮತ್ತು ಪಾಕಿಸ್ತಾನ ಮುಸ್ಲಿಮ್ ಲೀಗ್ ಸರಕಾರ ಕಾರ್ಯಾರಂಭ ಮಾಡುವ ಮೊದಲೇ ಕುಸಿಯಿತು. ನವಾಜ್ ಷರೀಫ್ ಮತ್ತು ಜರ್ದಾರಿ ನಡುವಣ ಭಿನ್ನಾಭಿಪ್ರಾಯಗಳಿಂದಾಗಿ ಸಮ್ಮಿಶ್ರ ಸರಕಾರದಲ್ಲಿ ಪಾಲುದಾರನಾಗಿದ್ದ ಪಾಕಿಸ್ತಾನ ಮುಸ್ಲಿಮ್ ಲೀಗ್ ಹೊರಬಂದಿತು. ಹಾಗಾಗಿ ಈಗ ಅಸ್ತಿತ್ವದಲ್ಲಿರುವುದು ಒಂದು ಬಗೆಯಲ್ಲಿ ಅಲ್ಪಮತದ ಸರಕಾರ. ಆದರೆ ನಿಜವಾದ ಅಧಿಕಾರ ಕೇಂದ್ರ ಯಾವುದು ಎನ್ನುವ ಪ್ರಶ್ನೆ ಇದ್ದೇ ಇದೆ. ದೀರ್ಘಕಾಲ ಅಧಿಕಾರದ ಸವಿ ಅನುಭವಿಸಿರುವ ಪಾಕಿಸ್ತಾನದ ಸೇನೆ, ಅದಕ್ಕೆ ಲಗತ್ತಾಗಿರುವ ಗೂಢಚರ್ಯೆ ವಿಭಾಗ (ಐಎಸ್‌ಐ)ದ ಪ್ರಾಬಲ್ಯವನ್ನು ಕಡೆಗಣಿಸುವಂತಿಲ್ಲ. ಹಾಗೆಯೇ ಇಸ್ಲಾಂ ಮೂಲಭೂತವಾದಿಗಳು ಮತ್ತು ಲಷ್ಕರಿ ತೊಯಿಬಾ, ಅಲ್‌ಅಜರ್ ಮೊದಲಾದ ಭಯೋತ್ಪಾದಕ ತಂಡಗಳ ಪ್ರಾಬಲ್ಯವನ್ನು ಅಲ್ಲಗಳೆಯುವಂತಿಲ್ಲ. ಇದರ ಮೇಲೆ ಅಮೆರಿಕಾದ ತೂಗುಕತ್ತಿ ಯಾವಾಗಲೂ ಇದ್ದೇ ಇದೆ. ಮುಂಬಯಿ ದಾಳಿಯ ನಂತರ ಪಾಕಿಸ್ತಾನಿ ಸರಕಾರದ ದೌರ್ಬಲ್ಯ ಸ್ಪಷ್ಟವಾಗಿ ಕಂಡುಬಂದಿತು. ಪಾಕಿಸ್ತಾನಕ್ಕೂ ಮುಂಬಯಿ ಘಟನೆಗೂ ಯಾವ ಸಂಬಂಧವೂ ಇಲ್ಲ ಎಂಬ ನಿರಾಕರಣೆಯಿಂದ ಪ್ರಾರಂಭವಾಗಿ ತಪ್ಪೊಪ್ಪಿಗೆಯವರೆಗೆ ಪಾಕಿಸ್ತಾನಿ ಆಡಳಿತಗಾರರು ನಾನಾಬಗೆಯ ಹೇಳಿಕೆಗಳನ್ನು ನೀಡಿದ್ದೇ ಅದಕ್ಕೆ ಸಾಕ್ಷಿ. ಈಗ ಮುಂದೇನು ಎಂಬುದೇ ಪ್ರಶ್ನೆ. ಭಾರತ-ಪಾಕಿಸ್ತಾನ ಸಂಬಂಧಗಳು ಸಂಪೂರ್ಣವಾಗಿ ನೆಲಕಚ್ಚಿವೆ. ಉಗ್ರಗಾಮಿಗಳ ತಾಣಗಳು ಮತ್ತು ತರಬೇತಿ ಕೇಂದ್ರಗಳನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳುವುದರ ಜೊತೆಗೆ ಪಾಕಿಸ್ತಾನಿ ಸರಕಾರ ಆರೋಪಿಗಳನ್ನು ಭಾರತಕ್ಕೆ ಹಸ್ತಾಂತರಗೊಳಿಸುವವರೆಗೆ ಸಂಬಂಧಗಳು ಸುಧಾರಿಸುವಂತಿಲ್ಲ. ಭಾರತ ಸರಕಾರ ಆತುರದಲ್ಲಿ ಸಾಹಸಕ್ಕೆ ಕೈಹಾಕದೆ, ಒತ್ತಡಗಳಿಗೆ ಮಣಿಯದೆ ಪಾಕಿಸ್ತಾನದ ಮೇಲೆ ರಾಜತಾಂತ್ರಿಕ ಒತ್ತಡ ಹೇರಿ ತಕ್ಕಮಟ್ಟಿಗೆ ಸಫಲಗೊಂಡಿರುವುದು ಶ್ಲಾಘನೀಯ. ಇದೇ ಬಗೆಯಲ್ಲಿ ಪಾಕಿಸ್ತಾನ ಸರಕಾರ ಭಯೋತ್ಪಾದನೆಯ ವಿರುದ್ಧ ಹೋರಾಟದಲ್ಲಿ ಪೂರ್ಣವಾಗಿ ಸಹಕರಿಸುವಂತೆ ಮಾಡಬೇಕಾಗಿದೆ. ಇದು ಸುಲಭವೇನಲ್ಲ. ಭಾರತ ಸರಕಾರ ಈ ಕಾರ್ಯದಲ್ಲಿ ಅಧಿಕವಾಗಿ ಅಮೆರಿಕಾದ ಮೇಲೆ ಅವಲಂಬಿತವಾಗುವುದರಿಂದ ಪ್ರಯೋಜನವಿಲ್ಲ. ಏಕೆಂದರೆ ಅಮೆರಿಕಾಗೆ ಈ ಭೂಭಾಗದಲ್ಲಿ ತನ್ನದೇ ಆದ ಆದ್ಯತೆಗಳಿವೆ. ಆಫ್ಘಾನಿಸ್ತಾನದಲ್ಲಿ ಸಿಕ್ಕಿಬಿದ್ದಿರುವ ಅಮೆರಿಕಾಗೆ ತಾಲಿಬಾನ್ ಉಗ್ರಗಾಮಿಗಳನ್ನು ಎದುರಿಸಲು ಪಾಕಿಸ್ತಾನದ ಬೆಂಬಲ ಅಗತ್ಯವಿದೆ. ಅದಕ್ಕಾಗಿಯೇ ಅದು ಪಾಕಿಸ್ತಾನ ಭಯೋತ್ಪಾದನೆಗೆ ಮೂಲವಾಗಿದೆ ಎಂದು ತಿಳಿದಿದ್ದರೂ ಕಠಿಣ ಕ್ರಮ ಕೈಗೊಳ್ಳಲು ಸಿದ್ಧವಿಲ್ಲ. ಹಾಗಾಗಿ ಭಾರತ ಸರಕಾರ ಎಚ್ಚರಿಕೆಯಿಂದ ಮುಂದುವರಿಯಬೇಕಾಗಿದೆ.





## ಇಸ್ರೇಲಿ ಸರಕಾರಕ್ಕೆ ನರಹತ್ಯೆ ದೋಷ

**ಗಾ**ಜಾಪಟ್ಟಿಯ ಒಂದೂವರೆ ಮಿಲಿಯ ಪ್ಯಾಲಸ್ಟೈನ್ ನಿವಾಸಿಗಳ ಜೀವನವನ್ನು ದುರ್ಭರಗೊಳಿಸಿ, ಅಮಾಯಕ ಜನರ ಮೇಲೆ ದಾಳಿ ನಡೆಸಿ ನರಹತ್ಯೆಗೈದ ಇಸ್ರೇಲಿ ಸರಕಾರ ನಿಜವಾಗಿಯೂ ಅಪರಾಧಿ. ಎರಡನೇ ಮಹಾಯುದ್ಧದ ನಂತರ ನಡೆದ ಬಹುದೊಡ್ಡ ನರಮೇಧ ಇಸ್ರೇಲಿಗಳಿಂದ ಗಾಜಾಪಟ್ಟಿಯಲ್ಲಿ ನಡೆದುಹೋಗಿದೆ. ಇದು ಇಪ್ಪತ್ತೊಂದನೆ ಶತಮಾನದ ನರಮೇಧ ಎಂದು ದಾಖಲಿಸಬಹುದು. ಹತ್ತಾರು ದಿನಗಳ ಕಾಲ ಪ್ಯಾಲಸ್ಟೈನಿನ ಗಾಜಾಪಟ್ಟಿಯಲ್ಲಿ ಹಮಾಸ್‌ನ ಸಂಘಟನೆಯನ್ನು ನಿರ್ಮೂಲಗೊಳಿಸಲು ಇಸ್ರೇಲಿ ವಿಮಾನಗಳು ಬಾಂಬಿನ ಮಳೆಗರೆದು, ಟ್ಯಾಂಕುಗಳನ್ನು ನುಗ್ಗಿಸಿ ದಾಂಧಲೆ ನಡೆಸಿತು. ಅಮಾನುಷವಾದ ರೀತಿಯ ದಿಗ್ಬಂಧನ ಹೇರಿ, ಕುಡಿಯುವ ನೀರು, ವಿದ್ಯುಚ್ಛಕ್ತಿ ಮೊದಲಾದ ಮೂಲ ಸೌಕರ್ಯಗಳನ್ನು ಕಡಿದುಹಾಕಿತು. ಹಾಗಿದ್ದರೂ ನಾಗರಿಕ ಜಗತ್ತು ಅಮೆರಿಕಾ ಕೃಪಾಪೋಷಿತ ಇಸ್ರೇಲಿನ ದೌರ್ಜನ್ಯವನ್ನು ಮೂಕಪ್ರೇಕ್ಷಕನಂತೆ ನೋಡುತ್ತಿದ್ದುದು ಶೋಚನೀಯ. ವಿಶ್ವಸಂಸ್ಥೆಯ ಎಲ್ಲ ಆದೇಶಗಳನ್ನು ಗಾಳಿಗೆ ತೂರುವುದರಲ್ಲಿ ದಾಖಲೆ ಸೃಷ್ಟಿಸಿರುವ ಇಸ್ರೇಲ್‌ಅನ್ನು ಅಂತರರಾಷ್ಟ್ರೀಯ ನ್ಯಾಯಾಲಯದ ಮುಂದೆ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಬೇಕೆಂಬ ಒತ್ತಾಯ ಪ್ರಪಂಚದ ಎಲ್ಲಾ ಕಡೆಯಿಂದ ಈಗ ಬರುತ್ತಿದೆ. ಈ ಚಳವಳಿ ಯಶಸ್ವಿಯಾಗಲಿ ಎಂದು ಹಾರೈಸೋಣ.

ಇಸ್ರೇಲ್ ಹಮಾಸ್ ಸಂಘಟನೆಯನ್ನು ಮುರಿಯಲು ಎಷ್ಟೇ ಉಗ್ರಕ್ರಮ ಕೈಗೊಂಡಿದ್ದರೂ ಅದು ಸಫಲವಾಗಿಲ್ಲ. ಗಾಜಾಪಟ್ಟಿ ಪ್ರದೇಶದಲ್ಲಿ ನ್ಯಾಯಬದ್ಧವಾಗಿ ಅಧಿಕಾರ ನಡೆಸುತ್ತಿದ್ದ ಹಮಾಸ್‌ಅನ್ನು ಭಯೋತ್ಪಾದಕ ಹಣೆಪಟ್ಟಿ ಹಚ್ಚಿ ಮೂಲೋತ್ಪಾಟನೆ ಮಾಡಲು ಹೊರಟ ಇಸ್ರೇಲಿ ಸರಕಾರದ ಕ್ರಮ ನಿಜವಾಗಿಯೂ ಖಂಡನೀಯ. ಇಸ್ರೇಲಿನ ಗುರಿ ಹಮಾಸ್‌ಅನ್ನು ಮುಗಿಸಿ ಪ್ಯಾಲಸ್ಟೈನ್ ಪ್ರದೇಶವನ್ನು ವಿಭಜಿಸಿ ತನ್ನ ಅಧೀನದಲ್ಲಿರಿಸಿಕೊಳ್ಳುವುದಾಗಿತ್ತು. ಈ ಹೀನ ಕೃತ್ಯಕ್ಕೆ ಅಮೆರಿಕಾದ ಬೆಂಬಲ ಕುಮ್ಮಕ್ಕು ಇದ್ದುದು ಸರ್ವವಿದಿತ. ಇಂಥ ದೌರ್ಜನ್ಯ ಎಸಗುತ್ತಿರುವ ಇಸ್ರೇಲಿನ ಸರಕಾರದೊಂದಿಗೆ ಭಾರತ ಸರಕಾರ ಇನ್ನೂ ವ್ಯವಹಾರ ಮುಂದುವರಿಸುತ್ತಿರುವುದು ವಿಷಾದನೀಯ. ಮೊದಲಿನಿಂದಲೂ ಪ್ಯಾಲಸ್ಟೈನ್ ವಿಮೋಚನೆಗೆ ಬೆಂಬಲ ನೀಡುತ್ತ ಬಂದಿದ್ದ ಭಾರತದ ನೀತಿಗೆ ಏನಾಗಿದೆ ? ಸರಕಾರ ಈಗಲಾದರೂ ಎಚ್ಚೆತ್ತು ಇಸ್ರೇಲಿನೊಂದಿಗೆ ವ್ಯವಹಾರಗಳನ್ನು ಸ್ಥಗಿತಗೊಳಿಸಿ, ಪ್ಯಾಲಸ್ಟೈನ್ ಜನತೆಗೆ, ಅವರ ನ್ಯಾಯವಾದ ಬೇಡಿಕೆಗೆ ಬೆಂಬಲ ನೀಡುವುದು ಅಗತ್ಯ.

ಪ್ಯಾಲಸ್ಟೈನನ್ನು ನಾಶಮಾಡಹೊರಟು ಇಸ್ರೇಲಿನ ಸರಕಾರ ನರಹತ್ಯಾದೋಷಕ್ಕೀಡಾಗಿದೆ ಎಂದು ಬಣ್ಣಿಸಬಹುದು. ಇತ್ತೀಚೆಗೆ ನಡೆದ ಚುನಾವಣೆಗಳಲ್ಲಿ ಯಾವ ಒಂದು ಪಕ್ಷಕ್ಕೂ ಸ್ಪಷ್ಟವಾದ ಬಹುಮತ ಇಲ್ಲವಾಗಿದೆ. ೧೨೦ ಸ್ಥಾನಗಳನ್ನು ಹೊಂದಿರುವ ಇಸ್ರೇಲಿನ ಪಾರ್ಲಿಮೆಂಟ್ 'ನೆಸೆಟ್'ನಲ್ಲಿ ಅತಂತ್ರ ಪರಿಸ್ಥಿತಿ ಉಂಟಾಗಿದೆ. ಕಳೆದ ಹತ್ತು ವರ್ಷಗಳಲ್ಲಿ ಐದು ಬಾರಿ ಸಾರ್ವತ್ರಿಕ ಚುನಾವಣೆಗಳು ನಡೆದಿದ್ದರೂ ಪರಿಸ್ಥಿತಿ ಮಾತ್ರ ಬದಲಾಗಿಲ್ಲ. ಸಮ್ಮಿಶ್ರ ಸರಕಾರವೊಂದೇ ಗತಿಯಾಗಿದ್ದು ಅವು ಅಲ್ಪಾಯುವಾಗಿಯೇ ಇವೆ. ಬಲಪಂಥೀಯ ಪಕ್ಷಗಳಾದ ಕಾದಿಮಾ ಪಾರ್ಟಿ ೨೮ ಸ್ಥಾನಗಳನ್ನು, ಲೇಬರ್ ಪಾರ್ಟಿ ೨೭ ಸ್ಥಾನಗಳನ್ನೂ, ಇಸ್ರೇಬೈಟಿನು ಪಾರ್ಟಿ ೧೫ ಸ್ಥಾನಗಳನ್ನು ಪಡೆದುಕೊಂಡಿವೆ. ಎಡಪಕ್ಷಗಳು, ಸುಧಾರಣಾವಾದಿ ಪಕ್ಷಗಳು ಉಳಿದ ಸ್ಥಾನಗಳನ್ನು ಗಳಿಸಿವೆ. ಬಲಪಂಥೀಯ ಪಕ್ಷಗಳು ಇಸ್ರೇಲಿನ ವಿಸ್ತರಣಾವಾದಿ ಧೋರಣೆಗೆ ಬದ್ಧವಾಗಿದ್ದು, ಪ್ಯಾಲಸ್ಟೈನ್ ಜನತೆಯ ಬೇಡಿಕೆಯನ್ನು ಹತ್ತಿಕ್ಕುವ ಗುರಿಹೊಂದಿವೆ. ಆದರೆ ಕಳೆದ ಅರ್ಧ ಶತಮಾನದಿಂದ, ಎಂದರೆ ಇಸ್ರೇಲಿನ ಸ್ಥಾಪನೆಯಾದ ದಿನದಿಂದ ಯುದ್ಧದ ವಾತಾವರಣದಲ್ಲೇ ಬದುಕು ಸಾಗಿಸುತ್ತಿರುವ ಜನತೆ ಬೇಸತ್ತಿದ್ದಾರೆ. ಶಾಂತಿಯನ್ನು ಬಯಸುತ್ತಿರುವ ಇಸ್ರೇಲಿನ ಜನಸಾಮಾನ್ಯರು ಪ್ಯಾಲಸ್ಟೈನ್ ವಿವಾದಕ್ಕೆ ಪರಿಹಾರ ಕಾಣಲು ಬಯಸುತ್ತಿದ್ದಾರೆ. ಇದಕ್ಕೆ ಅಮೆರಿಕಾದ ಬೆಂಬಲ ಎಷ್ಟುಮಟ್ಟಿಗೆ ದಕ್ಕೀತು ಎಂಬುದೇ ಸಂದೇಹ. ಈ ಪ್ರದೇಶದಲ್ಲಿ ಅಮೆರಿಕಾ ನಿಷ್ಠಾವಂತ ಪರಿಚಾರಕನಂತಿರುವ ಇಸ್ರೇಲನ್ನು ಬಿಟ್ಟುಕೊಡಲು ಅಮೆರಿಕಾ ಸಿದ್ಧವಿದೆಯೇ ? ಇದು ಬಗೆಹರಿಯದ ಪ್ರಶ್ನೆ. ಒಟ್ಟಿನಲ್ಲಿ ಈಗ ಇಸ್ರೇಲಿನಲ್ಲಿ ಯಾವುದೇ ಸಮ್ಮಿಶ್ರ ಸರಕಾರ ಅಸ್ತಿತ್ವಕ್ಕೆ ಬಂದರೂ ಪರಿಸ್ಥಿತಿ ಬದಲಾಗದು.

ಸೀಯಾರ್ಕೆ
'ಚೌಬೀಸ', ೪೮೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಬುದ್ಧ ಮತ್ತು ಬಂದೂಕು

**ಆ**ದಾಗ ತಾನೆ ಗುಂಡು ಸಿಡಿದು
ಸುಮ್ಮನಾಗಿದೆ ಬಂದೂಕು
ಬಿಸಿ ಹೊಗೆ ನಳಿಕೆಯೊಳಗಿಂದ ಸ್ವಲ್ಪ-ಸ್ವಲ್ಪವೆ ಹೊರಬರುತ್ತಿದೆ
ಬಂದೂಕಿನ ನಳಿಕೆಯನ್ನು ಸವರಿದ ಬುದ್ಧ
ಕೈಬೆರಳು ತಾಕಿದಂತೆ ನಳಿಕೆಯ ಬಾಯೊಳಗಿಂದ
'ಬುದ್ಧಂ ಶರಣಂ ಗಚ್ಛಾಮಿ' ಎಂಬ ತಂಪಾದ ಮನವಿ ಕೇಳುತ್ತಿದೆ

ದೂರದಲ್ಲೆಲ್ಲೋ ಜನರ ಗುಂಪಿನಿಂದ ಆಕ್ರಂದನ ಕೇಳಿಸುತ್ತಿರುವಂತೆ
ಕಿಸಾಗೋತಮಿ ಸೆರಗಲ್ಲಿ ಸಾಸಿವೆ ತುಂಬಿಕೊಂಡು
ಗದ್ದಲ ಬಂದಕಡೆ ದಾಪುಗಾಲು ಹಾಕುತ್ತಿರುವಂತೆ
ಅಲ್ಲಮ ಬಸವಾದಿ ಶರಣರು ಗಾಂಧಿ -
ಅಂಬೇಡ್ಕರರು ಆ ಕಡುಗತ್ತಲಲ್ಲಿ ಏನನ್ನೊ ಮಾತನಾಡಿಕೊಳ್ಳುತ್ತಿದ್ದಾರೆ
ಆನಂದನು ಮಾತ್ರ ಸಣ್ಣ ಬೆಳಕನ್ನು ದೀಪವೊಂದರಲ್ಲಿ
ತುಂಬಿಕೊಂಡು ಅತ್ತ ಕಡೆ ಬೊಗಸೆಯಲ್ಲಿ ಕಾಪಾಡಿಕೊಂಡು
ಹೊತ್ತು ತರುತ್ತಿದ್ದಾನೆ

ಸಿಡಿದುಕೊಂಡ ಬಂದೂಕಿನ ಗುಂಡು
ಜನರ ನಡುವೆ ಅನಾಥವಾಗಿ ಬಿದ್ದುಕೊಂಡಿರುವಂತೆ
ಆ ಗುಂಡಿನ ಸುತ್ತ ಹಸಿ ಮಾಂಸ ಬೆಳೆದು
ಕೆಂಪಾದ ರಕ್ತ ನಗುತ್ತ ನಿಗಿನಿಗಿ ಹೊಳೆಯುತ್ತಿದೆ

ಮತ್ತೆ ಬೋಧಿ ವೃಕ್ಷ ತನ್ನೆಲೆಗಳನ್ನು
ಉದುರಿಸಿಕೊಂಡು ಬೋಳಾಗುತ್ತಿದೆ
ಕಿಸಾಗೋತಮಿ ಆನಂದ ಗಾಂಧಿ - ಅಂಬೇಡ್ಕರರು
ಮರದ ಆ ನಾಲ್ಕು ದಿಕ್ಕುಗಳಲ್ಲಿ ಮಾತಾಡದೆ ಕೂತಿದ್ದಾರೆ

ಗಾಂಧಿಯ ಬಗಲಲ್ಲಿ ಅಹಿಂಸೆ, ಅಂಬೇಡ್ಕರರ ಕೈಯಲ್ಲಿ ಸಮಾನತೆ
ಆನಂದನ ಕಣ್ಣಲ್ಲಿ ಶಾಂತಿ ಮತ್ತು ಕಿಸಾಗೋತಮಿಯ
ಸೆರಗಲ್ಲಿ ಸಾವಿರದ ಮನೆಯ ಸಾಸಿವೆ ಕಾಳಿಗಾಗಿ...
ಎಂಬಂತಹ ಮನವಿ ಪತ್ರಗಳು ಬೆಚ್ಚಗೆ ಕೂತಿವೆ

ಮುಂದಿನ ಸರದಿ ನಮ್ಮದೆ ಎಂದು
ಅಲ್ಲಮ ಬಸವ ಅಕ್ಕಮಹಾದೇವಿ ಕಾಯುತ್ತಿರುವಂತೆ...

ಗುಂಡು ತಗುಲಿದ ವ್ಯಕ್ತಿಯನ್ನು
ಹೊತ್ತು ಅತ್ತ ಕಡೆ ಬರುತ್ತಿದ್ದಾನೆ ಬುದ್ಧ
ಹೆಣವಾದವನ ಮುಖದಲ್ಲಿ ಕೊನೆಯ ನಗು
ಅಚ್ಚೊತ್ತಿಕೊಂಡು ಕುಳಿತಿದೆ.
ಪ್ರಾಣ ಪಕ್ಷಿ ಮಾತ್ರ ರೆಕ್ಕೆ ಬಿಚ್ಚಿಕೊಂಡು
ಹಾರಿಹೋಗಲು ತಾಲೀಮು ನಡೆಸುತ್ತಿದೆ

ಬಂದೂಕು ಮಾತ್ರ ಏನೂ ನಡೆದಿಲ್ಲವೆಂಬಂತೆ
ಆ ಬೋಧಿ ವೃಕ್ಷದ ಉದ್ದದ ನೆರಳಲ್ಲಿ ಬಿದ್ದುಕೊಂಡಿದೆ
ಗುಂಡು ಮಾತ್ರ ಗುಂಡಿಗೆಯ ಆಳದಲ್ಲಿ
ಆರದ ಗಾಯವೊಂದನ್ನು ಸೃಷ್ಟಿಮಾಡುತ್ತಿದೆ

ಲಕ್ಕೂರು ಆನಂದ
'ಪದ್ಮಗೌರಿ', ಪೋಲೀಸ್ ಸ್ಟೇಷನ್ ಎದುರು
ಲಕ್ಕೂರು ಪೋಸ್ಟ್ - ೫೬೩ ೧೬೦
ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ

# ಸಾರ್ವಜನಿಕ ಸಂವಹನದಲ್ಲಿ ಸ್ವಾತಂತ್ರ್ಯದ ಪ್ರಶ್ನೆ

ಬಂಧನ ಯಾರಿಗೂ ಪ್ರಿಯವಾದುದಲ್ಲ. ಪ್ರತಿಯೊಂದು ಜೀವಿಯೂ ಸ್ವಾತಂತ್ರ್ಯವನ್ನು ಬಯಸುತ್ತದೆ. ಸ್ವಾತಂತ್ರ್ಯ ಎಂಬುದು ಪ್ರಗತಿಗೆ, ಜೀವ ವಿಕಾಸಕ್ಕೆ ಹೆದ್ದಾರಿ. ಪರಸ್ಪರ ಗೌರವಕ್ಕೆ, ಪ್ರೀತಿಗೆ, ಸಮಾನತೆಗೆ ಸ್ವಾತಂತ್ರ್ಯವೇ ಮುಖ್ಯವಾದದ್ದು. ಸ್ವಾತಂತ್ರ್ಯ ಎನ್ನುವುದು ಸಹಜವಾದ ಸ್ಥಿತಿ. ಅದು ನಿಸರ್ಗದತ್ತವಾದದ್ದು. ಗಿಡ, ಮರ, ಬಳ್ಳಿಗಳು ತಮ್ಮ ಸ್ವಾತಂತ್ರ್ಯವನ್ನು ಪ್ರತಿಪಾದಿಸುವುದಿಲ್ಲ, ಅನುಭವಿಸುತ್ತವೆ. ಆಕಾಶಕ್ಕೆ ರೆಕ್ಕೆ ತೆರೆದ ಹಕ್ಕಿಗೆ ಯಾರೂ ಸ್ವಾತಂತ್ರ್ಯದ ಪಾಠವನ್ನು ಹೇಳಿಕೊಡಬೇಕಾಗಿಲ್ಲ. ಆಕಾಶಕ್ಕೆ ಸೀಮಾರೇಖೆಗಳಿಲ್ಲ. ಬಯಲಲ್ಲಿ ಬೀಸುವ ಗಾಳಿಗೆ ಬಂಧನವೆಂದರೇನೆಂದು ತಿಳಿದಿಲ್ಲ. ಬಾನಲ್ಲಿ ಉರಿಯುವ ಸೂರ್ಯ ಸರ್ವತಂತ್ರ ಸ್ವತಂತ್ರ.

ಆದಿಮಾನವನೂ ಸಹಜವಾಗಿ, ಸ್ವತಂತ್ರವಾಗಿಯೇ ಬದುಕಿದ್ದ. ನಿಧಾನಕ್ಕೆ ನಾಗರಿಕತೆ ಕಾಲಿಟ್ಟಂತೆ, ಅವನು ಸ್ವಾರ್ಥಿಯಾದಂತೆ, ಆಕ್ರಮಣಶೀಲತೆ ಆರಂಭವಾಯಿತು. ತನ್ನ ಗಡಿರೇಖೆಗಳನ್ನು ಗುರುತಿಸಿಕೊಳ್ಳುತ್ತಲೇ ಅನ್ಯರ, ಅನ್ಯ ಜೀವಿಗಳ ಸೀಮಾರೇಖೆಗಳನ್ನು ಉಲ್ಲಂಘಿಸಿದ. ಮನುಷ್ಯ ಹೆಚ್ಚು ಹೆಚ್ಚು ಯೋಚಿಸುವ, ಚಿಂತಿಸುವ, ತರ್ಕಿಸುವ, ಸಂವಾದಿಸುವ ಗುಣಗಳನ್ನು ಪಡೆದುಕೊಂಡಂತೆಲ್ಲ ಈ ಸ್ವಾತಂತ್ರ್ಯದ ಪ್ರಶ್ನೆ ಹೆಚ್ಚು ಮೌಲಿಕವಾಗತೊಡಗಿತು.

ವ್ಯಕ್ತಿ ಸ್ವಾತಂತ್ರ್ಯಕ್ಕಿಂತ ಸಮುದಾಯದ ಸ್ವಾತಂತ್ರ್ಯ ಭಿನ್ನವಾದದ್ದು. ಸಮುದಾಯದ ಸ್ವಾತಂತ್ರ್ಯಕ್ಕೂ ರಾಜ್ಯ ಹಾಗೂ ರಾಷ್ಟ್ರಗಳ ಸ್ವಾತಂತ್ರ್ಯಕ್ಕೂ ವ್ಯತ್ಯಾಸವಿದೆ. ಹಾಗೆಯೇ ಸರ್ವಾಧಿಕಾರಿಗಳಿರುವ ರಾಷ್ಟ್ರದಲ್ಲಿನ ಸ್ವಾತಂತ್ರ್ಯಕ್ಕೂ, ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿನ ಸ್ವಾತಂತ್ರ್ಯಕ್ಕೂ ವ್ಯತ್ಯಾಸ ಸೂಕ್ಷ್ಮಗಳಿವೆ.

ನಮ್ಮದು ಪ್ರಜಾಪ್ರಭುತ್ವ ರಾಷ್ಟ್ರ. ೧೯೭೦ರ ದಶಕದ ಮಧ್ಯಭಾಗದಲ್ಲಿ ಸರ್ವಾಧಿಕಾರದ ಒಂದು ಕರಿನೆರಳು ನಮ್ಮಲ್ಲಿ ಸುಳಿದು ಹೋದದ್ದು (ಇಂದಿರಾ ಗಾಂಧಿಯವರು ಹೇರಿದ ತುರ್ತು ಪರಿಸ್ಥಿತಿಯ ಕಾರಣದಿಂದಾಗಿ) ಬಿಟ್ಟರೆ, ಸುಮಾರು ಆರು ದಶಕಗಳ ನಮ್ಮ ಪ್ರಜಾಪ್ರಭುತ್ವ ನಿರಾತಂಕವಾಗಿ ನಡೆದುಕೊಂಡು ಬಂದಿದೆ ಎಂದು ಹೇಳಬಹುದು. ನಮ್ಮ ನೆರೆಯ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಅನೇಕ ಏಳುಬೀಳುಗಳನ್ನು ಕಂಡಿದೆ; ಸರ್ವಾಧಿಕಾರಿಗಳು ಬಂದು ಹೋಗಿದ್ದಾರೆ. ಆ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ನಲುಗಿಹೋಗಿದೆ. ಇನ್ನೂ ಪ್ರಜಾಪ್ರಭುತ್ವವನ್ನು ಸರಿಯಾಗಿ ಸ್ಥಾಪಿಸಲು ಆ ರಾಷ್ಟ್ರಗಳು ಹೆಣಗುವುದನ್ನು ನಾವು ನೋಡುತ್ತಲೇ ಇದ್ದೇವೆ. ಅಂಥ ಸಂದರ್ಭಗಳಲ್ಲೆಲ್ಲ ನಮಗೆ ಪ್ರಜಾಪ್ರಭುತ್ವದ ಮಹತ್ವ ಮನವರಿಕೆಯಾಗುತ್ತಲೇ ಇದೆ.

ನಮ್ಮದು ಇಡೀ ವಿಶ್ವದಲ್ಲಿಯೇ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ ಎಂಬ ಹೆಗ್ಗಳಿಕೆ. ಜೊತೆಗೆ ಭಾಷೆ, ಬಣ್ಣ, ಸಂಸ್ಕೃತಿ, ಜೀವನ ವಿಧಾನ, ನಂಬಿಕೆಗಳು, ಧರ್ಮ, ಜಾತಿ, ವರ್ಗ, ಬುಡಕಟ್ಟು ಹೀಗೆ ಹಲವಾರು ವೈವಿಧ್ಯತೆಗಳು ನಮ್ಮ ರಾಷ್ಟ್ರದ ಒಟ್ಟಂದವನ್ನು ಹೆಚ್ಚಿಸಿವೆ; ನಮ್ಮ ಪ್ರಜಾಪ್ರಭುತ್ವದ ಸವಾಲುಗಳನ್ನು ಸಂಕೀರ್ಣಗೊಳಿಸಿವೆ. ಹೀಗಾಗಿ ಇಲ್ಲಿ ಪ್ರಜಾಪ್ರಭುತ್ವದ ನಿರ್ವಹಣೆ ಅತ್ಯಂತ ಜಟಿಲವಾದ, ಸಂಕಷ್ಟಕರವಾದ ಹೊಣೆಗಾರಿಕೆಯಾಗಿದೆ. ವ್ಯಕ್ತಿ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯ ಸಾರ್ವಜನಿಕ ಸಂವಹನ ಹೀಗೆ ಯಾವುದೇ ವಿಚಾರಕ್ಕೂ ಇಲ್ಲಿ ಏಕಮುಖೀ ಆಯಾಮವಿರುವುದು ಸಾಧ್ಯವಿಲ್ಲ. ಹೀಗಾಗಿಯೇ ಮತ್ತೆ ಮತ್ತೆ ಚಿಂತನೆ, ಸಂವಾದ, ಚರ್ಚೆ, ವಿಚಾರ ವಿನಿಮಯ ನಡೆಯುತ್ತ, ಓರೆಕೋರೆಗಳನ್ನು ತಿದ್ದಿಕೊಳ್ಳುತ್ತ ಪ್ರಜಾಪ್ರಭುತ್ವವನ್ನು ಕಾಯ್ದುಕೊಳ್ಳುತ್ತ, ಪ್ರಗತಿಯನ್ನು ಸಾಧಿಸಬೇಕಾದ ಸಂದರ್ಭದಲ್ಲಿ ನಾವಿದ್ದೇವೆ.

೨

ಭಾಷಣ, ಚರ್ಚೆ, ಹಾಡು, ಚಿತ್ರ, ನಾಟಕ, ಸಿನಿಮಾ, ಸಂಗೀತ, ಕಲೆ, ಸಾಹಿತ್ಯ, ಪತ್ರಿಕೆ, ಆಕಾಶವಾಣಿ, ದೂರದರ್ಶನ, ಗೋಡೆ ಬರಹ, ಕರಪತ್ರ, ಮೊಬೈಲ್, ಇಂಟರ್‌ನೆಟ್ ಇತ್ಯಾದಿ ಎಲ್ಲವೂ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಸಾರ್ವಜನಿಕ ಸಂವಹನದ ಸಾಧನಗಳೇ. ಸರ್ವಾಧಿಕಾರವಿರುವ ರಾಷ್ಟ್ರಗಳಲ್ಲಿ ಸಾರ್ವಜನಿಕ ಸಂವಹನಕ್ಕೆ ತೀರ ಸೀಮಿತವಾದ ಸಾಧ್ಯತೆಗಳಿದ್ದರೆ, ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಈ ಸಾಧನಗಳಿಗಿರುವ ಸಾಧ್ಯತೆ ಅಪಾರವಾದದ್ದು. ನಾವು ಹೆಚ್ಚು ಹೆಚ್ಚು ಆಧುನಿಕರಾದಂತೆ, ವೈಜ್ಞಾನಿಕ ಪ್ರಗತಿ ಹೆಚ್ಚುತ್ತಹೋದಂತೆ ಸಾರ್ವಜನಿಕ ಸಂವಹನ ಸುಲಭವಾಗುತ್ತಿರುವುದು ಮತ್ತು ಹೆಚ್ಚು ಹೆಚ್ಚು ಪ್ರಭಾವಶಾಲಿಯಾಗುತ್ತಿರುವುದನ್ನೂ ಗಮನಿಸಬಹುದು. ವಿಜ್ಞಾನ ಜಗತ್ತಿನ ಮಹತ್ವದ ಸಾಧನೆಯಾದ ಉಪಗ್ರಹಗಳು ಕಾರಣವಾಗಿ ನಮ್ಮ ಸಾರ್ವಜನಿಕ ಸಂವಹನ ಹೆಚ್ಚು ಸರಾಗವಾಗಿದೆ; ಸಂವಹನದ ವೇಗವೂ ಹೆಚ್ಚಿದೆ. ಹೀಗಾಗಿಯೇ ಸಾರ್ವಜನಿಕ ಸಂವಹನದ ಸ್ವರೂಪ ತೀರ ಸಂಕೀರ್ಣವಾಗಿದೆ; ಅದು ತಂದೊಡ್ಡುವ ಸಮಸ್ಯೆಗಳ ಜಟಿಲತೆಯೂ ಹೆಚ್ಚಿದೆ.

ಆರ್ಥಿಕವಾಗಿ, ವೈಜ್ಞಾನಿಕವಾಗಿ ಮುಂದುವರಿದ ಅಮೆರಿಕಾ, ಬ್ರಿಟನ್, ಜರ್ಮನಿ ಮೊದಲಾದ ರಾಷ್ಟ್ರಗಳಲ್ಲಿ ಸಾರ್ವಜನಿಕ ಸಂವಹನದ ಸ್ವರೂಪ ಬೇರೆಯದೇ ಆಗಿರುತ್ತದೆ. ವೈಜ್ಞಾನಿಕವಾಗಿ ಮುಂದುವರಿದಿದ್ದರೂ ಆರ್ಥಿಕವಾಗಿ ಮತ್ತು ಇತರ ಕಾರಣಗಳಿಂದ ಇನ್ನೂ ಹಿಂದುಳಿದಿರುವ ಭಾರತದಂಥ ರಾಷ್ಟ್ರಗಳಲ್ಲಿ ಈ ಸಂವಹನದ ನೆಲೆ ಇನ್ನೂ ಭಿನ್ನವಾಗಿರುತ್ತದೆ. ಅಮೆರಿಕಾದ ಅಧ್ಯಕ್ಷರ ಆಯ್ಕೆಯಲ್ಲಿ ಅಭ್ಯರ್ಥಿಗಳು ನಡೆಸುವ ಟಿವಿಯ ಸಂವಾದ, ಚರ್ಚೆ, ಭಾಷಣಗಳು ಮತದಾರರ ಮೇಲೆ ತೀವ್ರವಾದ ಪರಿಣಾಮ ಬೀರುವುದನ್ನು ನಾವು ನೋಡುತ್ತೇವೆ. ಆದರೆ ಭಾರತದಲ್ಲಿ ಇಂಥ ಸಂವಾದಗಳು ಮತವನ್ನು ತಂದೇ ತರುತ್ತವೆ ಎಂದು ಹೇಳಲು ಬರುವುದಿಲ್ಲ. ನಮ್ಮಲ್ಲಿಯ ಮತದಾರರ ಒಲವು ನಿಲುವುಗಳನ್ನು ರೂಪಿಸುವ ಅಂಶಗಳು ಮತ್ತು ಸಾಧನಗಳು ಬೇರೆಯೇ ಆಗಿರುತ್ತವೆ. ಟಿವಿಯನ್ನು ನೋಡದ ಮತ್ತು ಪತ್ರಿಕೆಗಳನ್ನು ಓದದವರ ದೊಡ್ಡ ಸಂಖ್ಯೆಯೇ ನಮ್ಮಲ್ಲಿದೆ. ಟಿವಿಯನ್ನು ನೋಡಿದರೂ ಅದು ಮನರಂಜನೆಗಾಗಿಯೇ ಎಂಬ ಪರಿಸ್ಥಿತಿಯೂ ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ಇನ್ನೂ ಇರುವುದನ್ನು ನಾವೆಲ್ಲ ಬಲ್ಲೆವು.

೩

ಅಭಿವ್ಯಕ್ತಿ ಸ್ವಾತಂತ್ರ್ಯ ಎಂಬುದು ಪ್ರಜಾಪ್ರಭುತ್ವದ ಜೀವಾಳ. ಸಾರ್ವಜನಿಕ ಸಂವಹನದಲ್ಲಿಯೂ ಅಭಿವ್ಯಕ್ತಿ ಸ್ವಾತಂತ್ರ್ಯ ಪ್ರಧಾನ ಪಾತ್ರವನ್ನೇ ವಹಿಸುತ್ತದೆ. ಹಾಗೆಂದು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಮಿತಿ ಮೇರೆಗಳು ಇಲ್ಲವೆಂದು ಹೇಳಲು ಬರುವುದಿಲ್ಲ. ವ್ಯಕ್ತಿ ಸಮುದಾಯದ ಒಂದು ಭಾಗವಾಗಿ, ಸಮುದಾಯ ರಾಷ್ಟ್ರದ ಒಂದು ಭಾಗವಾಗಿ ಇರುವುದರಿಂದ, ವ್ಯಕ್ತಿ ಯಾವಾಗಲೂ ಸಮುದಾಯ ಮತ್ತು ರಾಷ್ಟ್ರದ ಚೌಕಟ್ಟಿನಲ್ಲಿಯೇ ವ್ಯವಹರಿಸಬೇಕಾಗುತ್ತದೆ. ಇದೆಲ್ಲವನ್ನೂ ಗಮನಿಸಿಯೇ ನಮ್ಮ ಸಂವಿಧಾನವನ್ನು ರೂಪಿಸಲಾಗಿದೆ. ವ್ಯಕ್ತಿಸ್ವಾತಂತ್ರ್ಯಕ್ಕೆ ಇರಬಹುದಾದ ಮಿತಿಗಳನ್ನು ಸೂಚಿಸುತ್ತಲೇ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸಕಾರಣ ನಿರ್ಬಂಧಗಳನ್ನು ವಿಧಿಸಲಾಗಿದೆ. ಸೃಜನಶೀಲತೆ ಚಿಗುರೊಡೆಯುವುದೇ ಮುಕ್ತ ವಾತಾವರಣದಲ್ಲಿ; ಸ್ವಾತಂತ್ರ್ಯ ಎಂಬುದು ಅದರ ಉಸಿರು. ಆದರೆ ಯಾವುದೇ ಸೃಜನಶೀಲ ಕೃತಿಯೂ ಅಂತಿಮವಾಗಿ ತಲುಪಬೇಕಾದದ್ದು ಜನಸಮುದಾಯಕ್ಕೇ ಎಂಬುದನ್ನು ಎಲ್ಲ ಸೃಜನಶೀಲರೂ ಬಲ್ಲರು. ಹಾಗೆಯೇ 'ಸಮುದಾಯದ ಹಿತ'ವೂ ಸೃಜನಶೀಲತೆಯ ಹಿಂದೆ ಕ್ರಿಯಾಶೀಲವಾಗಿರುತ್ತದೆ. ಪ್ರಜಾಪ್ರಭುತ್ವದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಎನ್ನುವುದು ಮೂಲಭೂತವಾದ ಹಕ್ಕು. ಇದನ್ನು ಸಂವಿಧಾನ ಮಾನ್ಯ ಮಾಡುತ್ತಲೇ ಹೊಣೆಗಾರಿಕೆಯನ್ನೂ ಹೇಳುತ್ತದೆ. ಹೀಗಾಗಿಯೇ ಸೃಜನಶೀಲರು ತಮಗೆ ತಾವೇ

ಜಿ. ಪಿ. ಬಸವರಾಜು

ನಿರ್ಬಂಧಗಳನ್ನು ಹೇರಿಕೊಳ್ಳಬೇಕಾಗುತ್ತದೆ; ತಾವೇ ಕೆಲವು ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗುತ್ತದೆ.

ಈ ಕಾರಣದಿಂದಾಗಿಯೇ ಅಭಿವ್ಯಕ್ತಿ ಸ್ವಾತಂತ್ರ್ಯ ಎನ್ನುವುದು ಮೇಲಿಂದ ಮೇಲೆ ಚರ್ಚೆಗೆ ಒಳಪಡುತ್ತದೆ; ಹಲ ಬಗೆಯ ಸಂವಾದಗಳ, ವಾಗ್ವಾದಗಳ, ಘರ್ಷಣೆಗಳ ಹುಟ್ಟಿಗೆ ಕಾರಣವೂ ಆಗುತ್ತದೆ. ಅರ್ಥಪೂರ್ಣ ಸಂವಾದಗಳು ಪ್ರಜಾಪ್ರಭುತ್ವದ ಬೆಳವಣಿಗೆಗೆ, ರಾಷ್ಟ್ರದ ಚಲನೆಗೆ ಅಗತ್ಯ ಕೂಡ. ಆದರೆ ಸಂವಾದದ ಬದಲು ಅಸಹನೆ, ಹಿಂಸೆ, ಘರ್ಷಣೆಗಳು ಉಂಟಾದರೆ ಅದು ರಾಷ್ಟ್ರಜೀವನಕ್ಕೆ ಮಾರಕವೂ ಆಗುತ್ತದೆ. ಅಹಿಂಸೆಯನ್ನು, ಬಹುತ್ವವನ್ನು ಅರ್ಥಮಾಡಿಕೊಳ್ಳದ ನಾವು ಮೇಲಿಂದ ಮೇಲೆ ಘರ್ಷಣೆಗೆ ದಾರಿ ಮಾಡಿಕೊಡುತ್ತಿರುವುದು ಇತ್ತೀಚಿನ ವರ್ಷಗಳಲ್ಲಿ ಕಂಡುಬರುತ್ತದೆ. ಸಂವಿಧಾನದ ಬಗ್ಗೆ ನಮಗೆ ಎಚ್ಚರವಿದ್ದೂ ಅದನ್ನು ಸರಿಯಾದ ರೀತಿಯಲ್ಲಿ ತಿಳಿಯುವ ಮತ್ತು ಗೌರವಿಸುವ ಹೊಣೆಗಾರಿಕೆಯೇ ಮರೆಯಾಗಿ ಎಲ್ಲೆಲ್ಲೂ ಹಿಂಸಾ ಕೃತ್ಯಗಳು ಕಾಣಿಸುತ್ತಿವೆ. ನಮ್ಮ ರಾಷ್ಟ್ರ ಮುನ್ನಡೆಯನ್ನು ಕಾಣುವ ಬದಲು ಹಿಮ್ಮುಖ ಚಲನೆಗೆ ಸಿದ್ಧವಾಗುತ್ತಿದೆಯೇನೋ ಎಂಬ ಅನುಮಾನ ಉಂಟಾಗುವ ಬೆಳವಣಿಗೆಗಳನ್ನು ನಾವು ನೋಡುತ್ತಿದ್ದೇವೆ. ಪ್ರಜಾಪ್ರಭುತ್ವವನ್ನು ಮತ್ತು ಅದನ್ನು ಮುನ್ನಡೆಸಬಲ್ಲ ಸಂವಿಧಾನವನ್ನು ನಾವು ಮಾನ್ಯಮಾಡಬೇಕು. ಅದು ನಮ್ಮ ಪರಮಗುರಿ ಮತ್ತು ಕರ್ತವ್ಯವಾಗಬೇಕು. ಹಾಗಾದಾಗಲೇ ನಮ್ಮ ಮತ್ತು ನಮ್ಮ ರಾಷ್ಟ್ರದ ಉಳಿವು. ಈ ಎಚ್ಚರ ಎಲ್ಲರಲ್ಲೂ ಇರುವುದು ಒಳ್ಳೆಯದು.

೪

ಅಂತರರಾಷ್ಟ್ರೀಯ ಖ್ಯಾತಿಯ ಎಂ.ಎಫ್. ಹುಸೇನ್ ತನ್ನದೇ ರಾಷ್ಟ್ರವಾದ ಭಾರತದಲ್ಲಿ ಬದುಕಲಾಗದೆ ದುಬೈ ಮತ್ತು ಬ್ರಿಟನ್‌ಗಳಲ್ಲಿ ಅಲೆಯುತ್ತಿದ್ದಾರೆ. ಹಿಂದೂ ಸಂಘಟನೆಗಳು ಅವರ ಮೇಲೆ ಹಲ್ಲೆಮಾಡಲು ಸಮಯ ಕಾಯುತ್ತಿವೆ. ಅವರ ಚಿತ್ರಕಲಾ ಪ್ರದರ್ಶನವೂ ನಡೆಯದ ಪರಿಸ್ಥಿತಿ ಉಂಟಾಗಿದೆ. 'ಹಲ್ಲಾಬೋಲ್' ಎಂಬ ಬೀದಿ ನಾಟಕವನ್ನು ಪ್ರದರ್ಶಿಸುತ್ತಿದ್ದ ಸಂದರ್ಭದಲ್ಲಿ ರಂಗ ಕಲಾವಿದ ಸಫ್ದರ್ ಹಶ್ಮಿ ಅವರ ಮೇಲೆ ಪ್ರಾಣಾಂತಿಕ ಹಲ್ಲೆ ನಡೆದು ಅವರು ಅಸುನೀಗಿದರು. ಬಾಂಗ್ಲಾ ಲೇಖಕಿ ತಸ್ಲೀಮಾ ನಸ್ರೀನ್ ಮುಸಲ್ಮಾನ ಮೂಲಭೂತವಾದಿಗಳ ಕಾರಣದಿಂದಾಗಿ ಬಾಂಗ್ಲಾ ತೊರೆದು ಭಾರತದಲ್ಲಿ ತಲೆಮರೆಸಿಕೊಂಡು ಬದುಕುತ್ತಿದ್ದರು. 'ದಿ ಸೆಟಾನಿಕ್ ವರ್ಸಸ್' ಕಾದಂಬರಿಯ ಕರ್ತೃ ಸಲ್ಮಾನ್ ರಷ್ದಿಯ ತಲೆಯನ್ನು ತಂದೊಪ್ಪಿಸುವವರಿಗೆ ಮಿಲಿಯಾಂತರ ಡಾಲರ್ ನೀಡಲು ಹಲವು ಮುಸ್ಲಿಂ ರಾಷ್ಟ್ರಗಳು ತುದಿಗಾಲಲ್ಲಿ ನಿಂತಿವೆ. ಈ ಲೇಖಕನ ವಿರುದ್ಧ ಇರಾನಿನ ಖೊಮೇನಿ ಫತ್ವಾ ಹೊರಡಿಸಿ ೨೦ ವರ್ಷಗಳಾಗಿವೆ. ಕರ್ನಾಟಕದ ಉದಾಹರಣೆಯನ್ನೇ ಕೊಡುವುದಾದರೆ 'ಚಂದ್ರಗಿರಿಯ ತೀರದಲ್ಲಿ' ಕೃತಿಯ ಮೂಲಕ ಪ್ರಸಿದ್ಧರಾದ ಸಾರಾ ಅಬೂಬಕ್ಕರ್ ಅವರ ಮೇಲೆ ಮುಸಲ್ಮಾನ ಸಂಘಟನೆಗಳು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ ಹಲ್ಲೆ ನಡೆಸಿದವು. 'ಸೀತಾಯಣ'ದ ಪೋಲಂಕಿ ರಾಮಮೂರ್ತಿ ಅವರ ಅಭಿಪ್ರಾಯಗಳನ್ನು ಕೇಳುವುದಕ್ಕೂ ಇಷ್ಟಪಡದ ಹಿಂದೂ ಸಂಘಟನೆಗಳು ಶಿವಮೊಗ್ಗದಲ್ಲಿ ದಾಳಿ ನಡೆಸಿದವು.

ಎಲ್ಲವೂ ಕರಾರುವಾಕ್ಕು
ಏನಿದು ಪ್ರಕೃತಿಯ ಕಿರಿಕ್ಕು
ನಿಗದಿತ ಮಳೆಗಾಲ ಚಳಿಗಾಲ
ನಿಗದಿತ ಬೇಸಗೆ ಬಿರುಬೇಸಿಗೆ
ಇನಿತೂ ಬದಲಾವಣೆಯಿಲ್ಲ
ವರ್ಷದಿಂದ ವರ್ಷಕೆ
ಸೂರ್ಯ ಮೂಡಿ ಕಂತಿದರೆ
ಒಂದು ದಿನ ವಯಸ್ಸು ವೃದ್ಧಿ
ಒಂದು ದಿನ ಆಯಸ್ಸು ಕಡಿಮೆ

ಜಿ.ಎಸ್ಕೆ
ಮೈಸೂರು

ಯು. ಆರ್. ಅನಂತಮೂರ್ತಿ ಅವರ 'ಸಂಸ್ಕಾರ' ಕಾದಂಬರಿ ಚಲನಚಿತ್ರವಾದಾಗ ಬ್ರಾಹ್ಮಣ ಸಮುದಾಯ ಸಿಟ್ಟಿಗೆದ್ದು ಪ್ರತಿಭಟನೆ ನಡೆಸಿತು. ಮಾಸ್ತಿಯವರ 'ಚಿಕವೀರ ರಾಜೇಂದ್ರ' ಮತ್ತು 'ಚನ್ನಬಸವ ನಾಯಕ' ಕಾದಂಬರಿಗಳ ಬಗ್ಗೆ ವೀರಶೈವರು ಆಕ್ರೋಶ ವ್ಯಕ್ತಪಡಿಸಿ ಪ್ರತಿಭಟನೆ ನಡೆಸಿದ್ದು ಇತಿಹಾಸದ ಪುಟಗಳಲ್ಲಿದೆ. ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಪ್ರಕಟವಾದ 'ಮೊಹಮ್ಮದ್ ದಿ ಈಡಿಯಟ್' ಕತೆ ಕಾರಣವಾಗಿ ಆ ಪತ್ರಿಕಾಲಯದ ಮೇಲೆ ಮೂಲಭೂತವಾದಿ ಮುಸ್ಲಿಮರು ದಾಳಿ ನಡೆಸಿದರು.

ಒಂದು ಕಡೆ ಈ ದಾಳಿ, ಆಕ್ರಮಣ, ಹಲ್ಲೆ, ಆಕ್ರೋಶಗಳು ಪ್ರಕಟವಾಗುತ್ತಿದ್ದರೆ, ಇನ್ನೊಂದೆಡೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನಂಬಿ, ಗೌರವಿಸಿ, ಅದನ್ನೇ ತಮ್ಮ ಉಸಿರಾಗಿ ಭಾವಿಸಿದ ಲೇಖಕರು, ಕಲಾವಿದರು ತಮ್ಮ ಎಲ್ಲ ಸಂಕಷ್ಟಗಳಿಗೂ ಎದೆ ಕೊಡುತ್ತಿದ್ದಾರೆ. ಸಾರ್ವಜನಿಕವಾಗಿ ಕಾಣಿಸಿಕೊಳ್ಳಲು ಸಾಧ್ಯವಾಗದ ಸ್ಥಿತಿಯಲ್ಲಿ ಒಂದು ಬಗೆಯ ಅಜ್ಞಾತವಾಸದಲ್ಲಿಯೇ ಇರುವ ಸಲ್ಮಾನ ರಷ್ದಿ ದಶಕಗಳ ಕಾಲ ಹೀಗೇ ಯಾತನೆಯಲ್ಲಿ ಬದುಕುತ್ತಿರುವುದರ ಹಿಂದಿನ ಅಚಲವಾದ ಶ್ರದ್ಧೆ ಯಾವುದು ? ಅಥವಾ ಎಂ. ಎಫ್. ಹುಸೇನ್, ತಸ್ಲೀಮಾ ನಸ್ರೀನ್ ಅವರ ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲಿನ ಗಾಢ ನಂಬಿಕೆ ಎಂಥದು ? ತಮ್ಮ ಜೀವನವನ್ನೇ ಪಣವಾಗಿಟ್ಟ ಇವರು ಸಾಧಿಸುತ್ತಿರುವುದಾದರೂ ಏನು ?

ಎಂ.ಎಫ್. ಹುಸೇನ್ ಸಾಧಾರಣ ಕಲಾವಿದರಲ್ಲ. ಇವರ ಒಂದು ಪೇಂಟಿಂಗ್ ಎರಡು ಮಿಲಿಯನ್ ಡಾಲರ್‌ಗೆ ಮಾರಾಟವಾಗಿ ದಾಖಲೆಯನ್ನು ಸೃಷ್ಟಿಸಿದೆ. ಇವರನ್ನು 'ಭಾರತದ ಪಿಕಾಸೊ' ಎಂದು ಕರೆಯುತ್ತಾರೆ. ಚಲನಚಿತ್ರಗಳನ್ನೂ ಈತ ತಯಾರಿಸಿ ನಿರ್ದೇಶಿಸಿದ್ದಾನೆ. ಅಂತರರಾಷ್ಟ್ರೀಯ ಚಿತ್ರೋತ್ಸವಗಳಲ್ಲಿ ಇವರ ಚಿತ್ರಗಳಿಗೆ ಪ್ರಶಸ್ತಿ ದೊರೆತಿವೆ. ಪಾಬ್ಲೊ ಪಿಕಾಸೊ ಜೊತೆಯಲ್ಲಿ ವಿಶೇಷ ಆಮಂತ್ರಣವನ್ನು ಪಡೆದ ಪ್ರತಿಭಾವಂತ ಕಲಾವಿದ ಇವರು. ಭಾರತ ಸರ್ಕಾರ ಇವರಿಗೆ ಪದ್ಮಶ್ರೀ, ಪದ್ಮಭೂಷಣ, ಪದ್ಮವಿಭೂಷಣಗಳನ್ನು ನೀಡಿ ಗೌರವಿಸಿದೆ. ಸಂಸತ್ತಿನ ಮೇಲ್ಮನೆಯ ಸದಸ್ಯತ್ವವನ್ನೂ ಕೊಟ್ಟಿದ್ದು ಉಂಟು. ಇಂಥ ಕಲಾವಿದ ಈಗ ಭಾರತಕ್ಕೆ ಕಾಲಿಡುವಂತಿಲ್ಲ.

ತನ್ನ ಪೇಂಟಿಂಗ್‌ಗಳಲ್ಲಿ ಇವರು ಹಿಂದೂ ದೇವತೆಗಳನ್ನು ಬೆತ್ತಲಾಗಿ ಚಿತ್ರಿಸಿದರು ಎಂಬ ಕಾರಣಕ್ಕೆ ಹಿಂದೂ ಮೂಲಭೂತವಾದಿ ಸಂಘಟನೆಗಳು ಸಿಟ್ಟಿಗೆದ್ದಿವೆ. ಇವರ ತಲೆ ತಂದು ಒಪ್ಪಿಸುವವರಿಗೆ ೫೧ ಕೋಟಿ ರೂಪಾಯಿ ಬಹುಮಾನವನ್ನು ಘೋಷಿಸಿವೆ. ಮುಸ್ಲಿಂ ಮೂಲಭೂತವಾದಿಗಳೂ ಇವರ ವಿರುದ್ಧ ಸಿಟ್ಟಿಗೆದ್ದಿದ್ದಾರೆ. ಇದಕ್ಕೆ ಕಾರಣ ಹುಸೇನ್ ತಮ್ಮ ಚಿತ್ರಗಳಿಗಾಗಿ ರಚಿಸಿರುವ ಎರಡು ಹಾಡುಗಳಲ್ಲಿ ಕುರಾನ್‌ನಲ್ಲಿರುವ ಶಬ್ದಗಳನ್ನು ಬಳಸಿದ್ದಾರೆ ಎನ್ನುವುದು.

ಈ ಕಾರಣಗಳನ್ನು ವಿಶ್ಲೇಷಿಸುವ ಮೊದಲು ಇನ್ನೂ ಕೆಲವು ವಾಸ್ತವಸಂಗತಿಗಳನ್ನು ಪರಿಶೀಲಿಸಬಹುದು. ತಸ್ಲೀಮಾ ಮೇಲೆ ಮುಸ್ಲಿಮರಿಂದ ಹಲ್ಲೆ ನಡೆಯುತ್ತಿದ್ದ ಸಂದರ್ಭದಲ್ಲಿ ಮತ್ತು ತಸ್ಲೀಮಾ ರಕ್ಷಣೆಯೇ ಕೇಂದ್ರ ಸರ್ಕಾರಕ್ಕೆ ತಲೆನೋವು ಎನಿಸಿದ ಹೊತ್ತಿನಲ್ಲಿ ತಸ್ಲೀಮಾಗೆ ತಮ್ಮ ರಾಜ್ಯದಲ್ಲಿ ಆಶ್ರಯ ನೀಡಲು ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿ ಮುಂದಾಗಿದ್ದರು. ಮೋದಿ ಸಂಘ ಪರಿವಾರದ ವ್ಯಕ್ತಿ. ಅವರ ಮುಸ್ಲಿಂ ದ್ವೇಷ ಗುಟ್ಟಿನ ಸಂಗತಿಯೇನೂ ಅಲ್ಲ. ಆದರೂ ಮುಸ್ಲಿಂ ಲೇಖಕಿ ತಸ್ಲೀಮಾಗೆ ಆಶ್ರಯ ನೀಡಲು ಮೋದಿ ಮುಂದಾದದ್ದು ಯಾಕೆ ? ಮೋದಿ ಈ ಆಶ್ರಯ ನೀಡುವ ಮಾತನಾಡಿದ ಸಂದರ್ಭದಲ್ಲಿ ಚುನಾವಣೆಗಳಿದ್ದವು ಎಂಬ ಅಂಶವನ್ನೂ ಗಮನದಲ್ಲಿಟ್ಟುಕೊಳ್ಳಬೇಕು. ಮೋದಿಯ ವರ್ತನೆ ಕೇವಲ ಬಿಜೆಪಿಯ ಅಥವಾ ಸಂಘ ಪರಿವಾರದ ವರ್ತನೆ ಅಥವಾ ನಿಲುವು ಅಲ್ಲ. ಇದು ಇವತ್ತಿನ ಭಾರತದ ರಾಜಕಾರಣದ ಮೇಲೆ ಬೆಳಕು ಚೆಲ್ಲುವ, ರಾಜಕಾರಣದ ವಿವಿಧ ಮುಖಗಳನ್ನು ತೋರಿಸುವ ಅಂಶ ಎಂಬುದನ್ನು ವಿವರಿಸಬೇಕಾಗಿಲ್ಲ.

ಇಂಥ ರಾಜಕೀಯದ ಸುತ್ತಲೂ ಇವತ್ತಿನ ಭಾರತದ ರಾಜಕಾರಣ ಸುತ್ತುತ್ತಿದೆ. ಜಾತ್ಯತೀತ ತತ್ವವನ್ನು ಒಪ್ಪಿಕೊಂಡಿರುವಂತೆ, ನಮ್ಮ ಸಂವಿಧಾನವನ್ನು ಮಾನ್ಯ ಮಾಡುತ್ತಿರುವಂತೆ ನಮ್ಮ ರಾಜಕೀಯ ಪಕ್ಷಗಳು ತೋರಿಸಿಕೊಳ್ಳುತ್ತಿದ್ದರೂ ಒಳಗಿನ ರಾಜಕೀಯವೇ ಬೇರೆ. ಮೀಸಲಾತಿ, ಸಾಮಾಜಿಕ ನ್ಯಾಯದ ಪ್ರಶ್ನೆಗಳು ಬಂದಾಗ ಜಾತ್ಯತೀತ ನಿಲುವು ಇರುವಂತೆ ತೋರಿಸಿಕೊಳ್ಳುವ ರಾಜಕೀಯ ಪಕ್ಷಗಳು ಓಟಿನ ಪ್ರಶ್ನೆ ಬಂದಾಗ ಜಾತಿ ಬಲದ ಮೇಲೆ ನಿಂತು ಅವುಗಳನ್ನು ಬಲಗೊಳಿಸುತ್ತ, ಸಂಘಟಿಸುತ್ತ, ರಾಜಕೀಯ ಲಾಭವನ್ನು ಪಡೆಯುತ್ತ ತಮ್ಮ ಅಸ್ತಿತ್ವಕ್ಕೆ ಹೋರಾಡುತ್ತವೆ. ಇವತ್ತಿನ ಬಹುಪಾಲು ಸಂಘರ್ಷಗಳಿಗೆ ಮುಖ್ಯವಾದ ಕಾರಣವೆಂದರೆ ಈ ಜಾತಿ ರಾಜಕಾರಣವೇ. ಸಂವಿಧಾನದ ಜಾತ್ಯತೀತ ಅಥವಾ ಜಾತಿ ಮತ ಧರ್ಮ ನಿರಪೇಕ್ಷ ತತ್ವಕ್ಕೆ ಬದ್ಧವಾಗಿ ಜಾತಿಯನ್ನು ಮೀರುವ ನಿಜವಾದ ಪ್ರಯತ್ನಗಳನ್ನು ನಮ್ಮ ರಾಜಕೀಯ ಪಕ್ಷಗಳು ಮಾಡುವುದಾದರೆ ಅನೇಕ ಪಕ್ಷಗಳಿಗೆ ಅಸ್ತಿತ್ವವೇ ಇಲ್ಲವಾಗುತ್ತದೆ. ಜಾತಿ ಧರ್ಮಗಳ ಕಾರಣಕ್ಕಾಗಿ ಜನ ಸಂಘರ್ಷಕ್ಕಿಳಿಯುವುದೂ ಕಡಿಮೆಯಾಗುತ್ತದೆ.

ಇನ್ನೊಂದು ಬೆಳವಣಿಗೆಯೂ ಭಾರತೀಯ ಸಮಾಜವನ್ನು ಜಾತಿ, ಧರ್ಮಗಳ ಸಂಕೋಲೆಯಲ್ಲಿಯೇ

ಬಂಧಿಸಲು ಕಾರಣವಾಗಿದೆ. ಧರ್ಮ ಮತ್ತು ರಾಜಕೀಯಗಳು ಪರಸ್ಪರ ಕೈಜೋಡಿಸಿ ಅಧಿಕಾರವನ್ನು ಹಿಡಿಯಲು ನಡೆಸುತ್ತಿರುವ ಹುನ್ನಾರವೂ ನಮ್ಮ ನಿಜವಾದ ಪ್ರಗತಿಗೆ ಮಾರಕವಾಗಿದೆ. ಧರ್ಮಗಳ ಮುಖವಾಡವನ್ನು ಕಿತ್ತುಹಾಕಿದರೆ ಅಲ್ಲಿ ರಾಜಕಾರಣದ ಮುಖ ಕಾಣಿಸುತ್ತದೆ. ರಾಜಕಾರಣದ ಮುಖವಾಡವನ್ನು ಕಿತ್ತುಹಾಕಿದರೆ ಅಲ್ಲಿ ಓಟುಗಳು ಮಾತ್ರ ಕಾಣಿಸುತ್ತವೆ. ಧಾರ್ಮಿಕ ಮೂಲ ಭೂತವಾದ ಎನ್ನುವುದು ಜಾಗತಿಕ ಮಟ್ಟದಲ್ಲಿ ಭಯೋತ್ಪಾದಕರನ್ನು ಸೃಷ್ಟಿಸಿದೆ. ಈ ಭಯೋತ್ಪಾದಕರು ಅನೇಕ ರಾಷ್ಟ್ರಗಳಲ್ಲಿ ಸರ್ಕಾರಗಳನ್ನೇ ನಿಯಂತ್ರಿಸುವ ಮಟ್ಟಕ್ಕೂ ಹೋಗಿದ್ದಾರೆ. ಭೂಗತ ಜಗತ್ತು, ಭಯೋತ್ಪಾದಕರು, ಮೂಲಭೂತವಾದಿಗಳು, ರಾಜಕಾರಣಿಗಳು ಎಲ್ಲರೂ ಕೈಜೋಡಿಸಿ ಸೃಷ್ಟಿಸಿರುವ ಅತ್ಯಂತ ಭಯಾನಕವಾದ ಮತ್ತು ಸಂಕೀರ್ಣವಾದ ಸನ್ನಿವೇಶದಲ್ಲಿ ಬರಹಗಾರರು ಮತ್ತು ಕಲಾವಿದರು ತಮ್ಮ ಅಭಿವ್ಯಕ್ತಿಯನ್ನು ಹುಡುಕಬೇಕಾಗಿದೆ. ಕಲೆ, ಸಾಹಿತ್ಯ, ಸೃಜನಶೀಲ ಸೃಷ್ಟಿಗಳ ಕೇಂದ್ರವಾದ ಮುನುಷ್ಯನನ್ನು ಈ ಎಲ್ಲ ಸಿಕ್ಕುಗಳ ನಡುವೆ ಕಾಣಬೇಕಾದ ದೊಡ್ಡ ಸವಾಲೂ ಇವತ್ತಿನ ಸೃಜನಶೀಲರ ಮುಂದಿದೆ. ಸರ್ವಾಧಿಕಾರಿಗಳ ರಾಷ್ಟ್ರಗಳಲ್ಲಾದರೆ ಎಲ್ಲ ಭೀಕರ ಮುಖಗಳೂ ಸ್ಪಷ್ಟವಾಗಿ ಕಾಣಿಸುತ್ತವೆ. ಆದರೆ ಗೋಸುಂಬಿ ರಾಜಕಾರಣದ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಮುಖಗಳೇ ಕಾಣಿಸುವುದಿಲ್ಲ. ಮುಖವೆಂದು ಭ್ರಮಿಸಿದ್ದು ಮುಖವಾಡವಾಗಿರುತ್ತದೆ. ಈ ಮುಖವಾಡಗಳನ್ನು ಕಿತ್ತೆಸೆಯುವ, ನಿಜವಾದ ಮುಖವನ್ನು ನೋಡುವ ಧೈರ್ಯ ಸೃಜನಶೀಲರಿಗಿರಬೇಕಾಗುತ್ತದೆ. ಅಂಥ ಧೈರ್ಯ ತೋರುವವರ ತಲೆಯ ಮೇಲೆ ಫತ್ವಾದ ತೂಗುಕತ್ತಿಗಳಿರುವುದು ಕಠೋರ ವಾಸ್ತವ.

ಯಾವುದೇ ಸೃಜನಶೀಲ ಕೃತಿಯೂ ಮನುಷ್ಯ ಕೇಂದ್ರಿತವಾದದ್ದು; ಮನುಷ್ಯನ ಹಿತವನ್ನು ಬಯಸುವಂಥದು. ಇದಕ್ಕಾಗಿ ಮನುಷ್ಯನನ್ನು ಎಲ್ಲ ಬಂಧನಗಳಿಂದ ಬಿಡುಗಡೆ ಮಾಡಲು ನೋಡುತ್ತಿರುತ್ತದೆ. ಬಿಡುಗಡೆ ಎಂದರೆ ಕೇವಲ ಗುಲಾಮಗಿರಿಯಿಂದ ಬಿಡುಗಡೆಯಲ್ಲ; ಮನುಷ್ಯನನ್ನು ಶೋಷಿಸುವ ಎಲ್ಲದರಿಂದಲೂ ಬಿಡುಗಡೆ. ಮನುಷ್ಯ ಸಿಕ್ಕಿಹಾಕಿಕೊಂಡಿರುವ ಬಂಧನಗಳನ್ನು ಚಿತ್ರಿಸುತ್ತಲೇ ಅವನು ಮುಕ್ತವಾಗಬೇಕಾಗಿರುವ ಮಾರ್ಗಗಳನ್ನು ಸೃಜನಶೀಲ ಕೃತಿ ತೋರಿಸುತ್ತಲೇ ಇರುತ್ತದೆ, ಹಾಗೆಯೇ ನಂಬಿಕೆಗಳಲ್ಲಿ ಸಿಕ್ಕಿಹಾಕಿಕೊಂಡ ಮನುಷ್ಯನ ಮನಸ್ಸನ್ನೂ ಮುಕ್ತಗೊಳಿಸಲು ನೋಡುತ್ತಿರುತ್ತದೆ. ಧಾರ್ಮಿಕ ನಂಬಿಕೆಗಳು, ಕಟ್ಟುಪಾಡುಗಳು, ಕಾಲಾಂತರದಿಂದ ಪ್ರಶ್ನಾತೀತವಾಗಿ ಉಳಿದುಕೊಂಡು ಬಂದ ಆಚರಣೆಗಳು, ತಪ್ಪು ನೆಲೆಯಲ್ಲಿ ರೂಪುಗೊಂಡು ಸ್ಥಿರತ್ವವನ್ನು ಪಡೆದುಕೊಂಡ ಗ್ರಹಿಕೆಗಳು ಹೀಗೆ ಎಲ್ಲವನ್ನೂ ಪ್ರಶ್ನಿಸುವ, ವಿಶ್ಲೇಷಿಸುವ ಪ್ರಯತ್ನವನ್ನು ಸೃಜನಶೀಲ ಕೃತಿಗಳು ನಿರಂತರವಾಗಿ ಮಾಡುತ್ತಲೇ ಇರುತ್ತವೆ. ಅವು ಮನುಷ್ಯ ಸಂಬಂಧಗಳ ಗಾಢತೆಯನ್ನು ಹೇಳುತ್ತಲೇ ಪೊಳ್ಳು ಸಂಬಂಧಗಳ ಮುಖವಾಡವನ್ನು ಬಯಲು ಮಾಡಬಹುದು. ಗಡಿಗಳನ್ನು ಮೀರಿದ ವಿಶ್ವಮಾನವ ಪರಿಕಲ್ಪನೆಯನ್ನು ಅವು ಮಾನ್ಯಮಾಡಬಹುದು. ಸಮಾನತೆಯನ್ನು ಪ್ರತಿಪಾದಿಸುತ್ತ ಜಾತಿ ಮತ ಧರ್ಮಗಳು ನಿರ್ಮಿಸುವ ಗೋಡೆಗಳನ್ನು ಒಡೆಯಲು ನೋಡಬಹುದು. ಇವೆಲ್ಲ ಕ್ರಿಯೆಗಳ ಹಿಂದಿನ ಕಾಳಜಿ ಮಾತ್ರ ಮನುಷ್ಯನೇ ಆಗಿರುವುದು, ಸಮುದಾಯದ ಹಿತವೇ ಆಗಿರುವುದು ಸಾರ್ವಕಾಲಿಕ ಸತ್ಯವಾಗಿರುತ್ತದೆ.

ಮನುಷ್ಯ ಸೃಷ್ಟಿಸಿದ ಪುರಾಣಗಳಲ್ಲಿ, ಕಲ್ಪನೆಗಳಲ್ಲಿ

## ಹೆಣ್ಣೇ !

ನನ್ನ ಹುಟ್ಟು ನನ್ನನ್ನೊಲ್ಲದ ವಾತಾವರಣದಲ್ಲಿ
ಬೆಳವಣಿಗೆ ಸಂಕುಚಿತ ಸಮಾಜದ ಮನಸಿನಾವರಣದಲ್ಲಿ
ಹರೆಯದ ಜೊತೆ ಶರೀರವು ವಿಕಸನಗೊಂಡರೂ
ಮನಸು ಮಾತ್ರ ಮೊಗ್ಗಿನಂತೆ ಮುದುಡಿ ಇರಬೇಕು
ಮೈಮನ ಒಂದಾಗಿ ಬೆರೆಯುವ ವಿವಾಹ ವ್ಯವಸ್ಥೆಯಲ್ಲಿ
ಆಲ್‌ಪರ್ಪಸ್ ವಸ್ತುವಿನಂತೆ ಅತ್ತೆಮನೆ ಸೇರುತ್ತೇನೆ
ಒಂದು ಸಲ ವ್ಯಾಕ್ಯೂಮ್ ಕ್ಲೀನರಾಗುತ್ತೇನೆ
ಮತ್ತೊಂದು ಸಲ ವಾಷಿಂಗ್ ಮೆಷೀನಾಗುತ್ತೇನೆ
ಕುಕಿಂಗ್ ರೇಂಜ್ ನಾನೇ, ಬೇಬಿ ಈಲ್ಡಿಂಗ್ ಮೆಷೀನ್ ಆದರೂ ನಾನೇ !
ಯಾರು ನಾನು ? ?
ಆರ್ಥಿಕವಾಗಿ ಅತಂತ್ರವಾಗಿರುವ ಮಧ್ಯಮ ವರ್ಗದ ಹೆಣ್ಣು!
ಕಾಲ ಬದಲಾಯಿತು ಎನ್ನುವವರಿಗೆ ಒಂದು ಬಿನ್ನಹ
ಸುಧಾರಿಸಿದ್ದು ವೇಷ ಭಾಷೆಯೇ ವಿನಾ ಮನಸ್ತತ್ವವಲ್ಲ
ಬದಲಾವಣೆ ಒಂದು ವರ್ಗದ ಜನರಿಗೆ ಮಾತ್ರ
ಬದಲಾಗದ ಬವಣೆಯ ಬದುಕಿನ ಒಡತಿಯರೇ ನಿಮಗಿದೇ ಕರೆ !
ಯಾರೋ ಮುಂದಾಗಿ ತರುತ್ತಾರೆ ಸುಧಾರಣೆ
ಎನ್ನುವ ಭ್ರಮೆಯನ್ನು ತೊರೆದು
ನಮ್ಮ ಅಭ್ಯುದಯ ಪಥವನ್ನು ನಾವೇ ನಿರ್ಧರಿಸೋಣ
ನಮ್ಮ ಬಾಳಿನ ಬೆಳಕನ್ನು ಕೈಯೊಡ್ಡಿ ಕಾಯೋಣ



ರೋಹಿಣಿ ಸತ್ಯ
೩೫೦ ಸಂಪಿಗೆ ರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೦೩

ಮೂಡಿದ ಹಿಂದೂ ದೇವರುಗಳಿಗೆ ರಾಜಾ ರವಿವರ್ಮ ಮೂರ್ತರೂಪ ಕೊಡಲು ನೋಡಿದ. ಲಕ್ಷ್ಮಿ ಎಂದರೆ ಹೀಗೆ, ಸರಸ್ವತಿ ಎಂದರೆ ಹೀಗೆ, ಸೀತೆ-ರಾಮರು ಹೀಗೆ ಇತ್ಯಾದಿ. ಈ ಕಲೆ ಎಷ್ಟೊಂದು ಪ್ರಭಾವಶಾಲಿಯಾಗಿತ್ತು ಎಂದರೆ ರವಿವರ್ಮನ ಚಿತ್ರಗಳು ದಕ್ಷಿಣಭಾರತದ ಹಿಂದೂ ಮನೆಗಳಲ್ಲಿ ಈ ಚಿತ್ರಗಳೇ ದೇವರುಗಳಾದವು. ಅನೇಕ ಎಳೆಯ ಮನಸ್ಸುಗಳ ಮೇಲೆ ಅಚ್ಚಳಿಯದ ಮುದ್ರೆಯನ್ನೂ ಒತ್ತಿದವು. ಯಾರೂ ಕಾಣದ ದೇವರಿಗೆ ರವಿವರ್ಮ ರೂಪಕೊಟ್ಟು ಹಲವು ಮನಸ್ಸುಗಳ ಮೇಲೆ ದೇವರನ್ನು ಅಚ್ಚೊತ್ತಿದ. ಎಂ. ಎಫ್. ಹುಸೇನ್ ಅಂಥವರು ಮೂರ್ತರೂಪವನ್ನು ಧಿಕ್ಕರಿಸಲು, ಇಲ್ಲವೇ ಮೂರ್ತರೂಪಗಳಿಗಿರುವ ಒಂದು ಚೌಕಟ್ಟನ್ನು ಮುರಿಯಲು ನೋಡುತ್ತಾರೆ. ರೂಪ ಕೊಡುವುದು, ಅವುಗಳನ್ನು ಮುರಿಯುವುದು, ಆ ಮೂಲಕ ಮನುಷ್ಯನ ಮನಸ್ಸನ್ನು ಮುಕ್ತವಾಗಿಡಲು ನೋಡುವುದು ಇತ್ಯಾದಿ ಅನೇಕ ಕ್ರಿಯಾಶೀಲ ಚಟುವಟಿಕೆಗಳಲ್ಲಿ ಸೃಜನಶೀಲ ಮನಸ್ಸುಗಳು ತೊಡಗಿರುತ್ತವೆ. ಹುಸೇನ್ ಹಿಂದೂ ದೇವತೆಗಳನ್ನು ಬೆತ್ತಲಾಗಿ ಚಿತ್ರಿಸುವುದರ ಹಿಂದೆ ಇಂಥ ಪ್ರಯತ್ನವಿರಬಹುದು. ಆದಿ ಮಾನವ ಬೆತ್ತಲೆಯಾಗಿದ್ದ ಎಂದರೆ, ಆದಿ ಮಾನವನನ್ನೂ ಸೃಷ್ಟಿಸಿದ (ಹಿಂದೂ ಧಾರ್ಮಿಕ ನಂಬಿಕೆಯಂತೆ) ದೇವರು ಬೆತ್ತಲೆಯಾಗಿರುವುದರಲ್ಲಿ ತಪ್ಪೇನು ಎಂಬ ತರ್ಕವನ್ನೂ ಇಲ್ಲಿ ಮಂಡಿಸಬಹುದು. ಅಷ್ಟೇಕೆ ನಮ್ಮ ಅನೇಕ ಪುರಾತನ ದೇವಾಲಯಗಳಲ್ಲಿ ದೇವತೆಗಳ ಬೆತ್ತಲೆ ರೂಪಗಳು ಈಗಲೂ ಇವೆಯಲ್ಲ, ಅವುಗಳನ್ನು ಒಪ್ಪಿಕೊಂಡ ಮನಸ್ಸುಗಳು ಹುಸೇನರ ಬೆತ್ತಲೆ ದೇವತೆಗಳ ಬಗ್ಗೆ ಯಾಕೆ ತಕರಾರು ತೆಗೆಯುತ್ತವೆ? ಅಂದರೆ ಇದು ನಂಬಿಕೆಯ ಪ್ರಶ್ನೆಯಲ್ಲ, ಇತರ ಅನ್ಯ ಕಾರಣಗಳು ಇವೆ ಎನ್ನುವುದು ಸ್ಪಷ್ಟ.

ಈ ಅನ್ಯ ಕಾರಣಗಳನ್ನು ಬೇರೊಂದು ನೆಲೆಯಿಂದಲೂ ನೋಡಬಹುದು : ಇತ್ತೀಚೆಗೆ ಕರ್ನಾಟಕ ಸರ್ಕಾರ ನಿಷೇಧಿಸಿದ ಬಂಜಗೆರೆ ಜಯಪ್ರಕಾಶ್ ಅವರ 'ಆನು ದೇವಾ ಹೊರಗಣವನು' ಕೃತಿಯನ್ನೇ ನೋಡಿ. ಈ ಕೃತಿಯ ಮೌಲ್ಯಮಾಪನ ಮಾಡಲು ನೇಮಿಸಿದ್ದ ಪರಿಣತರ ಸಮಿತಿಯ ಅಭಿಪ್ರಾಯವನ್ನು ಧಿಕ್ಕರಿಸಿ ಸರ್ಕಾರ ಈ ಕೃತಿಯನ್ನು ನಿಷೇಧಿಸಿತು. ಈ ನಿಷೇಧದ ಹಿಂದೆ ಕರ್ನಾಟಕದ ಒಂದು ಪ್ರಬಲ ಜಾತಿಯಾದ ವೀರಶೈವರ ಒತ್ತಡ ಇತ್ತು ಎನ್ನುವುದು ಎಲ್ಲರಿಗೂ ಗೊತ್ತಿರುವ ಗುಟ್ಟು. ಜಾತಿ ರಾಜಕಾರಣವನ್ನು ಮಾಡುತ್ತ, ತಮ್ಮ ಅಸ್ತಿತ್ವಕ್ಕೆ ಜಾತಿಗಳನ್ನೇ ನಂಬಿರುವ ಪಕ್ಷಗಳು, ಸರ್ಕಾರಗಳು ಜಾತಿಗಳ ಒತ್ತಡಕ್ಕೆ ಮಣಿಯುವುದು ಸೋಜಿಗದ ಸಂಗತಿಯೇನೂ ಅಲ್ಲ. ಬಂಜಗೆರೆ ಅವರ ಕೃತಿ ತೀರ ಸಾಧಾರಣ ಕೃತಿಯೂ ಇರಬಹುದು, ಅದಕ್ಕೆ ಅಗತ್ಯ ಸಂಶೋಧನೆಯ ಬೆನ್ನೆಲುಬೂ ಇಲ್ಲದಿರಬಹುದು. ಅದನ್ನು ಹೇಳಬೇಕಾದವರು ವಿದ್ವಾಂಸರು, ಸಂಶೋಧಕರು ಮತ್ತು ಓದುಗರು. ಸಮರ್ಥ ಕೃತಿ ಉಳಿಯುತ್ತದೆ, ಸಾಮಾನ್ಯ ಕೃತಿ ತಾನೇ ಕರಗಿಹೋಗುತ್ತದೆ. ಇದನ್ನು ಸರ್ಕಾರ ನಿಷೇಧಿಸಬೇಕಾದಂಥ ಕಾರಣಗಳಂತೂ ಈ ಕೃತಿಯ ಮಟ್ಟಿಗೆ ಇರಲೇ ಇಲ್ಲ.

ಇದೇ ಸಂದರ್ಭದಲ್ಲಿ ಇನ್ನೊಂದು ಕೃತಿಯ ಉದಾಹರಣೆಯನ್ನೂ ನೋಡಬಹುದು. ಎಸ್. ಎಲ್. ಭೈರಪ್ಪ ಅವರ ಕೃತಿ - 'ಆವರಣ' ಜೀವ ವಿರೋಧಿಯಾದ ಕೃತಿಯೆಂದು ಸಾಹಿತ್ಯ ಕ್ಷೇತ್ರದ ಅನೇಕ ಗಣ್ಯರನ್ನು ಟೀಕಿಸಿದರು. ಈ ಟೀಕೆಯ ಹಿಂದೆ ಜಾತಿ ಧರ್ಮಗಳ ಒತ್ತಡಗಳು ಇರಲಿಲ್ಲ. ಸರ್ಕಾರ ಇಂಥ ವಿಚಾರಗಳಲ್ಲಿ ತಲೆ ಹಾಕಬೇಕಾದ ಅಗತ್ಯವೂ ಇಲ್ಲ. ಆದರೆ ಬಂಜಗೆರೆಯವರ ಕೃತಿಯನ್ನು ನಿಷೇಧಿಸುವಲ್ಲಿ ಉತ್ಸಾಹ ತೋರಿಸಿದ ಸರ್ಕಾರ ಇಲ್ಲಿ ಯಾಕೆ ಮೌನವಹಿಸಿತು? ಸಮಾಜದ ಒಟ್ಟಾರೆ ಹಿತವನ್ನು ಕಾಯುವ ದೃಷ್ಟಿಯಿಂದ ಸಾಹಿತ್ಯ ಕೃತಿಯೊಂದನ್ನು ನಿಷೇಧಿಸುವುದಾಗಿ ಸರ್ಕಾರ ಹೇಳುವುದಾದರೆ, ಅದಕ್ಕೆ ಭೈರಪ್ಪನವರ ಕೃತಿ 'ಆವರಣ' ಯಾಕೆ ಕಾಣಿಸಲಿಲ್ಲ? ಸಮುದಾಯದ ಹಿತದ ಬಗ್ಗೆ ಯಾವ ಸರ್ಕಾರಗಳೂ ಚಿಂತಿಸುವುದಿಲ್ಲ. ಲೇಖಕ, ಕಲಾವಿದರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೂ ಈ ಸರ್ಕಾರಗಳು ಗಮನಕ್ಕೆ ತೆಗೆದು ಕೊಳ್ಳುವುದಿಲ್ಲ. ಸರ್ಕಾರವನ್ನು ಉರುಳಿಸಬಲ್ಲ ಶಕ್ತಿಗಳು ಒತ್ತಡ ತಂದಾಗ ಸರ್ಕಾರ ಯಾವುದೇ ಕೃತಿಯನ್ನು ನಿಷೇಧಿಸಬಲ್ಲುದು. ಅವುಗಳಿಗೆ ಕಲೆ, ಸಾಹಿತ್ಯದ ಬಗ್ಗೆ ಇರುವ ಗೌರವ ಈ ಬಗೆಯದು.




ಹೀಗೆಯೇ ಒಂದರ ಮೇಲೊಂದು ಸ್ಫೋಟ ಸಂಭವಿಸುತ್ತ ಇದ್ದರೆ ಸ್ಫೋಟದ ಭಯಂಕರ ಶಬ್ದಕ್ಕೆ ಜನ ಒಗ್ಗಿಕೊಳ್ಳುತ್ತಾರೆ...

೫

ನ್ಯಾಯಾಂಗ, ಶಾಸಕಾಂಗ ಮತ್ತು ಕಾರ್ಯಾಂಗಗಳಂತೆ ಪತ್ರಿಕೆಯೂ ಒಂದು ಪ್ರಮುಖ ಅಂಗ. ಪ್ರಜಾಪ್ರಭುತ್ವದ ನಾಲ್ಕನೆಯ ಸ್ತಂಭವಾಗಿಯೂ ಇದನ್ನು ಮಾನ್ಯ ಮಾಡಲಾಗಿದೆ. ಪತ್ರಿಕೆಗಳೆಂದರೆ ಯಾವುದೇ ಪ್ರಜಾಪ್ರಭುತ್ವದ ಕಾವಲುಗಾರರಂತೆ, ಪ್ರಬಲ ವಿರೋಧ ಪಕ್ಷಗಳಂತೆ ಎಂದು ಸಾಮಾನ್ಯವಾಗಿ ಭಾವಿಸಲಾಗಿದೆ.

ಬಹಳ ವೇಗದಲ್ಲಿ ಜನ ಸಮುದಾಯವನ್ನು ಮುಟ್ಟುವ ಕಾರಣದಿಂದಾಗಿ ಪತ್ರಿಕೆಗಳು, ರೇಡಿಯೊ ಮತ್ತು ಟಿವಿಗಳು ನಮ್ಮ ಪ್ರಮುಖ ಸಾರ್ವಜನಿಕ ಸಂವಹನ ಸಾಧನಗಳಾಗಿ ಕಾಣಿಸುತ್ತಿವೆ. ರೇಡಿಯೊ ಸರ್ಕಾರದ ನಿಯಂತ್ರಣದಲ್ಲಿರುವುದರಿಂದ ಅದು ತನ್ನ ಪ್ರಾಮುಖ್ಯತೆಯನ್ನು, ಜನ ಮನ್ನಣೆಯನ್ನು ಕೆಲವು ವಿಚಾರಗಳಲ್ಲಿ ಕಳೆದುಕೊಂಡಿದೆ. ಟಿವಿ ಮತ್ತು ಪತ್ರಿಕೆಗಳ ವಿಚಾರದಲ್ಲಿ ಹಾಗಾಗಿಲ್ಲ. ಖಾಸಗೀ ಒಡೆತನ ಇಲ್ಲಿರುವುದರಿಂದ ಪ್ರಬಲ ಪೈಪೋಟಿ, ತೀವ್ರ ಸೆಣಸಾಟ, ಅಸ್ತಿತ್ವಕ್ಕಾಗಿ ಪ್ರಬಲ ಹೋರಾಟ ನಿರಂತರವಾಗಿ ನಡೆಯುತ್ತಲೇ ಬಂದಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ನಂತರದ ಕೆಲವು ವರ್ಷಗಳಲ್ಲಿ ಪತ್ರಿಕೆಗಳಿಗಿದ್ದ ಆದರ್ಶ ಇವತ್ತು ಕಾಣೆಯಾಗಿದೆ ಎಂಬ ಮಾತನ್ನು ಒಪ್ಪಿಕೊಳ್ಳಬೇಕು. ಪತ್ರಿಕೋದ್ಯಮ ಅಥವಾ ಟಿವಿ ಸಂಸ್ಥೆಗಳ ನಿರ್ವಹಣೆ ಇವತ್ತು ದೊಡ್ಡ ಬಂಡವಾಳ ಹೂಡಿಕೆಯ ಉದ್ಯಮವಾಗಿದೆ. ಕೋಟ್ಯಂತರ ರೂಪಾಯಿಗಳ ವ್ಯವಹಾರವಾಗಿದೆ. ಭಾರತೀಯ ಉದ್ದಿಮೆದಾರರು ಮತ್ತು ಬಂಡವಾಳಗಾರರು ಮಾತ್ರ ಆಸಕ್ತಿ ತೋರುತ್ತಿದ್ದ ಈ ಕ್ಷೇತ್ರ ಇವತ್ತು ಬಹುರಾಷ್ಟ್ರೀಯ ಕಂಪನಿಗಳ ಬಂಡವಾಳ ಹೂಡಿಕೆಯ ಆಸಕ್ತಿ ಕ್ಷೇತ್ರವೂ ಆಗಿ ಪರಿವರ್ತನೆಗೊಂಡಿದೆ. ನೇರ ಬಂಡವಾಳ ಹೂಡಿಕೆಗೆ ಕೆಲವು ನಿರ್ಬಂಧಗಳು ಇವೆಯಾದರೂ ಬಹುರಾಷ್ಟ್ರೀಯ ಕಂಪನಿಗಳಿಂದ ಈ ಕ್ಷೇತ್ರ ಸಂಪೂರ್ಣವಾಗಿ ಮುಕ್ತವಾಗಿದೆ ಎಂದು ಹೇಳಲು ಸಾಧ್ಯವಾಗದ ಸ್ಥಿತಿಯಲ್ಲಿ ನಾವಿದ್ದೇವೆ.

ಕೋಟ್ಯಂತರ ರೂಪಾಯಿ ಬಂಡವಾಳ ಹೂಡಿಕೆಯೇ ಕಾರಣವಾಗಿ ಅದನ್ನು ಮರಳಿ ಪಡೆಯುವುದರ ಕಡೆಗೇ ಬಂಡವಾಳಗಾರರ ಪ್ರಮುಖ ಆಸಕ್ತಿ ಕೆಲಸ ಮಾಡುತ್ತಿರುತ್ತದೆ. ತಮ್ಮ ಇತರ ಆಸಕ್ತಿಗಳು, ಇತರ ಉದ್ಯಮಗಳು, ಅಧಿಕಾರ, ಸವಲತ್ತು ಇತ್ಯಾದಿಗಳನ್ನು ಕಾಯ್ದುಕೊಳ್ಳುವುದಕ್ಕಾಗಿಯೂ ಟಿವಿ ಮತ್ತು ಪತ್ರಿಕೋದ್ಯಮಗಳನ್ನು ಬಳಸುವ ಹುನ್ನಾರವನ್ನು ನಾವು ನೋಡಬಹುದಾಗಿದೆ. ರಾಜಕೀಯ ಪಕ್ಷಗಳು ತಮ್ಮ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳುವ ಉದ್ದೇಶಕ್ಕಾಗಿ ತಮ್ಮದೇ ಟಿವಿ ಚಾನಲ್‌ಗಳನ್ನು ಇಲ್ಲವೇ ಪತ್ರಿಕೆಗಳನ್ನು ಆರಂಭಿಸಿ ನಡೆಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ. ಇಂಥ ಸನ್ನಿವೇಶದಲ್ಲಿ ಪತ್ರಿಕೆ ಮತ್ತು ಟಿವಿ ಮಾಧ್ಯಮಗಳನ್ನು ಒಂದು ಆದರ್ಶದಂತೆ, ಜನಸಮುದಾಯದ ಹಿತಕ್ಕೆ ಬದ್ಧವಾಗಿ ಕಾರ್ಯ ನಿರ್ವಹಿಸುವ ಸಾಧನಗಳಂತೆ ಪರಿಗಣಿಸುವುದು ವ್ಯಂಗ್ಯದಂತೆಯೂ ಕಾಣಿಸಬಹುದು.

ದೊಡ್ಡ ಪ್ರಮಾಣದಲ್ಲಿ ಹಣವನ್ನು ತರುವ ಜಾಹೀರಾತುಗಳು ಇವತ್ತು ಎಷ್ಟು ಪ್ರಭಾವ ಶಾಲಿಯಾಗಿವೆಯೆಂದರೆ, ಈ ಜಾಹೀರಾತುಗಳನ್ನು ನೀಡುವ ವ್ಯಕ್ತಿಗಳು ಇಲ್ಲವೇ ಸಂಸ್ಥೆಗಳು ಅಥವಾ ಸರ್ಕಾರಗಳು ಪತ್ರಿಕೆಗಳನ್ನು ಮತ್ತು ಟಿವಿ ವಾಹಿನಿಗಳನ್ನು ನಿಯಂತ್ರಿಸುವ ಸ್ಥಿತಿಯಲ್ಲಿಯೂ ಇರುತ್ತವೆ. ಸರ್ಕಾರದ ವಿರುದ್ಧ ಒಂದು ಪತ್ರಿಕೆ ಧ್ವನಿ ಎತ್ತಿದರೆ ಅದನ್ನು ನಿಯಂತ್ರಿಸುವಂತೆ ಸರ್ಕಾರ ಪುಟಗಟ್ಟಲೆ ಜಾಹೀರಾತನ್ನು ನೀಡುತ್ತದೆ; ಇಲ್ಲವೇ ಈ ಜಾಹೀರಾತುಗಳನ್ನು ನಿಯಂತ್ರಿಸಿ ಬೆದರಿಸುತ್ತದೆ. ಒಂದು ವರ್ಷದ ಕಾಲಾವಧಿಯಲ್ಲಿ ಸರ್ಕಾರ ನೀಡುವ ಜಾಹೀರಾತು ಎಂದರೆ ಅದು ಕೋಟ್ಯಂತರ ರೂಪಾಯಿಗಳ ವ್ಯವಹಾರವಾಗಿರುತ್ತದೆ. ಹೀಗಾಗಿಯೇ ಇವತ್ತು ಸರ್ಕಾರಗಳನ್ನು ಉರುಳಿಸುವಂಥ 'ಸ್ಕೂಪ್'ಗಳು ಪತ್ರಿಕೆಗಳಲ್ಲಿ ತೀರ ಅಪರೂಪವಾಗಿವೆ.

ಹಣವನ್ನೇ ಕೇಂದ್ರ ಮಾಡಿಕೊಂಡ ಈ ಮಾಧ್ಯಮಗಳು ಜನಹಿತದತ್ತ ಮುಖಮಾಡುವುದು, ಜನಹಿತದ ಪ್ರಮುಖ ಆಸಕ್ತಿಗಳಿಗಾಗಿ ದುಡಿಯುವುದು ಕಡಿಮೆಯಾಗುತ್ತಿದೆ. ಇದಕ್ಕೆ ಬೇಕಾಗುವ ಬದ್ಧತೆ ಕೂಡ ಇಂದು ಕಡಿಮೆ ಯಾಗುತ್ತಿದೆ. ಸ್ವಾತಂತ್ರ್ಯಪೂರ್ವದಲ್ಲಿದ್ದ ನಿಷ್ಠೆ, ತ್ಯಾಗ, ಬದ್ಧತೆಗಳನ್ನು ಗಮನಕ್ಕೆ ತೆಗೆದುಕೊಂಡರೆ ಪತ್ರಿಕೆಗಳಿಗೆ, ದೂರದರ್ಶನ ಮತ್ತು ಆಕಾಶವಾಣಿಗಳಿಗೆ ಇರುವ

ಹೊಣೆಗಾರಿಕೆ ಮತ್ತು ಪ್ರಾಮುಖ್ಯತೆಗಳು ಸ್ಪಷ್ಟವಾಗುತ್ತವೆ. ಇಂಥ ಹೊಣೆಗಾರಿಕೆಯನ್ನು ಯುವ ತಲೆಮಾರಿಗೆ ತಿಳಿಸುವ, ಅದಕ್ಕೆ ಅಗತ್ಯವಾದ ತರಬೇತಿಯನ್ನು ನೀಡುವ ವ್ಯವಸ್ಥೆಯೇ ಮಾಯವಾಗುತ್ತಿದೆ. ನಮ್ಮ ಅರ್ಥ ವ್ಯವಸ್ಥೆಯ ಚಿತ್ರವೇ ತಲೆಕೆಳಗಾಗಿರುವ ಈ ಸನ್ನಿವೇಶದಲ್ಲಿ ದೊಡ್ಡ ಆದರ್ಶ, ಕನಸುಗಳಾಗಲಿ ನಮ್ಮ ಯುವಜನರಿಗೆ ಇಲ್ಲವಾಗುತ್ತಿವೆ. ಎಲ್ಲ ಕ್ಷೇತ್ರಗಳಂತೆ ಈ ಕ್ಷೇತ್ರವೂ ಸುಲಭ ಹಣ, ಅಧಿಕಾರ, ಕೀರ್ತಿಗಳ ಲೋಲುಪತೆಗೆ ಒಳಗಾಗಿದೆ. ಇದು ಒಟ್ಟಾರೆ ಬದುಕಿನ ಅವನತಿಯಾಗಿಯೂ ಕಾಣಿಸುತ್ತಿದೆ.

ತೀವ್ರ ಪೈಪೋಟಿ ಕಾರಣವಾಗಿ ಪತ್ರಿಕೆಗಳು ಮತ್ತು ದೂರದರ್ಶನಗಳು ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಪ್ರಬಲ ಹೋರಾಟಕ್ಕಿಳಿದಿವೆ ಎಂಬುದು ಸತ್ಯ. ಮೊದಲು ಅಸ್ತಿತ್ವ, ನಂತರ ಜಾಹೀರಾತು, ಹಣ, ಪ್ರಭಾವ ಇತ್ಯಾದಿ. ಜನಮಾನ್ಯತೆಯೇ ಸಿಕ್ಕದಿದ್ದರೆ ಅಸ್ತಿತ್ವವಾದರೂ ಎಲ್ಲಿದೆ ? ಈ ಕಾರಣದಿಂದಾಗಿಯೇ ತೀವ್ರ ಪೈಪೋಟಿ. ಸುದ್ದಿಯನ್ನು ಎಲ್ಲರಿಗಿಂತ ಮೊದಲು ಕೊಡಬೇಕೆಂಬ ಹುಮ್ಮಸ್ಸು, ಸುದ್ದಿಯನ್ನು ನೇರವಾಗಿ ಪಡೆಯುವುದಕ್ಕಾಗಿ ಸೆಣಸಾಟ ಇವೆಲ್ಲ ಕಾಣಿಸುತ್ತಿವೆ. ಸೈನಿಕರಂತೆ ಪ್ರಾಣವನ್ನು ಪಣವಾಗಿಟ್ಟು ರಣರಂಗಕ್ಕೆ ಹೋಗಲೂ ನಮ್ಮ ವರದಿಗಾರರಲ್ಲಿ ಕೆಲವರಾದರೂ ಧೈರ್ಯ ತೋರುತ್ತಿದ್ದಾರೆ. ಆದರೆ ಅದೆಲ್ಲ ಅಲ್ಲಿಗೇ ನಿಲ್ಲುವುದಿಲ್ಲ. ಒಟ್ಟಾರೆಯಾಗಿ ಹೊಮ್ಮುವ ಧ್ವನಿಯನ್ನು ನಿಯಂತ್ರಿಸಲು ಮತ್ತು ತಮ್ಮದೇ ಹಿತಕ್ಕೆ ಅದನ್ನು ಬಳಸಿಕೊಳ್ಳಲು ಟಿವಿ ಮತ್ತು ಪತ್ರಿಕೆಗಳ ಮಾಲಿಕರು ಪ್ರಯತ್ನಿಸುತ್ತಿರುತ್ತಾರೆ.

ಇತ್ತೀಚೆಗೆ ಭಯೋತ್ಪಾದಕರು ಮುಂಬೈ ಮೇಲೆ ನಡೆಸಿದ ದಾಳಿಯನ್ನೇ ಉದಾಹರಣೆಯಾಗಿ ನೋಡಬಹುದು. ಯುದ್ಧರಂಗವಾಗಿ ಪರಿವರ್ತನೆಗೊಂಡ ಈ ಘಟನೆಯನ್ನು ವರದಿಮಾಡಲು ಹೋಗಿ ಎಎಫ್‌ಪಿಯ ವರದಿಗಾರರೊಬ್ಬರು ಗುಂಡೇಟು ತಿಂದದ್ದು, ಇತರ ಸಂಸ್ಥೆಗಳ ವರದಿಗಾರರು ಪ್ರಾಣಾಪಾಯವನ್ನು ಲೆಕ್ಕಿಸದೆ ಕಾರ್ಯಪ್ರವೃತ್ತರಾದದ್ದನ್ನು ಯಾರಾದರೂ ಮೆಚ್ಚಲೇಬೇಕು. ದೂರದರ್ಶನದ ಒಂದು ವಾಹಿನಿ ಈ ಘಟನೆಯನ್ನು ಸಮರ್ಥ ರೀತಿಯಲ್ಲಿ ವರದಿ ಮಾಡುತ್ತ ಇನ್ನೊಂದು ಕೆಲಸವನ್ನೂ ಮಾಡಿತು. ಇಡೀ ರಾಷ್ಟ್ರವೇ ಇಂಥ ಹೊತ್ತಿನಲ್ಲಿ ಒಗ್ಗಟ್ಟನ್ನು ಪ್ರದರ್ಶಿಸುತ್ತಿದೆ ಎಂಬುದನ್ನು ತೋರಿಸುತ್ತಲೇ ಜನರ ಭಾವನಾತ್ಮಕ ಎಳೆಯನ್ನು ಹಿಡಿದೆಳೆದು ಸಾರ್ವಜನಿಕ ಅಭಿಪ್ರಾಯವನ್ನು ಪ್ರಕಟಿಸುವ ನೆಪದಲ್ಲಿ ಯುದ್ಧ ನಡೆಯಬೇಕೆಂಬ ಒತ್ತಾಯವನ್ನು ರೂಪಿಸಿತು. ಚಿಕ್ಕ ಚಿಕ್ಕ ಮಕ್ಕಳನ್ನೂ ಈ ಕಾರ್ಯಕ್ಕೆ ಬಳಸಿಕೊಂಡು 'ಯುದ್ಧ ಬೇಕು' ಎನ್ನುವ 'ಜನಾಭಿಪ್ರಾಯವನ್ನು' ಪ್ರಕಟಿಸಲು ನೋಡಿತು. ವಸ್ತುನಿಷ್ಠವಾಗಿ ಸುದ್ದಿಯನ್ನು ನೀಡಬೇಕಾದ ವಾಹಿನಿಯೊಂದು ಭಾವೋದ್ರೇಕಕ್ಕೆ ಒಳಗಾದಂತೆ ಯುದ್ಧಕ್ಕೆ ಒಲವನ್ನು ತೋರಿಸುತ್ತಿತ್ತು. ಯುದ್ಧ ಎಂದರೆ ಭಯೋತ್ಪಾದಕರಿಗೆ ತರಬೇತಿ ನೀಡಿದ ಪಾಕಿಸ್ತಾನದ ವಿರುದ್ಧ ಯುದ್ಧ. ಮುಂಬೈ ಘಟನೆ ಆದೇ ತಾನೆ ನಡೆದಿತ್ತು. ಒಂದು ರಾಷ್ಟ್ರದ ಘನತೆಗೆ ಪೆಟ್ಟುಕೊಡುವಂತೆ, ರಾಷ್ಟ್ರದ ಭದ್ರತಾ ವ್ಯವಸ್ಥೆಯನ್ನು, ಬೇಹುಗಾರಿಕಾ ಜಾಲವನ್ನು ಭೇದಿಸಿ ಭಯೋತ್ಪಾದಕರು ಮುಂಬೈ ಮೇಲೆ ಎರಗಿದ್ದರು. ಇದು ರಾಷ್ಟ್ರಕ್ಕೇ ಸವಾಲೆಸೆದ ಸನ್ನಿವೇಶ. ಮುಂಬೈ ಘಟನೆಯ ವಿವರಗಳನ್ನು ಮತ್ತು ಭಯೋತ್ಪಾದಕರ ಪೂರ್ವಾಪರಗಳನ್ನು ತಿಳಿಯುವುದರಲ್ಲಿ ಸಂಬಂಧಿಸಿದ ಅಧಿಕಾರಿಗಳು ಬೆವರು ಹರಿಸುತ್ತಿದ್ದಾಗ ಈ ವಾಹಿನಿ ಯುದ್ಧದ ಮಾತನಾಡುತ್ತಿತ್ತು. ಪಾಕ್ ವಿರುದ್ಧ ಮತ್ತು ಭಯೋತ್ಪಾದಕರ ವಿರುದ್ಧ ಭಾವೋದ್ರೇಕದ ಅಭಿಪ್ರಾಯಗಳನ್ನು ರೂಪಿಸುವುದು ಎಂದರೆ ಭಾರತದಲ್ಲಿ ಅದರ ಪರಿಣಾಮ ಏನು ? ಇಂಥ ಅಭಿಪ್ರಾಯಗಳು ಇಲ್ಲಿನ ಮುಸ್ಲಿಮರ ವಿರುದ್ಧವೂ ತಿರುಗುವ ಅಪಾಯದ ಸಾಧ್ಯತೆ ಮತ್ತು ಅದರ ಪರಿಣಾಮಗಳನ್ನು ಉಪೇಕ್ಷಿಸಿ ಇಂಥ ಕೆಲಸಕ್ಕೆ ಈ ವಾಹಿನಿ ತೊಡಗಿತ್ತು. ಅಥವಾ ಅದರ ಉದ್ದೇಶವೇ ಇದಾಗಿರ ಬಹುದೇ ಎಂಬ ಅನುಮಾನಕ್ಕೂ ಎಡೆಮಾಡಿಕೊಡುವಂತಿತ್ತು ಅದರ ಕಾರ್ಯವೈಖರಿ.

ಈ ಅನುಮಾನಕ್ಕೆ ಮುಂದೆ ಪುಷ್ಟಿಕೊಡುವ ಸಂದರ್ಭವೂ ಒದಗಿಬಂತು. ಮುಂಬೈ ಘಟನೆಯಲ್ಲಿ ಗುಂಡೇಟಿಗೆ ಬಲಿಯಾದ ಸಮರ್ಥ ಪೊಲೀಸ್ ಅಧಿಕಾರಿ ಹೇಮಂತ್ ಕರ್ಕರೆ ಬಗ್ಗೆ ಕೇಂದ್ರ ಸಚಿವ ಎ. ಆರ್. ಅಂತುಳೆ ವ್ಯಕ್ತಪಡಿಸಿದ ಅಭಿಪ್ರಾಯ 'ಬೇಜವಾಬ್ದಾರಿತನದ್ದೇ' ಆಗಿರಬಹುದು. ಆದರೆ ಆತ ಕೇಂದ್ರಸಚಿವ; ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯ ಆತನಿಗಿದೆ. ಮೇಲೆ ಸೂಚಿಸಿದ ವಾಹಿನಿಯ ಮುಖ್ಯಸ್ಥರು ಅಂತುಳೆ ಅವರೊಂದಿಗೆ ನಡೆಸಿದ ಸಂದರ್ಶನ ಎಷ್ಟೊಂದು ಅಸಹ್ಯವಾಗಿತ್ತೆಂದರೆ ನಮ್ಮದು ಪ್ರಜಾಪ್ರಭುತ್ವವೇ, ನಮ್ಮ ಮಾಧ್ಯಮ ಪ್ರತಿನಿಧಿಗಳು ಯಾಕೆ ಇಷ್ಟೊಂದು ಅಸಹನೆಯಿಂದ ವರ್ತಿಸುತ್ತಾರೆ, ಅವರು ಯಾವ ಹಿತಾಸಕ್ತಿಯನ್ನು ಪ್ರತಿನಿಧಿಸುತ್ತಾರೆ ಎಂಬೆಲ್ಲ ಪ್ರಶ್ನೆಗಳು ಏಳುವಂತೆ ಮಾಡಿತು. ಅಂತುಲೆ ಮುಸ್ಲಿಮನಾದ ಮಾತ್ರಕ್ಕೆ ಆತನ ರಾಷ್ಟ್ರನಿಷ್ಠೆಯನ್ನು ಶಂಕಿಸಬೇಕೆ ? ಆತ ಹೇಳಿರುವ ಅಭಿಪ್ರಾಯದಲ್ಲಿ ಸತ್ಯಾಂಶವೇನಾದರೂ ಇದೆಯೇ ? ಇಂಥ ಕುತೂಹಲ ಮಾಧ್ಯಮದಲ್ಲಿರುವವರಿಗೆ ಇರ ಬೇಕಾಗುತ್ತದೆ. ಅಂತುಳೆಯನ್ನು ಪ್ರಶ್ನಿಸುತ್ತಿದ್ದ ಆ ವಾಹಿನಿಯ ವ್ಯಕ್ತಿ ಉದ್ರೇಕಗೊಂಡು ತಾನೇ ಮಾತನಾಡುತ್ತಿದ್ದ, ಅಂತುಳೆಗೆ ಮಾತನಾಡುವುದಕ್ಕೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಇನ್ನೊಂದು ಸಂದರ್ಭದಲ್ಲಿ ಅಂತುಳೆಗೆ ಮುತ್ತಿಗೆ ಹಾಕಿದ್ದ ಮಾಧ್ಯಮ ಪ್ರತಿನಿಧಿಗಳ ಹಿಂಡೂ ಹೀಗೆಯೇ ನಡೆದುಕೊಂಡಿತ್ತು. ಇದು ಸರಿಯಾದ ಕ್ರಮವೇ? ಒಂದು ವೇಳೆ ಬಾಳ ಠಾಕ್ರೆಯೊಂದಿಗೆ ಮಾತನಾಡುವ ಸನ್ನಿವೇಶ ಉಂಟಾಗಿದ್ದರೆ ನಮ್ಮ ಮಾಧ್ಯಮ ಪ್ರತಿನಿಧಿಗಳು ಇಷ್ಟೊಂದು ಒರಟಾಗಿ, ಉದ್ರೇಕಗೊಂಡು ಮಾತನಾಡುತ್ತಿದ್ದರೆ ?

ನಮ್ಮ ಮಾಧ್ಯಮಗಳ ಕಾರ್ಯನಿರ್ವಹಣೆಯನ್ನು ಸೂಕ್ಷ್ಮವಾಗಿ ಗಮನಿಸಲು ಮುಂಬೈ ಘಟನೆ ಇನ್ನೂ ಕೆಲವು ಆಯಾಮಗಳನ್ನು ಒದಗಿಸುತ್ತದೆ. ಭಯೋತ್ಪಾದಕರ ದಾಳಿ ನಡೆದದ್ದು ಮುಂಬೈನ ಪ್ರತಿಷ್ಠಿತ ಹೊಟೇಲ್‌ಗಳ ಮೇಲೆ ಮಾತ್ರವಲ್ಲ, ಛತ್ರಪತಿ ಶಿವಾಜಿ ಟರ್ಮಿನಸ್ ಮೇಲೂ ನಡೆಯಿತು. ಭಯೋತ್ಪಾದಕರು ಮೊದಲು ಈ ರೈಲು ನಿಲ್ದಾಣದ ಮೇಲೆಯೇ ದಾಳಿ ನಡೆಸಿದ್ದು. ಅಲ್ಲಿ ೫೬ ಜನರನ್ನು ಕೊಂದು ಸುಮಾರು ನೂರು ಜನರನ್ನ ಗಾಯಗೊಳಿಸಿದ ನಂತರವೇ ಪ್ರತಿಷ್ಠಿತ ಹೋಟೆಲ್‌ಗಳ ಮೇಲೆ ದಾಳಿ ನಡೆಸಿದ್ದು. ಆದರೆ ನಮ್ಮ ಟಿವಿ ವಾಹಿನಿಗಳ ಏಕಮುಖಿ ಉತ್ಸಾಹ ಹೇಗಿತ್ತೆಂದರೆ ಶಿವಾಜಿ ಟರ್ಮಿನಸ್ ಮೇಲೆ ದಾಳಿ ನಡೆದಿರುವ ಸಮಾಚಾರವೇ ಜನರಿಗೆ ಬೇಗ ತಿಳಿಯಲಿಲ್ಲ. ಅನೇಕ ಘಂಟೆಗಳ ನಂತರವಷ್ಟೆ ಈ ಸಮಾಚಾರ ತಿಳಿದದ್ದು. ಮುಂದೆಯೂ ಟಿವಿಗಳ 'ಲೈವ್' ಪ್ರಸಾರ ಕೇಂದ್ರೀಕೃತವಾದದ್ದು ಹೋಟೇಲುಗಳ ಮೇಲೆಯೇ.

ನಮ್ಮ ಮಾಧ್ಯಮಗಳು ಅಷ್ಟಾಗಿ ಪ್ರಚಾರ ಕೊಡದ ಮಾಲೆಗಾಂವ್ ಸ್ಫೋಟದ ಘಟನೆಯನ್ನೇ ನೋಡಿ. ಆ ಘಟನೆಗೆ ಹೆಚ್ಚಿನ ಪ್ರಾಮುಖ್ಯತೆ ಮಾಧ್ಯಮಗಳಲ್ಲಿ ಯಾಕೆ ಸಿಕ್ಕಲಿಲ್ಲ? ಮುಂಬೈ ಭಯೋತ್ಪಾದಕರ ಕೃತ್ಯದಲ್ಲಿ ಜೀವ ಸಮರ್ಪಿಸಿದ ಭಯೋತ್ಪಾದಕ ವಿರೋಧೀ ಕಾರ್ಯಾಚರಣೆ ದಳದ ಮುಖ್ಯಸ್ಥ ಹೇಮಂತ್ ಕರ್ಕರೆ ಮಾಲೇಗಾಂವ್ ಘಟನೆಯ ತನಿಖೆಯ ನೇತೃತ್ವವನ್ನು ವಹಿಸಿದ್ದರು. ಈ ತನಿಖೆ ಅನೇಕ ಮುಖ್ಯ ಸಂಗತಿಗಳನ್ನು ಹುಡುಕಿ ತೆಗೆದಿತ್ತು. ಭಯೋತ್ಪಾದಕ ಕೃತ್ಯಗಳ ಜೊತೆ ಬಲಪಂಥೀಯ ಸಂಬಂಧ ಈ ಘಟನೆಯಲ್ಲಿ ಕಾಣಿಸಿತ್ತು. ವಿಶ್ವ ಹಿಂದೂ ಪರಿಷತ್ತಿನ ಪ್ರವೀಣ್ ತೊಗಾಡಿಯಾ, ಕೆಲವು ಸಾಧು ಸಂತರು ಭಯೋತ್ಪಾದಕ ಕೃತ್ಯಗಳ ಜೊತೆ ಸಂಬಂಧ ಇಟ್ಟುಕೊಂಡಿರುವುದು, ಹಣಕಾಸು ನೆರವು ನೀಡಿರುವುದು, ಇತ್ಯಾದಿ ಅನೇಕ ಆರೋಪಗಳಿದ್ದವು. ಹೇಮಂತ್ ಕರ್ಕರೆ ಬಹಳ ಮುಖ್ಯವಾದ ದಾಖಲೆಗಳನ್ನು ಮಾಲೇಗಾಂವ್ ಘಟನೆಗೆ ಸಂಬಂಧಿಸಿದಂತೆ ವಶಪಡಿಸಿಕೊಂಡು ತನಿಖೆ ನಡೆಸಿದ್ದರು.

ನಮ್ಮ ಬಹುಪಾಲು ಮಾಧ್ಯಮಗಳ ಮೇಲೆ ಬಲಪಂಥೀಯ ರಾಜಕೀಯ ಪ್ರಭಾವ ಬೀರಿರಬಹುದೆ ? ಇಲ್ಲವಾದರೆ ಈ ಘಟನೆಯ ಬಗ್ಗೆ ಮಾಧ್ಯಮಗಳ ನಿರಾಸಕ್ತಿ ಯಾಕೆ ? ಇಂಥ ಪ್ರಶ್ನೆಗಳಿಗೆ ಅವಕಾಶ ನೀಡುವಂತೆ ಮಾಧ್ಯಮಗಳು ವರ್ತಿಸಿದ್ದಂತೂ ನಿಜ.

ನಮ್ಮ ಕರ್ನಾಟಕದ ಉದಾಹರಣೆಗಳಿಗೆ ಬರುವುದಾದರೆ, ಇತಿಹಾಸದ ಪುಟಗಳಿಂದ ಬಸವಲಿಂಗಪ್ಪನವರ 'ಬೂಸಾ ಪ್ರಕರಣ'ವನ್ನು ಎತ್ತಿ ತೆಗೆಯಬಹುದು. ಇದೊಂದು ದೊಡ್ಡ ವಿವಾದವನ್ನು ಸೃಷ್ಟಿಸಿತು. ಈ ಮಾತಿಗಾಗಿ ಬಸವಲಿಂಗಪ್ಪ ತಮ್ಮ ಸಚಿವ ಸ್ಥಾನವನ್ನು ಕಳೆದುಕೊಂಡರು. ನಿಜಕ್ಕೂ ಈ ವಿವಾದ ಸೃಷ್ಟಿಯಾದದ್ದು ಮಾಧ್ಯಮಗಳಿಂದ, ವಸ್ತುನಿಷ್ಠತೆಯನ್ನು ಕಡೆಗಣಿಸಿ ಪೂರ್ವಗ್ರಹಗಳಿಂದ ರೂಪಿಸಿದ ವರದಿಗಳಿಂದ. ಬಸವಲಿಂಗಪ್ಪ ನಮ್ಮ ಜಾತಿ ವ್ಯವಸ್ಥೆಯ ತೀರ ಕೆಳಸ್ತರದಿಂದ ಬಂದವರು ಎಂಬುದನ್ನು ನೆನೆದರೆ ಮತ್ತು ಆಗ ಮಾಧ್ಯಮಗಳಲ್ಲಿ ಕೆಲಸ ಮಾಡುತ್ತಿದ್ದವರಲ್ಲಿ ಬಹುಪಾಲು ಸಿಬ್ಬಂದಿ

**ಬಂದಾವ್ರೋ ನೆನಪುಗಳು !**

ಹಸಿರಾಗಿ ಹಳೆಯ ನೆನಪುಗಳು

ಉಕ್ಕಿ ಹರಿದು ಬಂದಾವು !

ಗತವೈಭವದ ರಥವ

ಹಿಡಿದೆಳೆದು ತಂದಾವು !!

**ಕುಸುಮ ನಕೋಸಾ ಕರಾಳೆ**
ಉಪನ್ಯಾಸಕಿ, 'ನಕೋಸ', ೧ನೇ ಮುಖ್ಯರಸ್ತೆ, ಶ್ರೀ ನಗರ
ಧಾರವಾಡ - ೫೮೦ ೦೦೩

ಮೇಲ್ ಸ್ತರದವರು ಎಂಬ ಅಂಶಗಳನ್ನು ಗಣನೆಗೆ ತೆಗೆದುಕೊಂಡರೆ ಈ ವಿವಾದ ಹುಟ್ಟಿಕೊಂಡದ್ದಕ್ಕೆ ಕಾರಣಗಳನ್ನು ಕಂಡುಕೊಳ್ಳಬಹುದು.

ಮುಂದೆ ಕರ್ನಾಟಕದಲ್ಲಿ ನಡೆದ ಭಾಷಾ ಚಳವಳಿ, ದಲಿತ ಚಳವಳಿ, ರೈತ ಚಳವಳಿಗಳು ತಮ್ಮ ಧ್ವನಿ ಪಡೆದುಕೊಂಡದ್ದು ಜನ ಬೆಂಬಲದಿಂದಲೇ ಹೊರತು ಮಾಧ್ಯಮಗಳ ಬೆಂಬಲದಿಂದ ಅಲ್ಲ. ಬಂಡವಾಳ, ಜಾಹೀರಾತು, ಸರ್ಕಾರದ ಕೃಪೆ ಇತ್ಯಾದಿಗಳಿಂದ ಮುಕ್ತವಾದ ಕೆಲವು ಸಣ್ಣ ಪತ್ರಿಕೆಗಳು ತಮ್ಮ ದಿಟ್ಟ ನಿಲುವು ಮತ್ತು ಧೀರ ನಡೆಗಳಿಂದ ಜನಮನ್ನಣೆಗೆ ಪಾತ್ರವಾದವು. ಇಂಥ ಅಪವಾದಗಳು ಎಲ್ಲ ಕಾಲದಲ್ಲೂ ಇರುತ್ತವೆ. ಅಂಥ ಪತ್ರಿಕೆಗಳ, ಸಂಸ್ಥೆಗಳ ಬಗ್ಗೆ ಜನ ಗೌರವವನ್ನು ಕೊಡುತ್ತಲೇ ಇರುತ್ತಾರೆ ಎಂಬುದನ್ನು ಮರೆಯಲಾಗದು.

ಇತ್ತೀಚಿನ ಒಂದು ಪ್ರಕರಣವನ್ನು ನೋಡೋಣ; ಕರ್ನಾಟಕ ಅನೇಕ ಜ್ವಲಂತ ಸಮಸ್ಯೆಗಳನ್ನು ಎದುರಿಸುತ್ತಿರುವ ಹೊತ್ತಿನಲ್ಲಿ ಅಧಿಕ ಪ್ರಸಾರಸಂಖ್ಯೆಯ ಒಂದು ಪತ್ರಿಕೆ ಸಾರ್ವಜನಿಕ ಚರ್ಚೆಗೆ ವೇದಿಕೆಯನ್ನು ಕಲ್ಪಿಸಿಕೊಟ್ಟುದು - ಮತಾಂತರ ಕುರಿತು. ಅದು ಎಂಥ ಸಂದರ್ಭ ಎಂದರೆ ಕರ್ನಾಟಕದಲ್ಲಿಯೂ ಬಲಪಂಥೀಯ ಸಂಘಟನೆಗಳು, ಸಂಘ ಪರಿವಾರದ ವಿವಿಧ ಅಂಗಸಂಸ್ಥೆಗಳು ಮತಾಂತರದ ಪ್ರಕರಣಗಳನ್ನು ಭೂತಾಕಾರವಾಗಿ ಬೆಳೆಸುತ್ತ, ಬೆಂಕಿಗೆ ತುಪ್ಪ ಸುರಿದು, ಹಿಂಸೆಯನ್ನು ನಾಡಿನ ಉದ್ದಗಲಕ್ಕೂ ಹಬ್ಬಿಸಲು ಹೆಣಗುತ್ತಿದ್ದ ಸಂದರ್ಭ. ಇಂಥ ಹೊತ್ತಿನಲ್ಲಿ ಈ ಪತ್ರಿಕೆ ಜನಸಮುದಾಯಕ್ಕೆ ದೊಡ್ಡ ಸೇವೆಯನ್ನು ಮಾಡುವಂತೆ ಈ ವಿಚಾರದ ಬಗ್ಗೆ ಚರ್ಚೆಯನ್ನು ಏರ್ಪಡಿಸಿತು. ಈ ಚರ್ಚೆಯನ್ನು ಆರಂಭಿಸಿದವರು, ಅವರು ಮಂಡಿಸಿದ ವಾದ ಸರಣಿ ಮತ್ತು ಇದನ್ನು ಬೆಂಬಲಿಸಿ ಮುಂದೆ ಚರ್ಚೆಯನ್ನು ಬೆಳೆಸಿದವರು – ಇದನ್ನೆಲ್ಲ ಗಮನಿಸಿದರೆ ಪತ್ರಿಕೆಯ ಉದ್ದೇಶ ಏನೆಂಬುದು ಸ್ಪಷ್ಟವಾಗುತ್ತಿತ್ತು.

ಯುದ್ಧವನ್ನು, ಹಿಂಸೆಯನ್ನು ಪ್ರಚೋದಿಸುವ, ಜಾತಿ ಮತವನ್ನು ಬೆಂಬಲಿಸುವ ಸಾಧನಗಳನ್ನಾಗಿ ಸಾರ್ವಜನಿಕ ಸಂವಹನ ಮಾಧ್ಯಮಗಳನ್ನು ಬಳಸುವಾಗ, ಆ ಮಾಧ್ಯಮಗಳಲ್ಲಿ ಕೆಲಸ ಮಾಡುವವರೇ ತಮ್ಮ ಅಂತಸ್ಸಾಕ್ಷಿಗೆ ಉತ್ತರ ಕೊಟ್ಟುಕೊಳ್ಳಬೇಕಾಗುತ್ತದೆ. ಇಲ್ಲವಾದರೆ ಅಭಿವ್ಯಕ್ತಿ ಸ್ವಾತಂತ್ರ್ಯದ ಹೊಣೆಗಾರಿಕೆ ಏನು ಎಂಬುದರ ವ್ಯಾಪಕ ಮತ್ತು ವಸ್ತುನಿಷ್ಠ ಚರ್ಚೆ ಸಾರ್ವಜನಿಕವಾಗಿ ನಡೆಯಬೇಕಾಗುತ್ತದೆ. ನಮ್ಮದು ಪ್ರಜಾಪ್ರಭುತ್ವ ರಾಷ್ಟ್ರವಾಗಿರುವ ಕಾರಣ ಇದೆಲ್ಲಕ್ಕೂ ಅವಕಾಶವಿದೆ. ಹೊಣೆಗಾರಿಕೆಯನ್ನು ಅರ್ಥಮಾಡಿಕೊಳ್ಳಬೇಕಾದದ್ದು ನಮ್ಮ ಕರ್ತವ್ಯ ಕೂಡ.

ಇನ್ನು ಕ್ರೈಮ್ ಮತ್ತು ಸೆಕ್ಸ್‌ಗಳು ನಮ್ಮ ಟಿವಿ ವಾಹಿನಿಗಳಲ್ಲಿ ಪಡೆದುಕೊಳ್ಳುತ್ತಿರುವ ಪ್ರಾಮುಖ್ಯತೆಯೂ ಚರ್ಚೆಗೆ ಒಳಪಡಬೇಕು. ಇವುಗಳ ಮೇಲೆ ಯಾವ ನಿಯಂತ್ರಣವೂ ಇಲ್ಲವಾಗಿದೆ. ಎಳೆಯ ಮನಸ್ಸುಗಳ ಮೇಲೆ ಇವು ಮಾಡುವ ದುಷ್ಪರಿಣಾಮಗಳನ್ನಂತೂ ಯಾರೂ ಗಮನಿಸುತ್ತಲೇ ಇಲ್ಲ ಎನಿಸುತ್ತಿದೆ.

೬

ನಮ್ಮ ನಾಟಕ ಮತ್ತು ಸಿನೆಮಾಗಳನ್ನು ನಾನಿಲ್ಲಿ ವಿಸ್ತಾರವಾಗಿ ಚರ್ಚಿಸಿಯೇ ಇಲ್ಲ. ಅವೂ ಸೃಜನಶೀಲ ಕ್ರಿಯೆಗಳೇ ಮತ್ತು ಸಾರ್ವಜನಿಕ ಸಂವಹನದ ಮುಖ್ಯ ಮಾಧ್ಯಮಗಳೇ. ಸೃಜನಶೀಲ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಎಲ್ಲ ಶಕ್ತಿಗಳೂ ಈ ಮಾಧ್ಯಮಗಳ ಮೇಲೆ ನಿರಂತರವಾಗಿ ನಿಯಂತ್ರಣ ಹೇರಲು ನೋಡುತ್ತಿರುತ್ತವೆ. ಅದನ್ನು ಪ್ರತಿರೋಧಿಸಿ ನಿಲುವುದೇ ಸೃಜನಶೀಲತೆಯ ಮುಖ್ಯ ಗುಣ.

೭

ಸ್ವಾತಂತ್ರ್ಯ ಎನ್ನುವುದು ನಿಜಕ್ಕೂ ಇನ್ನೊಬ್ಬರು ಕೊಡುವುದಲ್ಲ. ಅದು ತನಗೆ ತಾನೇ ಪಡೆದುಕೊಳ್ಳುವುದು. ಆದರೆ ಹಾಗೆ ಪಡೆದುಕೊಳ್ಳುವಾಗ ಒಂದು ರಾಷ್ಟ್ರದ, ಜನಸಮುದಾಯದ ಸಂದರ್ಭ, ಅದಕ್ಕಿರುವ ಚೌಕಟ್ಟುಗಳನ್ನು ಗಮನಿಸಬೇಕಾಗುತ್ತದೆ. ಈ ಕಾರಣದಿಂದಾಗಿಯೇ ಸಂವಿಧಾನ ಬಹಳ ಮುಖ್ಯವಾದದ್ದು. ಸಂವಿಧಾನವನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಬೇಕಾದದ್ದು ಈ ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯ. 'ಒಂದು ಕೋಮಿನ ಭಾವನೆಗಳು' 'ಸಾರ್ವಜನಿಕ ಹಿತದೃಷ್ಟಿ', 'ರಾಷ್ಟ್ರದ ದೃಷ್ಟಿಯಿಂದ ನೋಡುವುದಾದರೆ' ಇತ್ಯಾದಿ ಮಾತುಗಳೆಲ್ಲ ರಾಜಕೀಯದಿಂದ ಕಲುಷಿತವಾದವುಗಳು. ಇವುಗಳನ್ನೆಲ್ಲ ತಿರಸ್ಕರಿಸಿ ಹೊಸ ಅರ್ಥವನ್ನು, ಹೊಸ ಪರಿಭಾಷೆಯನ್ನು ಕಂಡುಕೊಂಡು, ನಿಜವಾದ ಅರ್ಥದ ಕಡೆಗೆ ನಡೆಯಬೇಕಾಗಿರುವ ಹೊಣೆ ಎಲ್ಲ ಸೃಜನಶೀಲರ ಮೇಲಿದೆ; ಹಾಗೆಯೇ ಎಲ್ಲ ಸಾರ್ವಜನಿಕ ಸಂವಹನ ಮಾಧ್ಯಮಗಳ ಮೇಲೂ ಇದೆ.

ಜಿ. ಪಿ. ಬಸವರಾಜು
೫೦-೧೦, 'ಬಿಯಾಸ್' ೧೧-ಎ ಬ್ಲಾಕ್ ರಂಗರಾವ್ ಕಾಲೋನಿ, ವಾಸು ಲೇಔಟ್, ಮೈಸೂರು - ೫೭೦ ೦೨೨

## ಸಾದರ ಸ್ವೀಕಾರ

**ಪ್ರೀತಿ ಹುಟ್ಟಿಸುವ ಜಗತ್ತು** (ವೈಚಾರಿಕ ಲೇಖನಗಳು) ಬಿ. ಪಿ. ಶಿವಾನಂದರಾವ್
**ಪುಟ : ೧೬೦** **ಬೆಲೆ : ರೂ. ೯೦**
**ಜಾಗೃತಿ ಪ್ರಿಂಟರ್ಸ್**, ನಂ. ೫೬/೧-೬, ನರಸಿಂಹಯ್ಯ ಗಾರ್ಡನ್
ಕೊಟ್ಟಿಗೆ ಪಾಳ್ಯ, ಮಾಗಡಿರಸ್ತೆ, ಬೆಂಗಳೂರು-೫೬೦ ೦೯೧

**ಪಡುವಣದ ಕಡಲು** (ಅಂಕಣಬರಹಗಳು) ಸುನಂದಾ ಪ್ರಕಾಶ ಕಡಮೆ
**ಪುಟ : ೧೦೪** **ಬೆಲೆ : ರೂ. ೪೫**
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲುರಸ್ತೆ
ಗಾಂಧಿನಗರ, ಬಳ್ಳಾರಿ-೫೮೩೧೦೩

**ಕರ್ತವ್ಯದ ಕರೆ** (ರಾಷ್ಟ್ರೀಯಚಾರಿತ್ರ್ಯ ನಿರ್ಮಾಣದ ಕಥೆಗಳು) ಪಿ. ವಿಜಯಕುಮಾರ
**ಪುಟ : ೮೪** **ಬೆಲೆ : ರೂ. ೬೦**
**ಕನ್ನಡ ಸಾಹಿತ್ಯ ಮಂಟಪ**, ೭೩೩, 'ಕವಿರಶ್ಮಿ', ರಾಮತೀರ್ಥನಗರ, ಕಣಬರಗಿ, ಬೆಳಗಾವಿ

**ಚಿಂತನಹಾರ** (ಲೇಖನ ಸಂಗ್ರಹ) ಡಾ|| ಸಿ.ಪಿ.ಕೆ.
**ಪುಟ : ೧೬೭** **ಬೆಲೆ : ರೂ. ೮೦**
**ಶ್ರೀಮದ್ವೀರಶೈವ ಸದ್ಬೋಧನಾ ಸಂಸ್ಥೆ** ಶ್ರೀ ಜಗದ್ಗುರು ರಂಭಾಪುರಿ ವೀರ ಸಿಂಹಾಸನ ಮಹಾ ಸಂಸ್ಥಾನ ಪೀಠ, ಬಾಳೆಹೊನ್ನೂರು - ೫೭೭೧೧೨, ಚಿಕ್ಕಮಗಳೂರು ಜಿಲ್ಲೆ

**ಪಂಪ : ಕೆಲವು ಮುಖಗಳು** (ಲೇಖನ ಸಂಕಲನ) ಡಾ|| ಸಿ.ಪಿ.ಕೆ.
**ಪುಟ : ೧೦೦** **ಬೆಲೆ : ರೂ. ೫೦**
**ತನುಮನು ಪ್ರಕಾಶನ**, 'ಕಾವ್ಯಲೋಕ', ಎಚ್.ಐ.ಜಿ. ೧೨೬೭
೧ನೇ ಕ್ರಾಸ್, ಶ್ರೀರಾಂಪುರ ಬಡಾವಣೆ, ೨ನೇ ಹಂತ
ಮೈಸೂರು - ೫೭೦೦೨೩

**ವಿಭಾವನೆ** (ಲೇಖನ ಸಂಗ್ರಹ) ಡಾ|| ಸಿ.ಪಿ.ಕೆ.
**ಪುಟ : ೧೬೦** **ಬೆಲೆ : ರೂ. ೧೦೦**
**ಅಖಿಲಾ ಏಜೆನ್ಸೀಸ್**, ರೇಣುಕಾಚಾರ್ಯ ದೇವಸ್ಥಾನದ ರಸ್ತೆ
ಲಕ್ಷ್ಮಿ ಟಾಕೀಸ್ ಹಿಂಭಾಗ, ಮೈಸೂರು - ೫೭೦೦೨೪

**ರನ್ನ : ಕೆಲವು ಮುಖಗಳು** (ಲೇಖನ ಸಂಗ್ರಹ) ಡಾ|| ಸಿ.ಪಿ.ಕೆ.
**ಪುಟ : ೬೪** **ಬೆಲೆ : ರೂ. ೩೨**
**ಮಾನಸ ಬುಕ್ ಹೌಸ್**, 'ಕಾವ್ಯಲೋಕ', ಎಚ್. ಐ. ಜಿ. - ೧೨೬೭ ೧ನೇ ಕ್ರಾಸ್, ಶ್ರೀರಾಂಪುರ ಬಡಾವಣೆ, ೨ನೇ ಹಂತ
ಮೈಸೂರು - ೫೭೦೦೨೩

**ಪದ ಪದರ** (ಸುನೀತಗಳು) ಡಾ|| ಸಿ.ಪಿ.ಕೆ.
**ಪುಟ : ೮೪** **ಬೆಲೆ : ರೂ. ೬೦**

**ಮುಕ್ತಾವಳಿ** (ಮುಕ್ತಕ ಪದ್ಯಗಳು) ಡಾ|| ಸಿ.ಪಿ.ಕೆ.
**ಪುಟ : ೫೬** **ಬೆಲೆ : ರೂ. ೪೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಚಿತ್ರಭಾನು ಪ್ರಕಾಶನ**, ೨೨೬೫/೧೯, 'ಭಾರತಿ', ೬ನೇ ಕ್ರಾಸ್
೪ನೇ ಮೇನ್, ವಿನಾಯಕನಗರ, ಮೈಸೂರು - ೫೭೦೦೧೨

# ಬರಗೂರು ರಾಮಚಂದ್ರಪ್ಪ ಅವರ ಸಮುದಾಯದತ್ತ ಸಿನೆಮಾ

# ಏಕಲವ್ಯ

ಚನ್ನಬಸವ ಪುತ್ತೂರ್ಕರ

ಪ್ರಗತಿಪರ ಚಿಂತನೆಯ ಪ್ರತಿಭಾವಂತ ನಿರ್ದೇಶಕರಲ್ಲೊಬ್ಬರಾದ ಬರಗೂರು ರಾಮಚಂದ್ರಪ್ಪ ಅವರ ಸಮುದಾಯದತ್ತ ಸಿನೆಮಾ ಸರಣಿಯ ಎರಡನೆಯ ಕೃತಿ 'ಏಕಲವ್ಯ' ಚಲನಚಿತ್ರವನ್ನು ರಾಜ್ಯಾದ್ಯಂತ ಸುಲಭವಾಗಿ ತಲುಪಿಸುವ ಅಭಿಯಾನದಂತೆ ಇತ್ತೀಚೆಗೆ ಚಿತ್ರದುರ್ಗದ ಶಂಕರ್ ಚಿತ್ರಮಂದಿರದಲ್ಲಿ ಪ್ರದರ್ಶನ ಕಂಡಿತು. ಚಿತ್ರದುರ್ಗದ ಬಂಡಾಯ ಸಾಹಿತ್ಯ ಸಂಘಟನೆಯ ಡಾ|| ಕರಿಯಪ್ಪ ಮಾಳಿಗೆ ಮತ್ತಿತರ ಗೆಳೆಯರ ಆಸಕ್ತಿಯಿಂದಾಗಿ ಇಲ್ಲಿನ ಜನತೆಗೆ 'ಏಕಲವ್ಯ'ನನ್ನು ಕಾಣುವ ಸದವಕಾಶ ದೊರೆಯಿತು.

ಬರಗೂರು ಅವರು ಹೇಳುವಂತೆ ಮಹಾಭಾರತದ ಏಕಲವ್ಯ ಭಾರತದ ಪ್ರಸಕ್ತ ಸಂದರ್ಭದಲ್ಲಿ ಕೂಡ ಪ್ರಸ್ತುತವೇ ಆಗಿದ್ದಾನೆ. ಅವರ ಈಗಿನ 'ಏಕಲವ್ಯ' ಪ್ರಸ್ತುತವೆಂದು ಕಂಡುಬರುವುದಿಲ್ಲವಾದರೂ ಚಿತ್ರದ ಒಟ್ಟು ಆಶಯ ಬುಡಕಟ್ಟು ಜನಾಂಗದ ಬಗೆಗಿರುವ ವ್ಯವಸ್ಥೆಯ ಅವಜ್ಞೆಯನ್ನು ಎತ್ತಿ ತೋರುವಲ್ಲಿ ಸಫಲವಾಗಿದೆ.

'ಏಕಲವ್ಯ' ಬುಡಕಟ್ಟು ಜನಾಂಗದ ಪುಟ್ಟ ಬಾಲಕ. ಅವನ ಕಂಗಳಲ್ಲಿ ಎತ್ತರದ ಕನಸುಗಳು ಧಿಮಿಗುಡುತ್ತಿರುತ್ತವೆ. ಆತನ ಕನಸುಗಳ ಸಾಕಾರಕ್ಕೆಂದೇ ಹಾತೊರೆಯುವ ಒಂದೇ ಒಂದು ಮನಸ್ಸೂ ಬುಡಕಟ್ಟು ಜನಾಂಗದಲ್ಲಿ ಕಂಡುಬರುವುದಿಲ್ಲ. ಕೋಟೆಯ ಬಂಡೆಗಳ ಸಂದಿಗೊಂದಿಗಳಲ್ಲಿ ಗುಡಿಸಲು ಕಟ್ಟಿಕೊಂಡು ವಾಸವಾಗಿರುವ ಬುಡಕಟ್ಟು ಜನಾಂಗ ಪ್ರಜಾಪ್ರತಿನಿಧಿಗಳ ಶೋಷಣೆಯ ಕಪಿಮುಷ್ಟಿಯಲ್ಲಿ ನಲುಗುತ್ತಿರುತ್ತದೆ. ಈ ಶೋಷಣೆಯ ತೀವ್ರತೆ ಹೇಗಿದೆಯೆಂದರೆ ಬುಡಕಟ್ಟು ಜನಾಂಗಕ್ಕೆ ತಾವು ಶೋಷಣೆಗೆ ಒಳಗಾಗುತ್ತಿರುವುದು ತಿಳಿದೇ ಇರುವುದಿಲ್ಲ. ಒಂದು ವೇಳೆ ತಿಳಿದಿದ್ದರೂ ಆ ಶೋಷಣೆಯ ಕೋಟೆಯಿಂದ ಹೊರ ಬರಬೇಕೆಂಬ ತುಡಿತವನ್ನೂ ಹೊಂದಿರುವುದಿಲ್ಲ. ಹಾಗಾಗಿ ಇಲ್ಲಿ ಶೋಷಣೆಯೆಂಬುದು ಶೋಷಕ ಮತ್ತು ಶೋಷಿತರ ನಡುವಿನ ಅಲಿಖಿತ ಒಪ್ಪಂದವೇನೋ ಎಂಬಂತೆ ಭಾಸವಾಗುತ್ತದೆ. ಇದು ಅನಕ್ಷರ ಜನತೆಯ ದುರಂತ ಮತ್ತು ಒಟ್ಟು ವ್ಯವಸ್ಥೆಯ ಅವ್ಯವಸ್ಥೆಯೂ ಹೌದು.



ಪ್ರಜಾಪ್ರತಿನಿಧಿಯ ಮಗನಿಗೆ ಕ್ರೀಡೆಯಲ್ಲಿ ಅಂಥಾ ತೀವ್ರ ಆಸಕ್ತಿಯಿಲ್ಲದಿದ್ದರೂ ಮಂತ್ರಿಯ ಘನತೆಯೆಂಬ ಮೇಲರಿಮೆಯಿಂದಾಗಿ ಒತ್ತಾಯಪೂರ್ವಕವಾಗಿ ಕ್ರೀಡೆಯ ತರಬೇತಿ ನೀಡುವ ಮೂಲಕ ಎಳೆಯ ಮನಸ್ಸನ್ನು ಒತ್ತಡಗಳಿಂದ ಬೆಳೆಸಲಾಗುತ್ತದೆ. ಆದರೆ ಅದೇ ಸಂದರ್ಭದಲ್ಲಿ ಬುಡಕಟ್ಟು ಜನಾಂಗದ ಬಾಲಕ ರಾಮು ಮಂತ್ರಿಯ ಮಗನ ಕ್ರೀಡಾ ತರಬೇತಿಗಳನ್ನು ಕಂಡು ತಾನೂ ಅವನಂತಾಗಬೇಕೆಂದು ಕನಸು ಕಾಣುತ್ತಾನೆ. ಕಾಕತಾಳೀಯವೆಂಬಂತೆ ಬುಡಕಟ್ಟಿನ ಕೋಟೆಯೊಳಗೆ "ಅಕ್ಷರನ" ಪ್ರವೇಶವಾಗುವ ಮೂಲಕ ಬುಡಕಟ್ಟು ಜನಾಂಗದಲ್ಲಿ ಹೊಸ ಬೆಳಕಿನ ಸಂಚಾರವಾಗುತ್ತದೆ. ಬಾಲಕ ರಾಮುವಿನ ಕನಸುಗಳಿಗೆ ಜೀವ ತುಂಬುವುದೇ ಬುಡಕಟ್ಟಿನ ಮಂದಿಯ ಹೊಸ ಕನಸುಗಳಾಗಿ ಗರಿಗೆದರುತ್ತವೆ. ಈ ವಿಚಾರ 'ಅಕ್ಷರ'ನ ಗಮನಕ್ಕೂ ಬಂದು 'ಅಕ್ಷರ', ಬಾಲಕ ರಾಮುವಿನ ಕನಸುಗಳಿಗೆ ಜೀವ ತುಂಬುವ ಸಲುವಾಗಿ ಕೋಚ್ ಕಾವೇರಪ್ಪನ ಬಳಿಗೆ ಕರೆದುಕೊಂಡು ಹೋಗಿ, ಅವನಿಗೂ ಸೂಕ್ತ ಕ್ರೀಡಾ ತರಬೇತಿ ನೀಡುವಂತೆ ಕೇಳಿಕೊಳ್ಳುತ್ತಾನೆ. ಆದರೆ ಕೋಚ್ ತನ್ನ ಅಸಹಾಯಕತೆಯನ್ನು ಹೇಳಿಕೊಂಡು ನಿರಾಕರಿಸುತ್ತಾನೆ. ಆಗ 'ಅಕ್ಷರ' ಕಾವೇರಪ್ಪನ ಸಣ್ಣತನವನ್ನು ತರಾಟೆಗೆ ತೆಗೆದುಕೊಂಡು ರಾಮುವನ್ನು ವಾಪಸ್ ಕರೆದುಕೊಂಡು ಬರುತ್ತಾನೆ ಮತ್ತು ರಾಮುವಿಗೆ ನಿರಾಶನಾಗಬಾರದೆಂದೂ ಮರಳಿ ಯತ್ನವ ಮಾಡೆಂದು ಹುರಿದುಂಬಿಸಿ ಅವನೊಬ್ಬನನ್ನೇ ಮತ್ತೆ ಕಾವೇರಪ್ಪನ ಬಳಿಗೆ ಕಳುಹಿಸುತ್ತಾನೆ. ಅಂತೆಯೇ ರಾಮು ಮತ್ತೊಮ್ಮೆ ಕಾವೇರಪ್ಪನನ್ನು ಕಂಡು ತನಗೂ ತರಬೇತಿ ನೀಡುವಂತೆ ಪ್ರಾರ್ಥಿಸಿಕೊಳ್ಳುತ್ತಾನಾದರೂ ಕಾವೇರಪ್ಪ ಒಪ್ಪುವುದಿಲ್ಲ. ಅಕ್ಷರ ಹೇಳಿಕೊಟ್ಟಂತೆ ಛಲಬಿಡದೆ ಮತ್ತೆ ವಿನಂತಿಸುತ್ತಾನೆ. ರಾಮುವಿನ ಕೋರಿಕೆಗೆ ಕೋಚ್‌ನ ಮನ ಕರಗಿದರೂ ತನ್ನ ಬಂದಿನ ಅಸಹಾಯಕತೆಯನ್ನು ವ್ಯಕ್ತಪಡಿಸಿದಾಗ ರಾಮು "ನಿಮ್ಮ ಭಾವಚಿತ್ರವನ್ನಾದರೂ ಕೊಡಿ" ಎಂದು ವಿನಂತಿಸಿಕೊಳ್ಳುತ್ತಾನೆ. ಯೋಚನೆಗೊಳಗಾದ ಕೋಚ್ ಕಾವೇರಪ್ಪ ದೊಡ್ಡ ಮನಸ್ಸು ಮಾಡಿ ತನ್ನ ಭಾವಚಿತ್ರವನ್ನು ರಾಮುವಿಗೆ ಕೊಟ್ಟು ಹರಸಿ ಕಳುಹಿಸುತ್ತಾನೆ.

ಈ ನಡುವೆ 'ಅಕ್ಷರ'ನ ಅಕ್ಷರಜ್ಞಾನ ಹಂಚುವ ಕೆಲಸ ಬುಡಕಟ್ಟು ಜನಾಂಗದ ಹತ್ತು ಹಲವು ಅಡೆತಡೆಗಳ ನಡುವೆಯೂ ಸಾಗುತ್ತಿರುತ್ತದೆ. ಈ ಸುದ್ದಿ ಮಂತ್ರಿಯ ಕಿವಿಗೂ ಬಿದ್ದು ಮಂತ್ರಿ ತನ್ನ ಕುತಂತ್ರಗಳು, ಸ್ವಾರ್ಥಸಾಧನೆಗಳಿಗೆ ಅಡ್ಡಿಯಾಗುವುದನ್ನು ಜ್ಞಾಪಿಸಿಕೊಂಡು

ಅಕ್ಷರನ ಕೆಲಸಗಳಿಗೆ ಬುಡಕಟ್ಟು ಜನಾಂಗದ ಧಾರ್ಮಿಕ ನಂಬುಗೆಯನ್ನು ಅಸ್ತ್ರವನ್ನಾಗಿ ಮಾಡಿಕೊಂಡು ಜಾಗೃತಿಯ ಮೊಳಕೆಯನ್ನು ಕೀಳಲು ಹವಣಿಸುತ್ತಾನೆ. ಆ ಮೂಲಕ ಬುಡಕಟ್ಟಿನೊಳಗೆ ಭಿನ್ನಾಭಿಪ್ರಾಯಗಳನ್ನು ಹುಟ್ಟುಹಾಕುತ್ತಾನೆ. ಆದರೆ ಆಗಲೇ ಅಕ್ಷರನಿಂದಾಗಿ ಶೋಷಣೆಯ ವಿರುದ್ಧ ಜಾಗೃತಿಗೊಳಗಾಗಿದ್ದ ಬುಡಕಟ್ಟು ಜನಾಂಗ ಮಂತ್ರಿಯ ಕುತಂತ್ರಗಳನ್ನು ಪ್ರತಿಭಟಿಸುತ್ತಾರೆ. ಅಷ್ಟರಲ್ಲಿ ಮಂತ್ರಿ ಮತ್ತು ಅಕ್ಷರನ ನಡುವೆ ನಡೆದ ಮಾತಿನ ಜಟಾಪಟಿಯೊಳಗೆ ಅಕ್ಷರ ಅಕಸ್ಮಾತ್ ಸಾವನ್ನಪ್ಪುತ್ತಾನೆ. ಹೀಗೆ ಕಥೆ ಬಹಳ ಗಂಭೀರವಾಗಿ ಸಾಗುತ್ತಿರುವಾಗ ನಡುನಡುವೆ ರಾಮುವಿನ ಅಕ್ಕ ಲಕ್ಷ್ಮಿಯು ಫ್ಲಾಷ್ ಬ್ಯಾಕ್‌ಗೊಳಗಾಗುವುದು ಕೆಲವೊಮ್ಮೆ ಪ್ರೇಕ್ಷಕನ ತನ್ಮಯತೆಯನ್ನು ಕಸಿದುಕೊಳ್ಳುತ್ತದೆ. ಅತ್ತ ಮಂತ್ರಿಯ ಮಗ ರಾಜ್ಯಮಟ್ಟದ ಕ್ರೀಡಾಕೂಟಕ್ಕೆ ತರಬೇತಿ ತೆಗೆದುಕೋಳ್ಳುತ್ತಿದ್ದರೆ, ಇತ್ತ ಬುಡಕಟ್ಟು ಜನಾಂಗದ ಬಾಲಕ ರಾಮು ಕೋಚ್ ಕಾವೇರಪ್ಪನ ಭಾವಚಿತ್ರವನ್ನಿಟ್ಟುಕೊಂಡು ಏಕಲವ್ಯನಂತೆ ಸ್ವಯಂ ತರಬೇತಿ ತೆಗೆದುಕೊಳ್ಳುತ್ತಿರುತ್ತಾನೆ. ಅಕ್ಷರನಿಂದಾಗಿ ಬುಡಕಟ್ಟಿನವರು ಜಾಗೃತಗೊಂಡಿದ್ದರೂ ಕೆಲವೊಮ್ಮೆ ವಾಸ್ತವವನ್ನರಿಯದವರಂತೆ ಚಡಪಡಿಸುವುದು ವಿಚಿತ್ರವೆನ್ನಿಸುತ್ತದೆ. ಉದಾಹರಣೆಗೆ, ಲಕ್ಷ್ಮಿ ಒಂದೊಮ್ಮೆ ಕಾಣದಾದಾಗ ಕೋಟೆಯ ಬಾಗಿಲಲ್ಲಷ್ಟೇ ನಿಂತುಕೊಂಡು ಇಡೀ ಬುಡಕಟ್ಟಿನ ಕುಟುಂಬ ಆಕೆಗಾಗಿ ಹಪಹಪಿಸುವುದು, ಹಾಗೆಯೇ ರಾಮು ಕಾಣದಿದ್ದಾಗಲೂ ಕೋಟೆಯ ಬಾಗಿಲಲ್ಲಿ ನಿಂತು ಆತಂಕ ವ್ಯಕ್ತಪಡಿಸುವುದು ಇವೆಲ್ಲಾ ಆಭಾಸಗಳಿಗೆ ಕಾರಣವಾಗುತ್ತದೆ. ಏಕೆಂದರೆ ಸಾಮಾನ್ಯವಾಗಿ ಬುಡಕಟ್ಟು ಜನಾಂಗವೆಂದರೆ ಅವರು ವಾಸಿಸುವ ಸುತ್ತಮುತ್ತಲ ಪ್ರದೇಶದ ಹುಲ್ಲುಕಡ್ಡಿಯೂ ಪರಿಚಯವಿರುತ್ತದೆ. ಅಲ್ಲದೆ ಅವರಿರುವುದು ಕೇವಲ ಕೋಟೆಯೊಳಗೆ! ಅಂದಮೇಲೆ ಕೋಟೆಯ ಇಂಚಿಂಚೂ ಪರಿಚಯವಿಲ್ಲವೆಂದರೆ ಹೇಗೆ? ಅಲ್ಲದೆ ಕಾಣೆಯಾದ ಅವರಿಬ್ಬರನ್ನೂ ಅಕ್ಷರನೇ ಹುಡುಕಿಕೊಂಡು ಕರೆತರುವುದು ಆಭಾಸವೆನ್ನಿಸುತ್ತದೆ.



ಈ ನಡುವೆ ರಾಜ್ಯ ಮಟ್ಟದ ಕ್ರೀಡಾಕೂಟ ಬೆಂಗಳೂರಿನಲ್ಲಿ ಜರುಗಲಿರುವುದಾಗಿಯೂ ಅದರಲ್ಲಿ ಮಂತ್ರಿಯ ಮಗ ಮಾತ್ರ ಭಾಗವಹಿಸುವಂತೆಯೂ ನಿರ್ಣಯ ಕೈಗೊಂಡು ಬುಡಕಟ್ಟಿನ ಬಾಲಕ ರಾಮು ಭಾಗವಹಿಸದಂತೆ ಮಂತ್ರಿ ಹೂಡಿದ ತಂತ್ರಗಳೆಲ್ಲವೂ ಶಾಲಾ ಬಾಲಕರಿಂದಾಗಿ ವಿಫಲಗೊಳ್ಳುತ್ತವೆ. ಇಲ್ಲಿ ಒಂದು ವಿಚಿತ್ರ ನಡೆಯುತ್ತದೆ. ಅದೆಂದರೆ ಬೆಂಗಳೂರಿನಲ್ಲಿ ಕ್ರೀಡಾಕೂಟ ನಡೆಯುತ್ತಿರುವಾಗಲೇ ಯಾವುದೇ ಮುನ್ಸೂಚನೆಗಳಿಲ್ಲದೆ ಮತ್ತು ಪೂರ್ವಸಿದ್ಧತೆಗಳಿಲ್ಲದೆ ಬುಡಕಟ್ಟು ಜನಾಂಗದ ತಂಡ ಪೂರ್ತಿ ಅಲ್ಲಿ ಜಮಾಯಿಸಿ ರಾಮುವಿಗಾಗಿ ಕಾಯುತ್ತಿರುತ್ತದೆ. ಇದು ಹೇಗೆ ಸಾಧ್ಯವಾಗುತ್ತದೆಂಬುದು ಅರ್ಥವಾಗುವುದಿಲ್ಲ! ಏಕೆಂದರೆ ರಾಮುವನ್ನು ಯಾರಿಗೂ ತಿಳಿಯದಂತೆ ಬಚ್ಚಿಟ್ಟರಲಾಗಿರುತ್ತದೆಯಲ್ಲದೆ, ಆ ಸಂಗತಿ ದಾರಿಯಲ್ಲಿ ಹೋಗುತ್ತಿರುವ ಶಾಲಾ ಮಕ್ಕಳಿಗೆ ಅಕಸ್ಮಾತ್ತಾಗಿ ತಿಳಿದು ಅವರು ರಾಮುವನ್ನು ಸೈಕಲ್ ಮೇಲೆ ಕುಳ್ಳಿರಿಸಿಕೊಂಡು ಬೆಂಗಳೂರಿನ ಕ್ರೀಡಾಕೂಟದ ಸ್ಥಳಕ್ಕೆ ಕರೆದೊಯ್ಯುತ್ತಾರೆ. ಆಗ ಮಂತ್ರಿಯ ಗುಂಪಿಗೆ ಆಶ್ಚರ್ಯ ಆತಂಕಗಳು ಕಾಡಿದರೆ ಬುಡಕಟ್ಟು ಜನಾಂಗಕ್ಕೆ ಸಂಭ್ರಮಾನಂದಗಳಾಗುತ್ತವೆ. ಸ್ಪರ್ಧೆಯಲ್ಲಿ ಬುಡಕಟ್ಟಿನ ಬಾಲಕ ರಾಮುವೇ ಗೆದ್ದು ಮಂತ್ರಿಯ ಕೈಯಿಂದಲೇ ಪ್ರಥಮ ಬಹುಮಾನ ಪಡೆಯುತ್ತಾನೆ. ನಂತರದ ದೃಶ್ಯಗಳೆಲ್ಲವೂ ಪಶ್ಚಾತ್ತಾಪಗಳಿಂದ ಸುಖಾಂತ್ಯಗೊಳ್ಳುತ್ತವೆ.

ಕಥಾ ವಸ್ತು, ಸಂಗೀತ, ಸಂಭಾಷಣೆ, ಹಾಡು, ಛಾಯಾಗ್ರಹಣ ಎಲ್ಲವೂ ಸೊಗಸಾಗಿದ್ದು ಬರಗೂರರ 'ಏಕಲವ್ಯ' ಪ್ರೇಕ್ಷಕರ ಮನಗೆಲ್ಲುವಲ್ಲಿ ಯಶಸ್ವಿಯಾಗುತ್ತದೆ. ಆದರೂ ಎಲ್ಲೋ ಒಂದು ಕಡೆ ಸರ್ವಶಿಕ್ಷಾ ಅಭಿಯಾನದ ಪ್ರಾಯೋಜಕತ್ವಕ್ಕೆ ಆದ್ಯತೆ ನೀಡಲಾಗಿತ್ತೇ ಎಂಬ ಸಂಶಯವೂ ಕಾಡುತ್ತದೆ. ಅದೇನಿದ್ದರೂ ಬರಗೂರರಂತಹ ಬರಗೂರರು ಸೆಲ್ಯುಲಾಯ್ಡ್ ಮಾಧ್ಯಮದಲ್ಲಿ ತಮ್ಮ ಪ್ರತಿಭೆಯನ್ನು ಮಾಹಿತಿ ಮತ್ತು ರಂಜನೀಯತೆಯ ದೃಷ್ಟಿಯಿಂದ ಇನ್ನಷ್ಟು ಪರಿಣಾಮಕಾರಿಯಾಗಿ ತಲುಪಿಸಬಹುದಾಗಿತ್ತಲ್ಲವೇ, ಎಂದೆನ್ನಿಸದಿರದು. ಅಂದರೆ ಬರಗೂರರು ಇಂದಿನ ಮಚ್ಚು-ಲಾಂಗು ಸಂಸ್ಕೃತಿಯ ಅಭಿರುಚಿಗೆ ಒಗ್ಗಿಬಿಟ್ಟಿರುವ ಪ್ರೇಕ್ಷಕರನ್ನು ನೇರವಾಗಿ ತಲುಪಲು ಹಿಂಜರಿದಿದ್ದಾರೆಯೇ ಎಂಬ ಪ್ರಶ್ನೆ ಕಾಡಿದರೆ ಅಚ್ಚರಿಯೇನಿಲ್ಲ.



ಚನ್ನಬಸವ ಫುತ್ತೂರ್ಕರ
ಗೌಸ್ ಪೀರ್ ಸಾಬ್ ಬಿಲ್ಡಿಂಗ್
ಜೆ. ಸಿ. ಆರ್. ಬಡಾವಣೆ
ಸಿ.ಪೇ ಕ್ರಾಸ್ ಪಶ್ಚಿಮ
ಚಿತ್ರದುರ್ಗ – ೫೭೭ ೫೦೧





## ಬರೆಹದಲ್ಲಿ ಬೇಂದ್ರೆಯವರ ಬದುಕು

*ಡಾ|| ಜಿ. ಕೃಷ್ಣಪ್ಪ*

**ಪುಟ : x + ೧೫೮** ಬೆಲೆ : ರೂ. ೧೦೦

**ಪ್ರಸಾರಾಂಗ,** ದ. ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ಸಾಧನಕೇರಿ, ಧಾರವಾಡ - ೫೮೦ ೦೦೮

ಬೇಂದ್ರೆಯವರ ಸಾಹಿತ್ಯ-ಕಾವ್ಯ ಅನುಭವದಿಂದ, ಬದುಕಿನ ಮಧ್ಯದಿಂದ ಎದ್ದು ಬಂದಂಥದ್ದು. ಅವರು ಕಾವ್ಯವನ್ನೆ ಉಸಿರಾಡಿದವರು ಮತ್ತು ಹಾಡಿದವರು ಕೂಡ. ಬ್ಯಾನಿ-ಬ್ಯಾಸರ ಇದ್ದಲ್ಲಿ ದುಃಖ ಮಡುಗಟ್ಟಿತು; ನಲಿವು ಇದ್ದಾಗ ನಗೀ ನವಿಲು ಆಡುತಿತ್ತು, ಹಾಗಾಗಿ ಅವರನ್ನು ಪೂರ್ಣ ಪ್ರಮಾಣದ ಕವಿಯೆಂದು ವರ್ಣಿಸಲಾಗಿದೆ. ಶುದ್ಧ ದೇಶಿ ಜಾನಪದ ಶೈಲಿ ಧಾರವಾಡದ ಭಾಷಾ ಸೊಗಸು ಇವರದ್ದು. ಬೇಂದ್ರೆಯವರ ''ಬಾಲ್ಯಕಾಂಡ'' ಕೃತಿಯ ಅಧ್ಯಯನದಿಂದ ಇಲ್ಲಿನ ವಿವರಗಳನ್ನು ಲೇಖಕರು ಕಲೆಹಾಕಿದ್ದಾರೆ. ಬೇಂದ್ರೆ ಬದುಕು-ಬರಹದ ವಿಶ್ಲೇಷಣೆಯೊಂದಿಗೆ ಕಾವ್ಯಾಧ್ಯಯನಕ್ಕೆ ಈ ಕೃತಿ ನಮ್ಮನ್ನು ಆಹ್ವಾನಿಸುತ್ತದೆ.

## ವಿರಕ್ತ ರಾಷ್ಟ್ರಕ ಡಿವಿಜಿ

*ಡಿ. ಆರ್. ವೆಂಕಟರಮಣನ್*

**ಪುಟ : ೩೪೪** ಬೆಲೆ : ರೂ. ೨೦೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧

ಬಾಲ್ಯದಿಂದ ಅಂತ್ಯದವರೆಗೆ ಸವಿಸ್ತಾರವಾಗಿ ಡಿವಿಜಿಯವರ ಬದುಕು ಇಲ್ಲಿ ಅನಾವರಣಗೊಂಡಿದೆ. ಸಾಹಿತ್ಯರಚನೆಯಲ್ಲಿ, ಸಾರ್ವಜನಿಕ ಸಂಘ-ಸಂಸ್ಥೆಗಳಲ್ಲಿ ಅವರು ಮಾಡಿದ ಸಾಧನೆ ಅಪಾರ. ಅವರ ಭಾಷಣಗಳು ಲೇಖನಗಳು ಅಂದಿನ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದು ಆಕಾಶವಾಣಿಯಲ್ಲಿಯೂ ಬಿತ್ತರಗೊಳ್ಳುತ್ತಿದ್ದವು. ಅವರ ಪ್ರಾರ್ಥನಾಗೀತ 'ವನಸುಮದೊಲೆನ್ನ ಜೀವನವು ವಿಕಸಿಸುವಂತೆ' ಎಂಬ ಹಾಡಿಗೆ ಅನುಗುಣವಾಗಿ ತಾನು ಎಲೆಯ ಮರೆಯಲ್ಲಿದ್ದು ಬದುಕಿಬಾಳಿ, ಇತರರಿಗೂ ಮಾರ್ಗದರ್ಶನ, ಅಮೂಲ್ಯ ಸಂದೇಶ ನೀಡಿದ್ದಾರೆ. ಇದು ಅವರನ್ನು ಕುರಿತ ಕೃತಿ ಮಾತ್ರವಲ್ಲದೆ ಶತಮಾನದ ಹಿಂದಿನ ಸಾಮಾಜಿಕ ಚಿತ್ರಣವೂ ಹೌದು.

## ಚಾರ್ವಾಕ (ನಾಟಕ)

*ಸತ್ಯನಾರಾಯಣರಾವ್ ಅಣತಿ*

**ಪುಟ : ೭೨** ಬೆಲೆ : ರೂ. ೪೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧



ಇಂದಿಗೂ ಎಡಪಂಥೀಯ ವಿಚಾರವಾದದ ಸಿದ್ಧಾಂತಗಳನ್ನು ಆಚರಣೆಯಲ್ಲಿ ತರಲು ಸೋತು ಹಿಂಜರಿಯುತ್ತಿರುವ ಸನ್ನಿವೇಶದಲ್ಲಿ ಈ ನಾಟಕವು ನಮಗೆ ಪ್ರಸ್ತುತವಾಗಿದೆ. ಭಾಷಣ ಬೋಧನೆಗಳಲ್ಲಷ್ಟೇ ಉಳಿದುಕೊಂಡಿರುವ ಸಮಾನತೆ-ಶೋಷಣೆರಹಿತ ಸಮಾಜ ಇವನ್ನು ನಿಜಕ್ಕೂ ನಿರ್ಮಿಸಲು ಸಾಧ್ಯವೇ ಎಂಬ ಚಿಂತನೆಯಿದೆ. ಸಭ್ಯರಂತೆ ಮುಸುಕು ಹಾಕಿಕೊಂಡಿರುವ ಅಪಾಯಕಾರಿ ವ್ಯಕ್ತಿ-ಶಕ್ತಿಗಳನ್ನು ನಾಸ್ತಿಕರೆಂದೆನಿಸಿಕೊಂಡ ಚಾರ್ವಾಕರು ಮುಖಾಮುಖಿ ಎದುರಿಸುವುದು ಇಲ್ಲಿನ ವೈಶಿಷ್ಟ್ಯ. ನಾಟಕದ ಎರಡು ಮುಖ್ಯಪಾತ್ರಗಳು ದೇಶಸಂಚಾರ ಮಾಡುತ್ತ ಜನಜಾಗೃತಿ ಮೂಡಿಸುತ್ತವೆ. ಶತಮಾನಗಳಿಂದ ಜಡ್ಡುಕಟ್ಟಿದ ವ್ಯವಸ್ಥೆಯ ವಿರುದ್ಧ ಇದೊಂದು ಕ್ಷೀಣ ಧ್ವನಿಯಾಗಿದ್ದು ವಿಚಾರವಂತರಿಂದಾಗಿ ವೃದ್ಧಿಗೊಳ್ಳಬೇಕಾಗಿದೆ.




## ಲೈಂಗಿಕ ವೈವಿಧ್ಯ

*ಡಾ|| ಪದ್ಮಿನಿ ಪ್ರಸಾದ್*

**ಪುಟ : ೧೩೬** ಬೆಲೆ : ರೂ. ೬೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧

ಲೈಂಗಿಕತೆಯ ಬಗ್ಗೆ ಇರುವ ತಪ್ಪು ತಿಳುವಳಿಕೆ ಮೂಢನಂಬಿಕೆಗಳನ್ನು ದೂರಮಾಡಿ ಜನಸಾಮಾನ್ಯರಲ್ಲಿ ಆರೋಗ್ಯಕರ ಲೈಂಗಿಕಪ್ರಜ್ಞೆ ಮೂಡಿಸುವುದೇ ಈ ಕೃತಿಯ ಉದ್ದೇಶ. ಮುಕ್ತವಾಗಿ ಮಾತನಾಡಲೂ ಪರಸ್ಪರ ಚರ್ಚಿಸಲೂ ಅಂಜಿಕೆ ಮುಜುಗರ. ಲೈಂಗಿಕ ಶಿಕ್ಷಣವಂತೂ ನಮ್ಮ ದೇಶದಲ್ಲೇ ಇಲ್ಲ. ಅಸಹಜ ಅಶ್ಲೀಲ ಸಾಹಿತ್ಯ, ಮಕ್ಕಳ ಮೇಲೆ ಅತ್ಯಾಚಾರ, ಅತಿಕಾಮುಕತೆ, ಸರಿಯಾದ ಮಾರ್ಗದರ್ಶನವಿಲ್ಲದ ಅರೆ ಬರೆ ತಿಳುವಳಿಕೆ ಇವುಗಳಿಂದಾಗಿ ಲೈಂಗಿಕ ಅಪರಾಧಗಳು ಹೆಚ್ಚುತ್ತಿದ್ದು ಸಮಾಜದ ಸ್ವಾಸ್ಥ್ಯ ಕೆಡಿಸುತ್ತಿವೆ. ಒಂದಕ್ಕೊಂದು ಸಂಬಂಧವಿರುವ ಇಲ್ಲಿನ ವಿಚಾರಗಳ ಮೇಲೆ ಲೈಂಗಿಕತಜ್ಞೆ ಹಾಗೂ ವೈವಾಹಿಕ ಸಲಹಾತಜ್ಞೆ ಡಾ|| ಪದ್ಮಿನಿ ಪ್ರಸಾದ್ ಬೆಳಕು ಚೆಲ್ಲಿ ಸಲಹೆ ನೀಡಿದ್ದಾರೆ.




## ಸ್ಟೀಫನ್ ಹಾಕಿಂಗ್ ಬದುಕು ಮತ್ತು ವಿಚಾರ

*ಬಿ. ಎಸ್. ಮಯೂರ*

**ಪುಟ : ೮೮** ಬೆಲೆ : ರೂ. ೬೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೧

ಸ್ಟೀಫನ್ ಹಾಕಿಂಗ್ – ಎ ಬ್ರೀಫ್ ಹಿಸ್ಟರಿ ಆಫ್ ಟೈಮ್ ಪುಸ್ತಕದ ಲೇಖಕ, ನಮ್ಮ ಕಾಲದ ಪ್ರತಿಭಾನ್ವಿತ ಖಗೋಳ ವಿಜ್ಞಾನಿ. ಲಾಗೆಂಗ್‌ನ ವ್ಯಾಧಿಯೆಂದು ಹೆಸರಾದ ಮಾರಣಾಂತಿಕ ರೋಗದಿಂದ ಬಳಲಿದ್ದರೂ, ತಮ್ಮ ಹೆಚ್ಚಿನ ಬದುಕನ್ನು ಅವರಿಗಾಗಿ ನಿರ್ಮಿಸಿದ ಗಾಲಿಕುರ್ಚಿಯಲ್ಲಿ ಕುಳಿತುಕೊಂಡೇ ತಮ್ಮ ಅಮೂಲ್ಯ ಸಂಶೋಧನೆಗಳನ್ನು ನಡೆಸಿ ಜಗದ್ವಿಖ್ಯಾತರಾಗಿ ಅಚ್ಚರಿಮೂಡಿಸಿದ ವಿಜ್ಞಾನಿ ಈತ. ಇಂದಿಗೂ ತಮ್ಮ ಕೈಬೆರಳ ತುದಿಯನ್ನು ಮಾತ್ರ ಉಪಯೋಗಿಸಿ ತಮ್ಮ ಮೆದುಳಲ್ಲಿ ಮೂಡಿದ ಸಂವೇದನೆಯನ್ನು ಅಕ್ಷರಗಳಲ್ಲಿ ಕಂಪ್ಯೂಟರ್ ಪರದೆ ಮೇಲೆ ಮೂಡಿಸುವಾತ! ಚೈತನ್ಯಮಯ ವಿಶ್ವದ ಬಗೆಗಿನ ಕಲ್ಪನೆ ಮತ್ತು ಆಕರ್ಷಣೆ ಅವರಿಗೆ ಆಸಕ್ತಿದಾಯಕವಾಗಿತ್ತು. ಇವರ ಬದುಕು ಮತ್ತು ಬೌದ್ಧಿಕ ವಿಚಾರಗಳನ್ನೊಳಗೊಂಡ ಅಪರೂಪದ ಪುಸ್ತಕವಿದು. ಅಪೂರ್ವ ಛಾಯಾಚಿತ್ರಗಳಿವೆ.

## ಕೈದಿಗಳ ಕಥನ (ರಂಗ ಸಂಗದಿಂದ ಬದಲಾದವರು)

*ಗಣೇಶ ಅಮೀನಗಡ*

**ಪುಟ : xii + ೯೪** ಬೆಲೆ : ರೂ. ೫೦

**ಅಭಿನವ ಪ್ರಕಾಶನ,** ೧೭/೧೮-೨, ಮೊದಲನೇ ಮುಖ್ಯರಸ್ತೆ ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೪೦




ಜೀವಾವಧಿ ಶಿಕ್ಷೆಯಾಗಿ ಬಂದೀಖಾನೆಗಳಲ್ಲಿ ಕೈದಿಗಳು ದಿನಗಳನ್ನೆಣಿಸುತ್ತಿದ್ದಾರೆ. ಮಾನವ ಹಕ್ಕುಗಳ ಆಯೋಗದ ಒತ್ತಡ, ಮನೋವೈದ್ಯರ ಸಲಹೆಗಳಿಂದಾಗಿ ಇತ್ತೀಚೆಗೆ ಜೈಲು ಅಧಿಕಾರಿಗಳು ಕೈದಿಗಳ ಮನಃಪರಿವರ್ತನಾ ಶಿಬಿರದಂತಹ ಹಲವು ಸುಧಾರಣಾ ಕ್ರಮಗಳನ್ನು ರೂಪಿಸಿದ್ದಾರೆ. ಇದರಲ್ಲೊಂದು ರಂಗಾಯಣ ತಂಡವು ಜೈಲಿನ ಕೈದಿಗಳಿಗಾಗಿ ನಡೆಸುತ್ತಿರುವ ರಂಗತಾಲೀಮು ಮತ್ತು ನಾಟಕಗಳಲ್ಲಿ ಕೈದಿಗಳಿಂದ ಪಾತ್ರ ನಿರ್ವಹಣೆ. ರಂಗಕರ್ಮಿ ಲೇಖಕರು ಅಪರಾಧಿಗಳನ್ನು ಮಾತನಾಡಿಸಿದಾಗ ತಾವು ಮಾಡಿದ ಅಪರಾಧದ ಘಟನೆಗಳನ್ನೊಂದೊಂದಾಗಿ ಬಿಚ್ಚಿಡುತ್ತಿದ್ದಂತೆ... ಮೂಡಿಬಂದದ್ದು ಒಬ್ಬೊಬ್ಬರ ಒಂದೊಂದು ಕಥೆ-ವ್ಯಥೆ... ನಮ್ಮ ಮಧ್ಯದಿಂದಲೇ ಅಪರಾಧಿಯೊಬ್ಬ ಹೇಗೆ ರೂಪುಗೊಳ್ಳುತ್ತಾನೆಂದು ಓದಿನೋಡಿ.

– ಇಂದಿರಾಕುಮಾರಿ

೩೪/೧೧, ೨ನೇ ಕ್ರಾಸ್, ಬಾಂಬೆ ಡ್ರೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೫೬೦ ೦೨೨




# ನಾಳೆಯ ಸೂರ್ಯ

## (ಮಕ್ಕಳ ಕಾದಂಬರಿ)




ಲೇಖಕರು: **ಬಸು ಬೇವಿನಗಿಡದ**

**ಚೈತ್ರ ಪ್ರಕಾಶನ**
'ಸಿರಿಚೈತ್ರ' ವಿಜಯನಗರ, ಕೆಲಗೇರಿ ರಸ್ತೆ
ಧಾರವಾಡ - ೫೮೦೦೦೮

ಬೆಲೆ : ರೂ.೬೦/-
ಪುಟಗಳು : ೮೮(೭೬+xii)

**■ ಸುನಂದಾ ಪ್ರಕಾಶ ಕಡಮೆ**

ಇದು ಕತೆಗಾರ, ಕವಿ, ಅನುವಾದಕ ಬಸು ಬೇವಿನಗಿಡದ ಅವರ ಕಾದಂಬರಿ. ಮಕ್ಕಳಿಗಾಗಿ ಬರೆದ ಕೃತಿಯಾದರೂ, ವಯದಲ್ಲಿ ದೊಡ್ಡವರಾದ ನಾವೂ ಸಹ ಓದುವಂತಿದೆ ಎಂಬುದೇ ಈ ಕಾದಂಬರಿಯ ವಿಶೇಷ. ಮೊದಲ ಬಾರಿ ಓದಿದಾಗ ಇದರ ಬರವಣಿಗೆ ತೀರ ಸರಳ ಅನ್ನಿಸಲು ಕಾರಣ, ನಮ್ಮೊಳಗಿರುವ ಅಹಂಕಾರವೋ ಎಂಬ ಸಂಶಯ ಮೂಡುತ್ತದೆ. ಹಾಗೆಯೇ ಎರಡನೇ ಬಾರಿ ಓದಿದಾಗ, ಒಂದು ಮಗುವಿನ ಮನಸ್ಸಿಗೆ ಹಿಂದಿರುಗಿ ಈ ಕಾದಂಬರಿಯನ್ನು ಓದಿಕೊಳ್ಳಬೇಕಾದ ವಿಶಿಷ್ಟ ಅನುಭವವನ್ನು ನಾವು ಎದುರುಗೊಳ್ಳಬೇಕಾಗುತ್ತದೆ. ಈ ಓದು ಖುಷಿಕೊಡುತ್ತದೆ. ಮಕ್ಕಳ ಮನಸ್ಸಿಗೆ ಕನ್ನಡಿ ಹಿಡಿದಂತೆ ಇಲ್ಲಿ ಅನೇಕ ಮುಗ್ಧ ಅದ್ಭುತಗಳು, ಮುಗ್ಧ ವೈಚಾರಿಕತೆ, ಮುಗ್ಧ ಸಾಂತ್ವನ, ಮುಗ್ಧ ನೆಮ್ಮದಿ, ಮುಗ್ಧ ಜೀವನ ಪಾಠ, ಮುಗ್ಧ ಹೊಂದಾಣಿಕೆ, ಮುಗ್ಧ ಸವಿನಯತೆ, ಮುಗ್ಧ ತ್ಯಾಗ, ಆಸೆ ಸಂಭ್ರಮ, ಮುಗ್ಧ ಅಗಲಿಕೆಯ ದುಃಖ ಅನುಕಂಪ ನಂಬಿಕೆ ಗೆಳೆತನ ತುಂಟತನ ಕನಸುಗಳು... ಹೀಗೆ ಒಂದಾದ ನಂತರ ಇನ್ನೊಂದು ತನ್ನಿಂದ ತಾನೇ ತೆರೆದುಕೊಳ್ಳುತ್ತಾ ಹೋಗುತ್ತವೆ.

ಒಂಭತ್ತು ಅಧ್ಯಾಯಗಳಲ್ಲಿ ನಿರೂಪಿತವಾದ ಈ ಕಥನ, ಹೃದಯಕ್ಕೆ ಸಮೀಪವಾಗಿ ಓದಿಸಿಕೊಳ್ಳುತ್ತದೆ. ಮಕ್ಕಳ ಮನಸ್ಸಿನ ಜಗತ್ತು ಅವರ ಸಹಜ ಲೋಕದ ವಿಸ್ತಾರಗಳು ಅನಾವರಣಗೊಂಡ ಬಗೆ ಸೊಗಸಾಗಿದೆ. ಮಕ್ಕಳಿಗಾಗಿ ಬರೆಯುವವರು, ಮಕ್ಕಳ ಮನಸ್ಸಿಗೆ ತೀರ ಹತ್ತಿರದಲ್ಲಿ ನಡೆದಾಡಬೇಕಾಗುತ್ತದೆ. ಕಾದಂಬರಿಕಾರ ಬಸು ಅವರು ಈ ಕೃತಿಯಲ್ಲಿ ಅದನ್ನು ಸಾರ್ಥಕ ರೀತಿಯಲ್ಲಿ ಪೂರೈಸಿದ್ದಾರೆ. ಮಕ್ಕಳ ಸಾಹಿತ್ಯ ರಚನೆ, ತುಂಬ ಕಷ್ಟದ ಹಾಗೂ ಸವಾಲಿನ ಸಂಗತಿ ಕೂಡ ಆಗಿದೆ.

ಇಡೀ ಕಾದಂಬರಿಯಲ್ಲಿ ಹೆಚ್ಚಿನ ಭಾಗವು, ರವಿ ಎಂಬ ಬಡ ವಿದ್ಯಾರ್ಥಿಯ ಸುತ್ತ ಹೆಣೆದುಕೊಂಡು ವಿಸ್ತೃತಗೊಂಡಿದೆ. ಇಲ್ಲಿ ಬರುವ ಹೆಬಸೂರ ಮಾಸ್ತರು, ಒಬ್ಬ ಆದರ್ಶ ಶಿಕ್ಷಕರಾಗಿರುವುದರ ಜೊತೆಗೇ ಒಬ್ಬ ಆದರ್ಶ ಗೃಹಸ್ಥರೂ ಆಗಿದ್ದರು ಎಂಬುದನ್ನು ರವಿಯ ಕಣ್ಣಿನಲ್ಲಿ ಕಟ್ಟಿಕೊಡುವ ವಿವರಗಳು ಚೆನ್ನಾಗಿವೆ, ಕೌಟುಂಬಿಕವಾಗಿವೆ. ಹೆಬಸೂರ ಮಾಸ್ತರಿಗೆ ಮತ್ತು ಅವರ ಸ್ವಭಾವಕ್ಕೆ ತದ್ವಿರುದ್ಧವಾದ ಇನ್ನೊಂದು ಪಾತ್ರ ಭೀಮಣ್ಣ ಮಾಸ್ತರದು, ಆದರೆ ಕಠಿಣವಾದ ಗಣಿತ ವಿಷಯವನ್ನು ಸರಳಗೊಳಿಸಿ ಹೇಳಿಕೊಡುವಂಥ ಸಾಮರ್ಥ್ಯ ಅವರಲ್ಲಿರುವುದು, ಅದು ರವಿಗೆ ಮೆಚ್ಚಿಗೆಯಾಗುವಂಥದ್ದು. ವ್ಯಕ್ತಿಯೊಬ್ಬನ ವ್ಯಕ್ತಿತ್ವದ ಎರಡು ಸಹಜ ಮುಖಗಳನ್ನು ನಾವಿಲ್ಲಿ ಕಾಣಬಹುದು.

ಸರಸ್ವತಿಯ ಭಾವಚಿತ್ರವೊಂದನ್ನು ಕದಿಯುವುದರ ಮೂಲಕ ರವಿಯ ಮನಸ್ಸಿನಲ್ಲಿ ಜಾಗೃತವಾಗುವ ಆಧ್ಯಾತ್ಮಿಕ ಸಂಘರ್ಷಗಳು, ಈ ಪುಟ್ಟ ಕಾದಂಬರಿಯನ್ನು ಮೀರಿ ಬೆಳೆದದ್ದು ಅಚ್ಚರಿ ಮೂಡಿಸುತ್ತದೆ. ತನಗೆ ಸಿಕ್ಕ ಸರಸ್ವತಿ ಫೋಟೊವನ್ನು ಬಚ್ಚಿಡಲು ರವಿ ಆಯ್ಕೆ ಮಾಡಿದ ಬಾವಿಯ ನಿಗೂಢವಾದ ಗೂಡು ಹಾಗೂ ಅದನ್ನು ಕಂಡ ಗುಡಿಯಲ್ಲಿರುವ ಸೋಮಶೇಖರ ಅಜ್ಜ ಮತ್ತು ದೇವರ ಹಾಗೆ ಮಾತಾಡಿ ಆತ ರವಿಯಲ್ಲಿ ತುಂಬುವ ಆತ್ಮವಿಶ್ವಾಸ, ಕೃತಿಗೆ ಒಂದು ರೋಮಾಂಚನದ ತಿರುವು ಒದಗಿಸಿಕೊಟ್ಟಿದೆ. ಭೀಮಣ್ಣ ಮಾಸ್ತರರಿಂದ ಅವಮಾನಕ್ಕೊಳಗಾಗಿ ಇದ್ದಲ್ಲೇ ನಾಪತ್ತೆಯಾಗಿ ಪಟ್ಟಣದ ಹೋಟೆಲೊಂದರಲ್ಲಿ ಕೆಲಸಕ್ಕಿದ್ದು, ನಂತರ ಹೆಬಸೂರ ಮಾಸ್ತರರಿಂದಲೇ ಮನೆ ಸೇರಿದ ಸುರೇಶ, ತನ್ನ ಮೊಂಡಾಟ ಮಿತಿಮೀರಿದಾಗ ಹೆಬಸೂರ ಮಾಸ್ತರರಂತಹ ಅಪರೂಪದ ಸಂಯಮಿಯಿಂದಲೇ ಪೆಟ್ಟು ತಿನ್ನುವ ಸದಾಶಿವ, ಇವರೆಲ್ಲ ಕಾದಂಬರಿಯಲ್ಲಿ ಮಗು ಮನಸ್ಸಿನ ಅಪ್ಪಟ ಪ್ರತಿರೂಪಗಳಂತೆ ದಾಖಲಾಗಿದ್ದಾರೆ.

ಭೀಮಣ್ಣ ಮಾಸ್ತರು ಎಲೆ ಅಡಿಕೆ ಜಗಿದು ಉಗುಳುವ ರೀತಿ, ಅವರು ನಿರಪರಾಧಿ ಶಿಷ್ಯರಿಗೂ ಕೊಡುವ ಛಾಟಿಯೇಟು, 'ನೀನು ಪೊಲೀಸ್ ಹವಾಲ್ದಾರನೋ ಮಾಸ್ತರನೋ' ಅಂತ ಹೆಡ್ ಮಾಸ್ತರರಿಂದ ಬೈಸಿಕೊಳ್ಳುವ ಸಂದರ್ಭ, ದೇವರ ಫೋಟೋ ಒಡೆದದ್ದರಿಂದ ನೀವ್ಯಾರೂ ಪಾಸಾಗುವುದಿಲ್ಲ ಎಂದು ಅಬ್ಬರಿಸಿ, ವಿದ್ಯಾರ್ಥಿಗಳಲ್ಲಿ ತುಂಬುವ ಭಯ – ಇಂಥ ಎಲ್ಲ ದ್ವಂದ್ವಗಳ ನಡುವೆಯೂ ಸುರೇಶನ ಸಂಬಂಧ ಮೇಲಧಿಕಾರಿಗಳಿಗೆ ಮೂಕರ್ಜಿ ಹೋದಾಗ ಭೀಮಣ್ಣ ಮಾಸ್ತರ ಮುಖದಲ್ಲಿ ಹುಟ್ಟುವ ಸಪ್ಪನೆ ಭಾವ... ಇವೆಲ್ಲ ಒಬ್ಬ ವ್ಯಕ್ತಿಯನ್ನು ಹಲವು ದೃಷ್ಟಿಕೋನಗಳಿಂದ ಲೇಖಕರು ನೋಡಿದ ರೀತಿ ಎದ್ದುಕಾಣುತ್ತದೆ. ರವಿ, ಪವನ, ಪ್ರಶಾಂತ, ಅಶೋಕ ಹೀಗೆ ಹುಡುಗರ ಗುಂಪಿನದೇ ದೈನಿಕದ ವಿವರಗಳಿಂದ ಕೂಡಿದ ಕಥನವನ್ನು ಓದಲು ಮೊದಲ್ಗೊಂಡಾಗ, ಯಾಕೆ ಇಲ್ಲಿ ಹುಡುಗಿಯರ ಲೋಕವು ಲೇಖಕರಿಂದ ತಪ್ಪಿಸಿಕೊಂಡು ದೂರವಾಗಿದೆ ಎಂಬ ಪ್ರಶ್ನೆ ಕಾಡಲು ಶುರುವಾಗಿತ್ತು. ಆದರೆ ನಂತರದಲ್ಲಿ ಬರುವ ಚೂಡೀದಾರದ ವನಿತಾ ಹಾಗೂ ಗೀತಾಂಜಲಿಯ ಪ್ರಕರಣಗಳು ಓದಿಗೆ ಒಂದು ರೀತಿಯ ಪೂರ್ಣತೆಯನ್ನೂ ಹಸಿತನವನ್ನೂ ಲವಲವಿಕೆಯನ್ನೂ ತಂದುಕೊಟ್ಟು ಖುಷಿಯುಂಟುಮಾಡುತ್ತದೆ.

''ವಿದ್ಯಾ ಕಲಿಸಿದ ಗುರುಗಳ ಬಗ್ಗೆ ಎಂದೂ ಹಗುರವಾಗಿ ಮಾತನಾಡಬಾರದು'' ಎಂದು ತಾಕೀತು ಮಾಡುವ ರವಿಯ ತಾಯಿ, ಹೆಬಸೂರ ಮಾಸ್ತರ ನಂತರ ನೆನಪಿನಲ್ಲುಳಿಯುವ ಆದರ್ಶ ತಾಯಿಯಾಗಿ ಮನಸ್ಸಿನಲ್ಲಿ ನಿಲ್ಲುತ್ತಾಳೆ. 'ಬಾವಿಯಲ್ಲಿ ಈಸಾಡಿದ್ದು... ಚಡ್ಡಿ ತೋಯಿಸಿಕೊಂಡೇ ಶಾಲೆಗೆ ಹೋಗಿದ್ದು... ಹುಡುಗಿಯರೆಲ್ಲ ನಕ್ಕಿದ್ದು... ಎಲ್ಲ ಮೊನ್ನೆ ಮೊನ್ನೆ ನಡೆದಂತೆ ಇದ್ದವು...' ಇಲ್ಲಿ ಮೂಡುವ ಹಾಗೂ ಕಾಣಿಸುವ ಚಿತ್ರ ಕಣ್ಣಿಗೆ ಕಟ್ಟುವಂತೆ ಮಕ್ಕಳ ಅನುಭವಕ್ಕೆ ನಿಲುಕುವ ಹಾಗೆ ನಿರೂಪಿತವಾಗಿವೆ. ಇಡೀ ಕಾದಂಬರಿಯ ಪ್ರತಿ ಪುಟವೂ ಹೀಗೆಯೇ ತಾಜಾ ಆಗಿದ್ದರೆ, ಕೃತಿಗೆ ದೊರಕುವ ಲವಲವಿಕೆಯಿಂದ ಇನ್ನೂ ಹೆಚ್ಚಿನ ರೀತಿಯಲ್ಲಿ ಸ್ಪಂದನೆಗೊಳಗಾಗುತ್ತಿತ್ತು ಅಂತಲೂ ಅನ್ನಿಸುತ್ತದೆ. ''ಮಕ್ಕಳು ಅಂದರ ಅವರು ನಮ್ಮ ಹೊಟ್ಟೆಯೊಳಗನ ಹುಟ್ಟಿರಬೇಕಂತೇನೂ ಇಲ್ಲ'' ಎಂದು ಹೆಬಸೂರ ಮಾಸ್ತರು ತಮ್ಮ ಮಕ್ಕಳಿಲ್ಲದ ಪತ್ನಿಗೆ ಹೇಳುವಂಥ ಮಾತು ಆಳವಾದ ಮಾನವೀಯ ಮೌಲ್ಯವನ್ನು ಪಡೆದುಕೊಂಡಿದೆ.

'ಮಧ್ಯಾಹ್ನದ ಸೂರ್ಯ ಬಾವಿಯಲ್ಲಿ ಬಿದ್ದಿದ್ದ, ಸೂರ್ಯ ಕಿರಣ ಸುತ್ತಲೂ ಹರಡಿ ಹೊಳೆಯುತ್ತಿತ್ತು' ಎಂಬಂತಹ ಇಲ್ಲಿನ ಹಲವು ಕಾವ್ಯಾತ್ಮಕ ಬರವಣಿಗೆಗಳು ಮಕ್ಕಳ ಮನಸ್ಸನ್ನು ಸೃಜನಾತ್ಮಕವಾಗಿ ವಿಕಾಸಗೊಳಿಸುವಲ್ಲಿ ಸಹಕಾರಿಯಾಗುವಂತಿವೆ. ಚಹದಲ್ಲಿ ಬ್ರೆಡ್ಡು ಅದ್ದಿ ತಿನ್ನುವ ರುಚಿ ರೂಢಿಸಿಕೊಂಡ ರವಿ, 'ಎ... ಬ್ರೆಡ್... ಎ... ಬ್ರೆಡ್' ಎಂದು ಬ್ರೆಡ್ಡಿನ ಅಬೀದನನ್ನು ಕರೆದು ನಿಲ್ಲಿಸುವಾಗ, ರವಿಯ ತಾಯಿ ಅವನನ್ನು ತಡೆದು 'ಹಾಗೆ ಎ... ಎ ಅನಬ್ಯಾಡಾ, ಅಬೀದಣ್ಣಾ ಅಂತ ಕರಿ' ಎಂದು ಹೇಳಿಕೊಡುವ ಸಮಯವು ಅತ್ಯಂತ ಸಹಜವಾಗಿ ಅರಳಿ ಬಂದಿದೆ. ನಾಗರಿಕ ಸಮಾಜದಲ್ಲಿ ಇಂಥ ಹಲವು ಸೌಜನ್ಯಯುತ ಸಂಬಂಧಗಳನ್ನು ಕಲ್ಪಿಸುವ ತಾಯಿ ಈ ಕೃತಿಯಲ್ಲಿದ್ದಾಳೆಂಬುದು ಈ ಕಾದಂಬರಿಯ ಹೆಚ್ಚುಗಾರಿಕೆ.

'ದುಡ್ಡು ಎಲ್ಲಿ ಹೊಕ್ಕಾವು, ಸಿಕ್ಕ ಸಿಗ್ತಾವು, ಆದರ ಪ್ರೀತಿ ಸಿಗಬೇಕಲ್ಲ' ಎನ್ನುತ್ತಿದ್ದ ಅಬೀದ್, ನಂತರ ಮುಂಬೈಗೆ ಹೋಗಿ, ಅಲ್ಲಿಯ ಜೀವನವನ್ನು 'ನಕ್ಕರೂ ಕೇಳುವವರಿಲ್ಲ, ಅತ್ತರೂ ಕೇಳುವವರಿಲ್ಲ' ಎಂದು ವಿವರಿಸುವಾಗ ಅಲ್ಲಿ

ಉಂಟಾಗುವ ಮೌನ, ಹಳ್ಳಿ ಮತ್ತು ಪಟ್ಟಣದ ಸಾಂದರ್ಭಿಕ ಅವಲೋಕನದಲ್ಲಿ ಈ ಕಾದಂಬರಿ ಪಡಕೊಳ್ಳುವ ಅಂತರಂಗದ ಮೌನವೂ ಆಗಿದೆ. ರವಿಗೆ ರವ್ಯಾ, ಪವನ್‌ಗೆ ಪವ್ಯಾ ಹೀಗೆ ಅಗದೀ ಆತ್ಮೀಯ ಕರೆಯಲ್ಲೇ ಮಕ್ಕಳ ನಡುವಿನ ಸಂಬಂಧದ ಕೊಂಡಿಯನ್ನು ಪರಿಗಣಿಸುವ ಕಾದಂಬರಿಯ ಶೈಲಿ ಆಪ್ತವಾಗುತ್ತದೆ. ಜೊತೆಯಲ್ಲಿ ನಮ್ಮ ಉತ್ತರ ಕರ್ನಾಟಕದ ಸೊಗಡಿನ ಭಾಷೆ ಖುಷಿಕೊಡುತ್ತದೆ.

'ಕತೆ ಕೆಲವೊಮ್ಮೆ ಅರ್ಧಕ್ಕೆ ನಿಂತುಬಿಡುತ್ತದೆ' ಎಂಬ ಹೆಬಸೂರ ಮಾಸ್ತರು ಹೇಳಿದ ಒಂದು ವಾಕ್ಯ, ಅವರು ಕಾಲವಾದ ನಂತರವೂ ರವಿಗೆ ನೆನಪಾಗುತ್ತಿರುತ್ತದೆ. ಆ ಅರ್ಧಕ್ಕೆ ನಿಂತ ಕತೆಯನ್ನು ಪೂರ್ಣಗೊಳಿಸಬೇಕೆಂಬ ದಾರಿಯಲ್ಲಿ ರವಿಯಲ್ಲಿ ಹುಟ್ಟುವ ಉತ್ಕಟತೆ, ಇಲ್ಲಿ ಒಂದು ರೀತಿಯ ಸಾಂಕೇತಿಕ ದರ್ಶನದಂತೆ ಒಡಮೂಡಿದೆ. ಕವಿ ವೆಂಕಟೇಶಮೂರ್ತಿಯವರು ಇದನ್ನು ಓದುವಾಗ ಸಹಜವಾಗಿ ನಮಗೆ ನಮ್ಮ ಬಾಲ್ಯದ ದಿನಗಳು ನೆನಪಾಗುತ್ತವೆ, ಆ ನೆನಪೇ ಈ ಕೃತಿಯನ್ನು ಇನ್ನಷ್ಟು ಆಪ್ಯಾಯಮಾನ ಗೊಳಿಸುತ್ತವೆ ಎಂದು ಬರೆದಿದ್ದು ಈ ಮೂಲಕ ಸತ್ಯ, ಹಾಗೆಯೇ ಒಂದು ಮಗು ಮನಸ್ಸಿಗೆ ತೆರಳಿ ಈ ಕೃತಿಯನ್ನು ವೆಂಕಟೇಶಮೂರ್ತಿ ಓದಿಕೊಂಡಿದ್ದಾರೆ. ಮಕ್ಕಳಿಗಾಗಿ ಕೃತಿಗಳನ್ನು ರಚಿಸುವುದು ಎಷ್ಟು ಕಷ್ಟ ಅಂತ ಬಸು ಅವರಿಗೆ ಮನವರಿಕೆ ಆದ ಹಾಗೆ, ಮಕ್ಕಳಿಗಾಗಿ ಬರೆದದ್ದನ್ನು ಮುಕ್ತವಾಗಿ ಓದುವದರಲ್ಲಿಯೂ ಅಷ್ಟೇ ಕಷ್ಟಗಳಿವೆ ಎಂದು ನನಗೂ ಮನವರಿಕೆಯಾಗಿದೆ, ಆದರೆ ಇದು ಆಗಬೇಕಾದ್ದೇ. ನಮ್ಮೆಲ್ಲರ ಬರವಣಿಗೆಗೆ ಮುಗ್ಧತೆ ಪ್ರಾಮಾಣಿಕತೆಗಳು ಒದಗಿಬರ ಬೇಕಾದರೆ ಮಗು ಮನಸ್ಸಿನಿಂದ ಬರೆಯಬೇಕು ಎಂದು ಹಿರಿಯರು ಹೇಳಿದ್ದಿದೆ. ಇಂದಿನ ವಿಚಿತ್ರ ಆಧುನಿಕತೆ, ಕೃತಕತೆ ಹಾಗೂ ಜಾಗತೀಕರಣದ ಈ ಸಂದರ್ಭದಲ್ಲಿ ಹೀಗೆ ಮುಗ್ಧತೆಯನ್ನು ಮೈಗೂಡಿಸಿಕೊಳ್ಳುವ ತಾಲೀಮು ಅವಶ್ಯವಾಗಿ ನಮ್ಮೆಲ್ಲರಿಗೂ ಬೇಕು ಅಂತ ನನಗನ್ನಿಸಿದೆ.

ಡಾ॥ ಆನಂದ ಪಾಟೀಲರು ರಚಿಸಿದ ಈ ಪುಟ್ಟ ಹೊತ್ತಿಗೆಯ ಪುಟ ಪುಟಗಳಲ್ಲೂ ಬರುವಂಥ ಚಿತ್ರಗಳು, ಮಕ್ಕಳ ಸಂವೇದನೆಯನ್ನು ತಿದ್ದಿ ತೀಡಿ ಒಂದು ತಹಬಂದಿಗೆ ತರಬಹುದಾದಂತಹ ಶಕ್ತಿಯನ್ನು ಹೊಂದಿವೆ. ಇನ್ನೂ ಹೆಚ್ಚಿನದನ್ನು ಓದುಗರು ಈ ಕೃತಿಯನ್ನು ಓದಿಯೇ ಅನುಭವಿಸಬೇಕು. ಈ ನಾಳೆಯ ಸೂರ್ಯ, ಇಂದಿನ ಹಾಗೂ ನಿನ್ನೆಯ ಸೂರ್ಯನೂ ಆಗಿ, ಮಕ್ಕಳ ಮನಸ್ಸಿಗೆ ನಿರಂತರ ಬೆಳಕು ನೀಡುವ ಜೀವನ ಪ್ರಭೆಯೂ ಆಗಿ, ಲೇಖಕ ಬಸು ಬೇವಿನಗಿಡದ ಅವರ ಕೃತಿಗಳಲ್ಲಿ ಇನ್ನೂ ಹೆಚ್ಚಿನ ಪಾಲು ಮಕ್ಕಳಿಗಾಗಿಯೇ ರಚನೆಯಾಗಲಿ ಎಂದು ಹಾರೈಸುತ್ತೇನೆ.

**ಸುನಂದಾ ಪ್ರಕಾಶ ಕಡಮೆ**
೯೦, ಕಾಳಿದಾಸನಗರ, ಹುಬ್ಬಳ್ಳಿ - ೩೧

# ನನಗೆ ಅರಿವಿರಲಿಲ್ಲ

ಎಂದಿನಿಂದಲೋ ನಿನ್ನೊಳಗೆ
ಜಲಪಾತವಾಗಿ ಧುಮುಕಿದೆ.
ಧುಮುಕಬೇಕಾಗಿರಲಿಲ್ಲ.

"ಕಾವ್ಯ" ನದಿಯಾಗಿ,
"ಮಿನಿಗವಿತೆ" ಝುರಿಯಾಗಿ
ಹರಿದೆ – ಹರಿಯಬೇಕಾಗಿರಲಿಲ್ಲ.

ನನ್ನೆದೆಯ ವೀಣೆಯಲಿ
ನಿನ್ನ ಒಲವ ರಾಗ ಹಾಡಿದೆ
ಹಾಡಬೇಕಾಗಿರಲಿಲ್ಲ.

ವಸಂತ ಮಾಸದಿ
ಪ್ರೇಮ ಕೋಗಿಲೆ ಹಾಡು
ಕೇಳಲು
ಬರಬಹುದೆಂದುಕೊಂಡಿದ್ದೆ.

ಇಲ್ಲಿ ಕನಸುಗಳು...
ಎರಡು ಕಾಸಿಗೂ ಮಾರಾಟ
ವಾಗಲಾರವೆಂದು ತಿಳಿದಿರಲಿಲ್ಲ.

ಅದಕ್ಕೇ ಗೆಳೆಯ...
ನಾ ಕವಿಯಾಗಲಿಲ್ಲ
ನಿನ್ನಂತೆ.
ಭಾವುಕಳಾಗಲಿಲ್ಲ
ಬರೇ ವಾಸ್ತವವಾದಿಯಾಗಿದ್ದೇನೆ !!



**ಶೋಭಾ ಪ್ರಮೋದ್**
ಅಂಚೆ: ಮಾಣ್‌ಗಾಂವ್ – ೪೦೨ ೧೦೪, ರಾಯಗಢ್ ಜಿಲ್ಲೆ, ಮಹಾರಾಷ್ಟ್ರ

# ಭಾರತದ ಬೃಹನ್ನದ

# ಬ್ರಹ್ಮಪುತ್ರ



ಬ್ರಹ್ಮಪುರದ ದೀರ್ಘಪಯಣ (ಚಿತ್ರದ ಎಡಭಾಗದಲ್ಲಿ)

ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥

ಇದು ಪ್ರಸಿದ್ಧವಾದ ಒಂದು ಶ್ಲೋಕ. ಇಲ್ಲಿ ಗಮನಾರ್ಹವಾದ ಒಂದು ವಿಷಯ : ಶತಶತಮಾನಗಳ ಹಿಂದೆ ಮರುಭೂಮಿಯಲ್ಲಿ ಇಂಗಿ ಕಣ್ಮರೆಯಾದ, ಈಗಿನ ದಿನಗಳಲ್ಲಿ ದರ್ಶನ ದುರ್ಲಭವಾಗಿರುವ ಮತ್ತು ಅಲಭ್ಯವಾಗಿರುವ ಸರಸ್ವತಿ ನದಿಯ ನೀರು ದೇವರ ಮಂಗಳ ಸ್ನಾನಕ್ಕೆ ಶ್ರೇಷ್ಠ. ಆದರೆ ಈ ದಿನಗಳಲ್ಲಿ ಸಹ ಹೇರಳವಾಗಿ ದೊರಕುವ ಬ್ರಹ್ಮಪುತ್ರದ ನೀರು ಅವನ ಸೇವೆಗೆ ವರ್ಜ್ಯ! ಮೇಲಿನ ಮಂತ್ರದಲ್ಲಿ ಬ್ರಹ್ಮಪುತ್ರದ ಹೆಸರೇ ಇಲ್ಲ!! ಹೀಗೇಕೆ ಎಂಬುದು ಜನಸಾಮಾನ್ಯರಿಗೆ ಒಂದು ಯಕ್ಷಪ್ರಶ್ನೆ. ಯಾವುದೋ ಕಾರಣದಿಂದ ನಮ್ಮ ಭಾರತದಲ್ಲೇ ಅತಿದೊಡ್ಡದೆನಿಸಿರುವ ಬ್ರಹ್ಮಪುತ್ರ ನದಿಗೆ ನಾವು ತಕ್ಕ ಸ್ಥಾನಮಾನವನ್ನು ನೀಡದೆ ಉಪೇಕ್ಷಿಸಿರುವುದು ಒಂದು ವಿಲಕ್ಷಣ ವಿಷಯ. ನಮ್ಮ ಪೂರ್ವಜರು ಬ್ರಹ್ಮಪುತ್ರ ನದಿಯನ್ನು 'ಗಂಡು' ಎಂದು ಪರಿಗಣಿಸಿ, ಬ್ರಹ್ಮನ 'ಪುತ್ರ' ಎಂದು ನಾಮಕರಣ ಮಾಡಿ, ಅದು 'ನದಿ'ಯೇ ಅಲ್ಲ, 'ನದ' ಎಂದು ತೀರ್ಮಾನಿಸಿದರು. ಹೀಗಾಗಿ ಭಾರತದ ಅತ್ಯಂತ ದೊಡ್ಡ ನದಿ ಬ್ರಹ್ಮಪುತ್ರವು 'ಬೃಹತ್ ನದ' (ಬೃಹನ್ನದ)ವಾಗಿ, ಪೂಜೆಯಿಲ್ಲದ ಅಪ್ಪನಿಗೆ ತಕ್ಕ ಮಗನಾಗಿ, ಪವಿತ್ರತೆಯಿಂದ ವಂಚಿತವಾಗಿಯೇ ಉಳಿಯಿತು! ಈ ಅಪಮಾನಗಳನ್ನು ಸಹಿಸಲಾರದೆ ಸರಸ್ವತಿಯು ಭೂಮಿಯಲ್ಲಿ ಇಂಗಿಹೋದಳೋ ಎಂಬಂತೆ ಅವಳು ಗುಪ್ತಗಾಮಿಯಾಗಿ ಅದೃಶ್ಯಳಾಗಿರಬಹುದು!

ಬ್ರಹ್ಮಪುತ್ರ ನದಿಯನ್ನು ಕುರಿತ ನಮ್ಮ ತಿಳಿವಳಿಕೆ ಬಹಳಷ್ಟು ಮಟ್ಟಿಗೆ ಸೀಮಿತವಾದುದು ಎಂದು ಹೇಳಬಹುದು. ಅದು ನಮ್ಮ ದೇಶದ ಉತ್ತರದಲ್ಲಿ ಹಿಮಾಲಯ ಪರ್ವತ ಶ್ರೇಣಿಯಲ್ಲಿ ಹುಟ್ಟಿ, ಅಸ್ಸಾಂ ಮೂಲಕ ನಮ್ಮ ದೇಶಕ್ಕೆ ಬರುವುದೆಂದೂ ಅದು ನಮ್ಮ ದೇಶದ ಅತಿ ದೊಡ್ಡ ನದಿ ಎಂದೂ, ಬಂಗಾಳ ಕೊಲ್ಲಿಯಲ್ಲಿ ಸಮುದ್ರಕ್ಕೆ ಬೀಳುವುದೆಂದೂ ನಮಗೆ ವೇದ್ಯ. ನಮ್ಮ ದೇಶದ ಅರುಣಾಚಲ ಪ್ರದೇಶ, ಅಸ್ಸಾಮ್, ಮೇಘಾಲಯ, ಬಂಗಾಳ ರಾಜ್ಯಗಳಲ್ಲಿ ವಾಸಿಸುವ ಜನರಿಗೆ ಮಾತ್ರ ಈ ನದಿಯೊಂದಿಗೆ ಗರಿಷ್ಠ ಸಂಬಂಧ: ಅದರಿಂದ ದೊರಕಬಹುದಾದ ಪ್ರಯೋಜನಗಳ ಮತ್ತು ಉಂಟಾಗಬಹುದಾದ ಕಷ್ಟನಷ್ಟಗಳ ನಿಕಟ ಪರಿಚಯ.

ಬ್ರಹ್ಮಪುತ್ರದ ಒಟ್ಟು ಉದ್ದ ಸುಮಾರು ೧೮೦೦ ಮೈಲಿಗಳು (ಹಲವು ದಶಕಗಳ ಹಿಂದೆ ಅದರ ಉದ್ದ ೧೬೨೦ ಮೈಲಿಗಳೆಂದು ತಿಳಿಸಲಾಗಿತ್ತು. ಈಗ ೧೮೦೦ ಮೈಲಿಗಳೆಂದು ಪರಿಷ್ಕರಿಸಲಾಗಿದೆ). ಇದು ವರ್ತಮಾನದಲ್ಲಿ ಮೂರು ದೇಶಗಳ ಮೂಲಕ ಹರಿದು, ಹಲವಾರು ಭಿನ್ನಭಿನ್ನ ಸಂಸ್ಕೃತಿಗಳನ್ನು ಪರಿಚಯಿಸಿಕೊಂಡು ವಿವಿಧ ಜನಾಂಗಗಳ ಜೀವನಾಧಾರವಾಗಿ, ಅವರು ದಯಪಾಲಿಸಿದ ನಾನಾ ಹೆಸರುಗಳನ್ನು ಧರಿಸಿ, ಬಂಗಾಳ ಕೊಲ್ಲಿಯಲ್ಲಿ ಸಮುದ್ರದೊಡನೆ ಐಕ್ಯವಾಗುತ್ತೆ. ಇದರ ಹರಿವು ಟಿಬೆಟ್‌ನಲ್ಲಿ ಸುಮಾರು ೧೦೦೦ ಮೈಲಿಗಳು, ಈಗಿನ ಭಾರತದಲ್ಲಿ ಸುಮಾರು ೪೮೦ ಮೈಲಿಗಳು ಮತ್ತು ಉಳಿದ ೩೨೦ ಮೈಲಿಗಳು ಬಾಂಗ್ಲಾ ದೇಶದಲ್ಲಿ.

*ಬ್ರಹ್ಮಪುತ್ರ ಎಂಬ ಈ ನದಿ ಯಾವುದೇ ದೃಷ್ಟಿ ಕೋನದಿಂದ ನೋಡಿದರೂ ಒಂದು ವಿಲಕ್ಷಣ ಅಥವಾ ಅಸಾಧಾರಣ ನದಿಯಾಗಿ ಗೋಚರಿಸುತ್ತೆ. ಪ್ರಪಂಚದ ಮಿಕ್ಕೆಲ್ಲ ನದಿಗಳಿಗಿಂತ ಎಷ್ಟೋ ರೀತಿಯಲ್ಲಿ ಭಿನ್ನವಾದುದು. ಪ್ರಕೃತಿಯ ವರದಾನವೋ, ಶಾಪವೋ ಅಥವಾ ಇವೆರಡರ ಸಮ್ಮಿಶ್ರಣವೋ, ಯಾವುದೋ ಕಾರಣಗಳಿಂದ ಈ ನದಿಯಲ್ಲಿ ನಮಗೆ ಕಂಡುಬರುವ ಕೆಲವು ವೈಶಿಷ್ಟ್ಯಗಳು ಮತ್ತು ಪ್ರಾಕೃತಿಕ ಲಕ್ಷಣಗಳು ಮಿಕ್ಕ ಯಾವ ನದಿಯಲ್ಲೂ ಕಂಡುಬರುವುದಿಲ್ಲ. ಈ ಹೆಚ್ಚಳಗಳಲ್ಲಿ ಹಲವು 'ನಿರರ್ಥಕ'ವೆನಿಸುವಂತಹ ವಿಶ್ವ ದಾಖಲೆಗಳು; ಉಳಿದವು ವಿಲಕ್ಷಣವಾದುವು. ಮಾನವನಿಗೆ ಪ್ರತಿಕೂಲವಾದುವು.*

ಬಿ. ವಿ. ಸುಬ್ಬರಾವ್

ಬ್ರಹ್ಮಪುತ್ರ ಎಂಬ ಈ ನದಿ ಯಾವುದೇ ದೃಷ್ಟಿ ಕೋನದಿಂದ ನೋಡಿದರೂ ಒಂದು ವಿಲಕ್ಷಣ ಅಥವಾ ಅಸಾಧಾರಣ ನದಿಯಾಗಿ ಗೋಚರಿಸುತ್ತೆ. ಪ್ರಪಂಚದ ಮಿಕ್ಕೆಲ್ಲ ನದಿಗಳಿಗಿಂತ ಎಷ್ಟೋ ರೀತಿಯಲ್ಲಿ ಭಿನ್ನವಾದುದು. ಪ್ರಕೃತಿಯ ವರದಾನವೋ, ಶಾಪವೋ ಅಥವಾ ಇವೆರಡರ ಸಮ್ಮಿಶ್ರಣವೋ, ಯಾವುದೋ ಕಾರಣಗಳಿಂದ ಈ ನದಿಯಲ್ಲಿ ನಮಗೆ ಕಂಡುಬರುವ ಕೆಲವು ವೈಶಿಷ್ಟ್ಯಗಳು ಮತ್ತು ಪ್ರಾಕೃತಿಕ ಲಕ್ಷಣಗಳು ಮಿಕ್ಕ ಯಾವ ನದಿಯಲ್ಲೂ ಕಂಡುಬರುವುದಿಲ್ಲ. ಈ ಹೆಚ್ಚಳಗಳಲ್ಲಿ ಹಲವು 'ನಿರರ್ಥಕ'ವೆನಿಸುವಂತಹ ವಿಶ್ವ ದಾಖಲೆಗಳು; ಉಳಿದವು ವಿಲಕ್ಷಣವಾದುವು. ಮಾನವನಿಗೆ ಪ್ರತಿಕೂಲವಾದುವು. ಇದರ ಹುಟ್ಟು, ಬೆಳವಣಿಗೆ, ಅಂತ್ಯಗಳು ಕೂಡ ಒಂದು ದೃಷ್ಟಿಯಿಂದ 'ಸ್ಪೆಷಲ್' ಎನ್ನಬಹುದು. ಈ ವೈಶಿಷ್ಟ್ಯ, ಪ್ರಾಕೃತಿಕ ಲಕ್ಷಣ ಮತ್ತು ವಿಶ್ವದಾಖಲೆಗಳನ್ನು ಶ್ರೀಸಾಮಾನ್ಯನಿಗೆ ಪರಿಚಯಿಸುವುದೇ ಈ ಲೇಖನದ ಉದ್ದೇಶ. ಈ ಕಾರಣಗಳಿಂದಾಗಿ ನದಿಯನ್ನು ಕುರಿತ ವಿವರಣೆಗೆ ಪ್ರಾಮುಖ್ಯತೆ ಕೊಡಲಾಗಿದೆ. ಹಾಗೆಯೇ ನದಿಯು ಪ್ರವಹಿಸುವ ವಿವಿಧ ದೇಶಗಳ ಮತ್ತು ಅಲ್ಲಿ ವಾಸಿಸುವ ವಿಭಿನ್ನ ಜನಾಂಗಗಳ ಆಚಾರ, ವ್ಯವಹಾರ, ರೀತಿ ರಿವಾಜು ಸಂಸ್ಕೃತಿಗಳ ವಿಸ್ತೃತ ವರ್ಣನೆಗಳನ್ನು – ಸ್ಥಳಾಭಾವದಿಂದ – ಕೈಬಿಟ್ಟು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

### ವಿಶ್ವದಾಖಲೆಗಳು

ಪ್ರಪಂಚದ ದೊಡ್ಡ ನದಿಗಳಲ್ಲಿ ಬ್ರಹ್ಮಪುತ್ರಕ್ಕೆ ೨೦ನೇ ಸ್ಥಾನ ದೊರಕಿದೆ. ಆದರೂ ಇದಕ್ಕೆ ಹಲವಾರು 'ವಿಶ್ವದಾಖಲೆ'ಗಳು ದೊರಕಿವೆ. ಮೊದಲನೆಯದು, ಈ ನದಿಯ ೧೮೦೦ ಮೈಲಿಯ ಪ್ರವಹಣದಲ್ಲಿ, ಮೊದಲ ೮೦೦ ಮೈಲಿಗಳು, ಅರ್ಥಾತ್ ಅದರ ಶೇಕಡ ೪೫ ರಷ್ಟು ಉದ್ದ, ಸಮುದ್ರಮಟ್ಟದಿಂದ ಎರಡು ಮೈಲಿಗಳಿಗಿಂತಲೂ ಹೆಚ್ಚು ಎತ್ತರದಲ್ಲಿ ಪ್ರವಹಿಸುತ್ತೆ. ಉಗಮಸ್ಥಾನದಲ್ಲಿ ಇದರ ಮಟ್ಟ ೧೬,೮೦೦ ಅಡಿಗಳಷ್ಟಿದ್ದು, ೮೦೦ ನೇ ಮೈಲಿಯಲ್ಲಿ ೧೦,೨೦೦ ಅಡಿಗಳಷ್ಟಿದೆ. ಇಷ್ಟು ದೂರ ಇಷ್ಟು ಎತ್ತರದಲ್ಲಿ ಹರಿಯುವ ನದಿ ಪ್ರಪಂಚದಲ್ಲಿ ಇದೊಂದೇ! ಎರಡನೆಯದು, ಇದರ ಮೊದಲ ೫೦೦ ಮೈಲಿಗಳ ಹರಿವು ಹಿಮಾಲಯದ ಉತ್ತುಂಗ ಕಣಿವೆಗಳಲ್ಲಿ, ಹಿಮಗಡ್ಡೆಗಳಿಂದ ತುಂಬಿರುವ ಪರ್ವತ ಪ್ರದೇಶದಲ್ಲಿ,

ಛಳಿಗಾಲದಲ್ಲಿ ನದಿಯ ಮೇಲ್ಮೈ ನೀರು ಕೂಡ ಹೆಪ್ಪುಗಟ್ಟಿರುತ್ತೆ. ನೀರು ಹರಿಯುವುದು ಭಾರಿ ಹಿಮಗಡ್ಡೆಗಳ ತಳಭಾಗದಲ್ಲಿ. ಮೂರನೇ ದಾಖಲೆ, ಇದೇ ಕಾರಣದಿಂದ ಈ ಪ್ರಾಂತದಲ್ಲಿ ಜನವಸತಿ ತೀರ ಕಡಿಮೆ; ಕಾರಣ, ಕೃಷಿಯೋಗ್ಯ ಭೂಮಿಯ ಅಭಾವ. ಹಳ್ಳಿಕೊಂಪೆಗಳು ಕಾಣಬರುವುದಿಲ್ಲ. ನದಿಯನ್ನು ದಾಟಲು ಒಂದಾದರೂ ಸೇತುವೆ ನಿರ್ಮಿತವಾಗಿಲ್ಲ. ನಾಲ್ಕನೇ ದಾಖಲೆ, ಈವರೆಗೆ ಯಾವ ಮಾನವನೂ ಇದರ ಮೂಲದಿಂದ ಸಮುದ್ರದವರೆಗೆ, ಜಲಮಾರ್ಗದಿಂದಾಗಲೀ, ದಡದ ಬದಿಯಲ್ಲಾಗಲೀ, ನದಿಯುದ್ದಕ್ಕೂ ಸಾಗಿಹೋಗಿಲ್ಲ! ಈ ತರಹದ ದಾಖಲೆ ಇರುವುದು ಪ್ರಪಂಚದಲ್ಲಿ ಇದೊಂದೇ ನದಿಗೆ! ಮಿಕ್ಕೆಲ್ಲ ನದಿಗಳ ಉದ್ದಕ್ಕೂ ಮನುಷ್ಯ ಮೂಲದಿಂದ ಸಮುದ್ರದವರೆಗೆ ಸಾಗಿಹೋಗಿದ್ದಾನೆ. ಐದನೇ ದಾಖಲೆ, ನದಿಯ ೮೫೦ ನೇ ಮೈಲಿಯಲ್ಲಿ ಪೀ ಎಂಬ ಊರಿನ ಬಳಿ ನದಿಯು ೧೦,೦೦೦ ಅಡಿಗಳಷ್ಟು ಆಳದ ಪ್ರಪಾತದಲ್ಲಿ ಪ್ರವಹಿಸುತ್ತದೆ. ಅಮೆರಿಕದ ಗ್ರಾಂಡ್ ಕ್ಯಾನನ್‌ನಲ್ಲಿ ಕೊಲರಾಡೊ ನದಿ ಹರಿಯುವುದು ಕೇವಲ ಒಂದು ಮೈಲಿ ಆಳದಲ್ಲಿ ಮಾತ್ರ.

### ಬ್ರಹ್ಮಪುತ್ರದ ಮೂಲ

ದೊಡ್ಡ ನದಿ ಯಾವುದೇ ಇರಲಿ, ಅದರ ಉಗಮ ಸ್ಥಾನವನ್ನು ಕಂಡುಹಿಡಿಯುವುದು ಅತ್ಯಂತ ಪರಿಶ್ರಮದ ಕಾರ್ಯ. ದುರ್ಗಮ ಪರ್ವತ ಪ್ರದೇಶಗಳಲ್ಲಿ ಅಥವಾ ಗೊಂಡಾರಣ್ಯಗಳಲ್ಲಿ ನದಿಗಳು ಹುಟ್ಟುವುದು ಸರ್ವೇಸಾಮಾನ್ಯ. ಅವುಗಳ ಮೂಲ ಸ್ಥಾನವನ್ನು ಪತ್ತೆ ಮಾಡುವುದು ಅತಿ ಕಷ್ಟಕರ. ಆದರೂ ಮನುಷ್ಯ, ಬ್ರಹ್ಮಪುತ್ರ ಒಂದನ್ನು ಬಿಟ್ಟು ಪ್ರಪಂಚದ ಎಲ್ಲ ದೊಡ್ಡ ನದಿಗಳ ಮೂಲವನ್ನೂ ಶತಶತಮಾನಗಳ ಹಿಂದೆಯೇ ಕಂಡುಹಿಡಿದಿದ್ದ. ಇತ್ತೀಚಿನವರೆಗೂ ಮೂಲವು ರಹಸ್ಯವಾಗಿಯೇ ಉಳಿದದ್ದು ಬ್ರಹ್ಮಪುತ್ರ ನದಿಯದೊಂದೇ. ಅದು ಎಲ್ಲಿರಬಹುದೆಂದು ೨೦ನೇ ಶತಮಾನದ ಆದಿಯವರೆಗೂ ಯಾರಿಗೂ ಖಚಿತವಾಗಿ ತಿಳಿದಿರಲಿಲ್ಲ. ಇಲ್ಲಿರಬಹುದು ಅಲ್ಲಿರಬಹುದು ಎಂದು ಅಂದಾಜು ಮಾಡಲಾಗಿತ್ತು, ಅಷ್ಟೆ.

ಭಾರತದಲ್ಲಿ ಅನಾದಿಕಾಲದಿಂದಲೂ ಪಾರಂಪರ್ಯವಾಗಿ ಬಂದ ನಂಬಿಕೆಗಳು ಹಲವಾರು. ಕೈಲಾಸ ಪರ್ವತವೇ ಬ್ರಹ್ಮಪುತ್ರದ ಮೂಲ ಎಂದು ಹಲವರು ನಂಬಿದ್ದರೆ, ಮಾನಸಸರೋವರವೇ ಅದರ ಮೂಲ ಎಂಬುದು ಮತ್ತಿತರರ ವಿಶ್ವಾಸ. ಯಾರ ನಂಬಿಕೆಗೂ ಆಧಾರವಿರಲಿಲ್ಲ.

ವಿಶ್ವದಲ್ಲೇ ಅತ್ಯುನ್ನತ ಪರ್ವತಶ್ರೇಣಿಯೆನಿಸಿರುವ ಹಿಮಾಲಯದಲ್ಲಿ ಉತ್ತುಂಗ ಶೃಂಗಗಳು ಅನೇಕ. ಅವುಗಳ ಪೈಕಿ ಕೈಲಾಸ ಪರ್ವತವೂ ಒಂದು. ೨೨,೦೨೮ ಅಡಿ ಎತ್ತರದ ಈ ಪರ್ವತವು ಹಿಂದು, ಬೌದ್ಧ, ಜೈನ ಇತ್ಯಾದಿ ಭಾರತ ಮೂಲದ ಸರ್ವಧರ್ಮೀಯರಿಗೂ ಪರಮಪವಿತ್ರ. ಭಾರತದ ಗಡಿಯಿಂದ ಕೇವಲ ೬೦ ಮೈಲಿ ದೂರವಿದ್ದರೂ ಕೈಲಾಸಕ್ಕೆ ನೇರ ರಸ್ತೆಯ ಸೌಲಭ್ಯವಿಲ್ಲ. ನೇಪಾಳದ ಕಠ್ಮಂಡುವಿನ ಮೂಲಕ ೬೦೦ ಮೈಲಿಗಳಷ್ಟು ದೂರ ಬಳಸಿಹೋಗುವುದು ಅನಿವಾರ್ಯ. ಇಲ್ಲವಾದರೆ ತವಾಘಾಟ್‌ನಿಂದ ಲಿಪುಲೇಖ್ ಕಣಿವೆ ದಾಟಿ ನಡೆದು ಹೋಗಬೇಕು. ಈ ಕೈಲಾಸವೇ ಪುರಾಣಪ್ರಸಿದ್ಧವಾದ ಮೇರು ಪರ್ವತವೆಂಬ ಪ್ರತೀತಿಯಿದೆ. ಇದು ಈಗ ಲಕ್ಷಾಂತರ ಭಕ್ತರ ಗಮ್ಯಸ್ಥಾನ; ಪಾರ್ವತಿ ಪರಮೇಶ್ವರರ ಪುಣ್ಯಧಾಮ. ಈ ಪರ್ವತದ ದಕ್ಷಿಣದಲ್ಲಿ ಮಾನಸಸರೋವರ. ಇದು ಸಮುದ್ರ ಮಟ್ಟದಿಂದ ೧೪,೯೫೦ ಅಡಿ ಎತ್ತರದಲ್ಲಿದೆ. ಈ ಪವಿತ್ರ ಸರೋವರದಲ್ಲಿ ಮಿಂದರೆ ಸ್ವರ್ಗಪ್ರಾಪ್ತಿ, ಇದರ ಒಂದು ಹನಿ ನೀರು ಕುಡಿದರೆ ಸರ್ವಪಾಪ ನಿವಾರಣೆ; ಶಿವಾಂಗಿಯೇ ಮಾನಸಸರೋವರದ ರೂಪಧಾರಣೆ ಮಾಡಿ ಆವಿರ್ಭವಿಸಿರುವಳೆಂಬ ವಿಶ್ವಾಸ; ನಂಬಿಕೆ. ಈ ಮಾನಸಸರೋವರವೇ ಬ್ರಹ್ಮಪುತ್ರ ನದಿಯ ಮೂಲ ಎಂದು ಪುರಾಣಕಾಲದಿಂದಲೂ ಪರಂಪರಾಗತವಾಗಿ ಬಂದ ನಂಬಿಕೆ.

ಚಿತ್ರ - ೧

ಭಾರತದ ಬೃಹನ್ನದ 'ಬ್ರಹ್ಮಪುತ್ರ'ದ ಹರಿವು

ಈ ನಂಬಿಕೆಗೆ ಪ್ರಬಲವಾದ ಕಾರಣವೂ ಇತ್ತು ಎನ್ನಬಹುದು. ೨೦,೦೦೦ ಅಡಿಗಳಿಗಿಂತಲೂ ಹೆಚ್ಚು ಎತ್ತರದ ಹಿಮಾಲಯ ಪರ್ವತ ಪ್ರದೇಶದಲ್ಲಿ ಭಾರಿ ಭಾರಿ ಶೃಂಗಗಳು ನೂರಾರು. ಇವೆಲ್ಲವೂ ದಟ್ಟವಾದ ಮಂಜಿನಿಂದ ಮುಚ್ಚಿಹೋಗಿರುವಂಥವು. ಈ ರಾಶಿ ರಾಶಿ ಮಂಜುಗಡ್ಡೆಗಳ ತಳಭಾಗದಲ್ಲಿ ಹನಿಹನಿಯಾಗಿ ರೂಪುಗೊಳ್ಳುವ ಬ್ರಹ್ಮಪುತ್ರ ನದೀಮೂಲವನ್ನು ಶೋಧಿಸುವುದು ನಮ್ಮ ಪೂರ್ವಜರಿಗೆ ಸಾಧ್ಯವಾಗಿರಲಿಲ್ಲ. ಅಷ್ಟೇಕೆ, ೨೦ನೇ ಶತಮಾನದವರೆಗೂ ಪಾಶ್ಚಾತ್ಯ ವಿಜ್ಞಾನಿಗಳಿಗೆ ಕೂಡ ಬ್ರಹ್ಮಪುತ್ರ ನದೀ ಮೂಲ ಎಲ್ಲಿದೆ ಎಂದು ಖಚಿತವಾಗಿ ಗೊತ್ತಿರಲಿಲ್ಲ. ೧೮೬೪ ನೇ ಇಸವಿಯಲ್ಲಿ ಯೂರೋಪಿನ ಪ್ರವಾಸಿಯೊಬ್ಬ ಈ ಪ್ರಾಂತ್ಯದಲ್ಲಿ ಸಂಚರಿಸಿ, ಮಾನಸಸರೋವರದ ಸಮೀಪದಲ್ಲೇ ಆಗ್ನೇಯ ದಿಶೆಯಲ್ಲಿ ಈಗಿನ ಟಿಬೆಟ್‌ನಲ್ಲಿ, ಇನ್ನೂ ಹೆಸರಿಸದ ಶೃಂಗವೊಂದರಿಂದ ಜಾರಿ ಬೀಳುವ ಹಿಮಗಡ್ಡೆಗಳೇ ಬ್ರಹ್ಮಪುತ್ರದ ಹುಟ್ಟುಸ್ಥಾನವೆಂದು ಪ್ರಕಟಿಸಿದ್ದ. ಆದರೆ ಇದನ್ನು ಪಾಶ್ಚಾತ್ಯ ವಿಜ್ಞಾನಿಗಳು ತಕ್ಷಣ ಒಪ್ಪಲಿಲ್ಲ. ಸುಮಾರು ೭೦-೮೦ ವರ್ಷಗಳ ನಂತರ ವಿಜ್ಞಾನದ ಪ್ರಗತಿಯಾಗಿ, ಕಂಪ್ಯೂಟರ್ ಯುಗ ಪ್ರಾರಂಭವಾದ ಮೇಲೆ, ದೂರವರ್ತಿ ಸಂವೇದ್ಯ ಯಂತ್ರಗಳ ಸಹಾಯದಿಂದ, ಈ ಸಣ್ಣ ಅನಾಮಿಕ ಶೃಂಗವೇ ಬ್ರಹ್ಮಪುತ್ರ ನದಿಯು ಮೂಲವೆಂದು ಸಿದ್ಧವಾಯಿತು. ಈ ಶೃಂಗವು ಮಾನಸಸರೋವರದಿಂದ ಕೇವಲ ೫-೬ ಮೈಲಿ ದೂರದಲ್ಲಿದೆ. ಈ ಅನಾಮಿಕ ಶೃಂಗವನ್ನೂ ಬ್ರಹ್ಮಪುತ್ರದ ಮೂಲವನ್ನೂ ಚಿತ್ರ -೧ರಲ್ಲಿ ನೋಡಬಹುದು.

ಈ ಅನಾಮಿಕ ಶೃಂಗ ಇರುವುದು ಪಶ್ಚಿಮ ಟಿಬೆಟ್‌ನ ಕೆಮಾಯುಂಗ್‌ಡಂಗ್ ಎಂಬ ಪರ್ವತ ಪ್ರದೇಶದಲ್ಲಿ, ೧೬,೮೦೦ ಅಡಿ ಎತ್ತರದಲ್ಲಿ. ಈ ಶೃಂಗದಿಂದ ಕೆಳಗೆ ಜಾರಿಬೀಳುವ ಮಂಜುಗಡ್ಡೆಗಳ ಸ್ರೋತಕ್ಕೆ – ಅರ್ಥಾತ್ ಬ್ರಹ್ಮಪುತ್ರ ನದೀ ಮೂಲಕ್ಕೆ ಸ್ಥಳೀಯ ಜನರು ನೀಡಿರುವ ಹೆಸರು 'ತಾಮ್ ಚೋಕ್ ಖಂಬಾಬ್' ಎಂಬ ಟಿಬೆಟ್ ಮೂಲದ ಹೆಸರು. ಇದರ ಅರ್ಥ 'ದಿವ್ಯಾಶ್ವದ ಮುಖದಿಂದ ಬಂದದ್ದು' ಎಂದು.

ನದಿಯ ಜಾಡನ್ನು ಹಿಡಿದು ಮುಂದು ಮುಂದಕ್ಕೆ ನಡೆದರೆ, ನದಿಯ ನೀರು ಹರಿಯುವುದು ಸ್ಪಷ್ಟವಾಗಿ ಕಣ್ಣಿಗೆ ಕಾಣಿಸುತ್ತೆ. ಟಿಬೆಟಿಯನ್ ಭಾಷೆಯಲ್ಲಿ ಈ ನದಿಯ ಹೆಸರು ಜಾಂಗ್‌ಬೊ ಎಂದು. ಬ್ರಹ್ಮಪುತ್ರ ಎಂಬ ಹೆಸರು ಅವರಿಗೆ ಅಷ್ಟಾಗಿ ಪರಿಚಯವಿಲ್ಲ. ಇಂಗ್ಲಿಷರ ಕಾಲದಲ್ಲಿ ಪರಂಗಿಯವರು ಇದನ್ನು 'ಬುರ್‍ರಾಮ್ ಪೂತರ್' ಎಂದು ಕರೆಯುತ್ತಿದ್ದರು. ಆದರೆ ಜಾಂಗ್‌ಬೊವೇ ಬುರ್‍ರಾಮ್ ಪೂತರ್ ಎಂದು ಅವರಿಗೆ ಬಹಳ ವರ್ಷಗಳವರೆಗೂ ಹೊಳೆಯಲೇ ಇಲ್ಲ! ೧೭೮೮ರಲ್ಲಿ ಆಗ ಬಂಗಾಳದ ಸರ್ವೆಯರ್ ಜನರಲ್ ಆಗಿದ್ದ ಮೇಜರ್ ಜೇಮ್ಸ್ ರೆನ್ನೆಲ್ ಎಂಬ ಬ್ರಿಟಿಷ್ ಅಧಿಕಾರಿ, ವರ್ಷಗಟ್ಟಲೆ ಶ್ರಮಿಸಿ ಶೋಧಿಸಿದ ನಂತರ, ಈ ಎರಡೂ ನದಿಗಳು ''ಒಂದೇ ಇರಬಹುದು'' ಎಂದು ಅಭಿಪ್ರಾಯಪಟ್ಟಿದ್ದ.

ಬ್ರಹ್ಮಪುತ್ರದ ಮತ್ತೊಂದು ವೈಶಿಷ್ಟ್ಯವೆಂದರೆ ಅದರ ''ದಶಾವತಾರ''. ಮಹಾವಿಷ್ಣುವಿಗೆ ಹಲವಾರು ಅವತಾರಗಳಿರುವಂತೆ, ಬ್ರಹ್ಮಪುತ್ರ ನದಿಗೂ ಹತ್ತು ಅವತಾರಗಳುಂಟು. ಮೂಲದಲ್ಲಿ ಜಾಂಗ್‌ಬೊ, ತದನಂತರ ಯಾರ್ ಲಾಂಗ್ ಜಾಂಗ್‌ಬೊ, ಸಾನ್‌ಪೊ, ಯೂಲುಬ್ ಸಂಗ್‌ಪೊ, ದಿಹಾಂಗ್, ಸಿಯಾಂಗ್, ಬ್ರಹ್ಮಪುತ್ರ, ಜಮುನ, ಪದ್ಮ ಮತ್ತು ಮೇಘನಾ. ಕಡೆಯ ಮೂರು ಹೆಸರುಗಳು ಬಂಗಾಳದ ಜನ ನೀಡಿದ ಹೆಸರುಗಳು. ಇಲ್ಲಿ ಮತ್ತೊಂದು ವೈಚಿತ್ರ್ಯವನ್ನೂ ಗಮನಿಸಬಹುದು. ಟಿಬೆಟ್‌ನ ಜನ ಜಾಂಗ್‌ಬೊ ನದಿಯನ್ನು ''ಗಂಡು'' ಎಂದು ಪರಿಗಣಿಸಲಿಲ್ಲ. ನದಿಯು ಭಾರತವನ್ನು ಪ್ರವೇಶಿಸಿದ ನಂತರವೇ ಅದು ಬ್ರಹ್ಮನ ''ಪುತ್ರ'' ಆಗಿದ್ದು. ಆದರೆ ವಂಗದೇಶವನ್ನು ಪ್ರವೇಶಿಸಿದ ಬಳಿಕ ಬಂಗಾಳಿಗಳು ಪುತ್ರನನ್ನು ಪುನಃ ಸ್ತ್ರೀಯನ್ನಾಗಿ ಪರಿವರ್ತಿಸಿ, ಜಮುನ, ಪದ್ಮ ಮತ್ತು ಮೇಘನಾ ಎಂಬ ಹೊಸ ಹೆಸರನ್ನಿಟ್ಟರು.

ಮತ್ತೂ ಒಂದು ವಿಷಯ ಇಲ್ಲಿ ಗಮನಾರ್ಹ. ಕಾವೇರಿ, ಕೃಷ್ಣ, ಗೋದಾವರಿ, ನರ್ಮದ, ಗಂಗ, ಯಮುನ ಇತ್ಯಾದಿ ಭಾರತದ ಪ್ರತಿಯೊಂದು ನದೀ ತೀರದಲ್ಲೂ ಯಾವುದಾದರೊಂದು ಪುಣ್ಯಕ್ಷೇತ್ರವಿದೆ. ಕೆಲವೆಡೆ ದೇವ ಮಂದಿರ, ಅಥವಾ ಜ್ಯೋತಿರ್ಲಿಂಗ ಅಥವಾ ಪವಿತ್ರಸ್ಥಳಗಳಿವೆ. ಆದರೆ ಬ್ರಹ್ಮಪುತ್ರದ ನದೀ ದಂಡೆಯಲ್ಲಿ ಯಾವ ಪವಿತ್ರ ಕ್ಷೇತ್ರವೂ ನಮಗೆ ಕಂಡುಬರುವುದಿಲ್ಲ. ಗಂಡು ನದಿ ಹೆಣ್ಣಾದ ಮೇಲೂ




ಅರ್ಥಾತ್ ಬಂಗಾಳದಲ್ಲೂ ಸಹ ಮಂದಿರ, ಆಶ್ರಮ ಪುಣ್ಯಾಧಾಮಗಳು ಸ್ಥಾಪಿತವಾಗಿಲ್ಲ. ಗಂಗಾ ಜಮುನಗಳ ಸಂಗಮವಾದ ನಂತರವೂ, ಮೇಘನಾ ಹೆಸರಿನಲ್ಲಿ ಸಮುದ್ರವನ್ನು ಸೇರಿದಾಗ ನದೀ ಮುಖಕ್ಕೆ ಗಂಗಾಮುಖ ಎಂಬ ಹೆಸರಿದೆಯೇ ಹೊರತು ಬ್ರಹ್ಮಪುತ್ರ ಅಥವಾ ಪದ್ಮ ಅಥವಾ ಜಮುನ ಅಥವಾ ಮೇಘನಾದ ಹೆಸರೇ ಇಲ್ಲ!

**ಮೂಲದಿಂದ ಸಮುದ್ರದವರೆಗೆ**

ಬ್ರಹ್ಮಪುತ್ರದ ಹುಟ್ಟು ಸ್ಥಳದಲ್ಲಿ ನಮಗೆ ಕಂಡುಬರುವುದು ಅತ್ಯಂತ ಮನಮೋಹಕ ದುರ್ಲಭ ದೃಶ್ಯ. ಸಮುದ್ರ ಮಟ್ಟದಿಂದ ೧೬,೮೦೦ ಅಡಿ ಎತ್ತರವಿರುವ ಈ ಪ್ರದೇಶದಲ್ಲಿ ಎತ್ತ ನೋಡಿದರೂ ಕಣ್ಣು ಕೋರೈಸುವಂತಹ ಶುಭ್ರಶ್ವೇತ, ಹಿಮಾಚ್ಛಾದಿತ ಪರ್ವತ ಶೃಂಗಗಳು; ಶೃಂಗಗಳ ನಡುವಿನ ಕಣಿವೆ ಕಂದರಗಳು. ಅವುಗಳ ಮಧ್ಯದಲ್ಲಿ ಮಂಜುಗಡ್ಡೆಯ ಮೇಲೆಯೇ ಆಗಾಗ್ಗೆ ಕಾಣಿಸಿಕೊಳ್ಳುವ ಯಾಕ್‌ಗಳು (ಚಮರಿ ಮೃಗ ಅಥವಾ ಟಿಬೆಟ್‌ನ ವೃಷಭ ಜಾತಿಯ ಮೃಗ); ಕುರಿ, ಮರ್ಮಾಟ್ (ಅಳಿಲಿನಂತಹ ಒಂದು ಬಗೆಯ ಪ್ರಾಣಿ); ಮೊಲ, ನರಿ, ಜಿಂಕೆ, ಕಾಡು ಕತ್ತೆಗಳು. ಮೇಲೆ ಕತ್ತೆತ್ತಿ ನೋಡಿದರೆ ನೀಲಾಕಾಶದಲ್ಲಿ ಮಂದಗತಿಯಲ್ಲಿ ಹಾರುತ್ತಿರುವ ರ್‍ಯಾವೆನ್‌ಗಳು (ಕಾಗೆಯಂತಹ ಕಪ್ಪು ಬಣ್ಣದ ಪಕ್ಷಿ), ಹದ್ದುಗಳು, ಇತ್ಯಾದಿ. ಆದರೆ ಎಲ್ಲಿಯೂ ಹಸುರಿನ ಹೆಸರೇ ಇಲ್ಲ.

ಮೂಲದಿಂದ ನದಿಯ ದಂಡೆಯಲ್ಲೇ ಸಮುದ್ರದೆಡೆಗೆ ಸಾಗಿದರೆ, ನದಿಯ ವಿವಿಧ ಎಡೆಗಳಲ್ಲಿ ಏನೇನು ವಿಶೇಷಗಳಿವೆ ಎಂಬ ಸಂಕ್ಷಿಪ್ತ ಪರಿಚಯ ಹೀಗಿದೆ.

ಟಿಬೆಟ್‌ನಲ್ಲಿ ಹರಿಯುವ ೧೦೦೦ ಮೈಲಿಗಳ ಪ್ರವಹಣ ಒಂದೇ ತರಹದ್ದಾಗಿಲ್ಲ. ಮೂಲದಿಂದ ಸುಮಾರು ೫೦೦ ಮೈಲಿಗಳವರೆಗೆ ಅರ್ಥಾತ್ ಫುಂಟ್ಸೋಗ್ಲಿಂಗ್ ಎಂಬ ಊರಿನವರೆಗೆ ನದಿಯ ಎರಡು ಬದಿಗಳಲ್ಲಿ ನಮಗೆ ಕಾಣಿಸುವುದು ಮಂಜುಗಡ್ಡೆಗಳಿಂದ ತುಂಬಿರುವ ಕಣಿವೆ ಕಂದರಗಳು ಮಾತ್ರ. ಬೇಸಿಗೆ ಕಾಲದಲ್ಲಿ ನದಿಯ ನೀರು ದ್ರವರೂಪದಲ್ಲಿ ಇರುತ್ತದೆ. ಛಳಿಗಾಲದಲ್ಲಿ ಎಲ್ಲ ಮಂಜುಮಯವಾಗಿದ್ದು ನದಿಯ ನೀರು ಮಂಜುಗಡ್ಡೆಗಳ ತಳದಲ್ಲಿಯೇ ಪ್ರವಹಿಸುತ್ತದೆ. ಇಲ್ಲಿ ಕೃಷಿಯೋಗ್ಯವಾದ ಭೂಮಿ ತೀರ ವಿರಳ. ಇದೇ ಕಾರಣದಿಂದ ಜನವಸತಿ ತುಂಬ ಕಡಿಮೆ. ನೂರಾರು ಮೈಲಿ ನಡೆದರೂ ಒಬ್ಬನಾದರೂ ಮನುಷ್ಯ ಕಾಣಿಸದೆ ಇರಬಹುದು. ಹಳ್ಳಿ ಕೊಂಪೆಗಳು ಕೂಡ ಕಾಣಿಸುವುದಿಲ್ಲ. ಆದರೆ ಏಪ್ರಿಲ್‌ನಿಂದ ಜುಲೈ ತಿಂಗಳ ಅವಧಿಯಲ್ಲಿ, ಕೈಲಾಸ ಮಾನಸಸರೋವರಗಳ ದರ್ಶನಕ್ಕೆ ಬರುವ ಭಕ್ತಾದಿಗಳಿಗಾಗಿ ನಿರ್ಮಿತವಾಗುವ ತಾತ್ಕಾಲಿಕ ಡೇರಗಳೂ, ಶಿಬಿರಗಳೂ ಅಲ್ಲಲ್ಲಿ ಕಾಣಬರುತ್ತವೆ. ಈ ಯಾತ್ರಿಕರಿಗಾಗಿಯೇ ಹಳ್ಳ ತಿಟ್ಟುಗಳಿಂದ ಕೂಡಿದ, ಏರು ಪೇರಿನ ಒಂದು ''ರಸ್ತೆ'' ಯೂ ಇದೆ. ಈ ದಾರಿಯಲ್ಲಿ ಕೇವಲ ಜೀಪ್ ಅಥವಾ ಟ್ರಾಕ್ಟರ್ ಅಥವಾ ಟ್ರಕ್‌ಗಳು ಹೋಗಬಲ್ಲವು. ಈ ದಾರಿಯೂ ನದಿಯ ಎಡದಂಡೆಯಲ್ಲಿ ಹತ್ತಾರು ಮೈಲಿಗಳ ದೂರದಲ್ಲಿದೆ. ಈ ೫೦೦ ಮೈಲಿಯ ಸೀಮೆಯಲ್ಲಿ ಒಂದಾದರೂ ಸೇತುವೆ ನಿರ್ಮಿತವಾಗಿಲ್ಲ. ಛಳಿಗಾಲದಲ್ಲಿ ಮಂಜುಗಡ್ಡೆಯ ಮೇಲೆಯೇ ನದಿಯನ್ನು ದಾಟಬಹುದು. ಬೇಸಗೆಯಲ್ಲಿ ಸಣ್ಣಪುಟ್ಟ ದೋಣಿಗಳು ಅಥವಾ ಮರದ ದಿಮ್ಮಿಗಳು ಕೆಲಸಕ್ಕೆ ಬರುತ್ತವೆ.

ಮೈಲಿ ೫೦೦ರಿಂದ ೭೫೦ರವರೆಗೆ (ಫುಂಟ್ಸೋಗ್ಲಿಂಗ್‌ನಿಂದ ಜೆಬಾಂಗ್‌ವರೆಗೆ) – ಈ ಸೀಮೆಯಲ್ಲಿ ನದಿಯ ಹೆಸರು ಯಾರ್‌ಲುಂಗ್ ಜಾಂಗ್‌ಬೊ. ಟಿಬೆಟ್ ದೇಶದ ಜನಸಂಖ್ಯೆ ಸುಮಾರು ೬೦ ಲಕ್ಷ; ಇದರಲ್ಲಿ ಶೇಕಡ ೭೦ರಷ್ಟು ಜನ ಎಂದರೆ ಸುಮಾರು ೨೫ ಲಕ್ಷ ಜನ ಈ ಪ್ರಾಂತದಲ್ಲಿ ನೆಲೆಸಿದ್ದಾರೆ. ಹಿಂದೆ, ೧೯೬೦ ಕ್ಕೆ ಮೊದಲು ಈ ಕ್ಷೇತ್ರದಲ್ಲಿ ಹಲವಾರು ವಿಹಾರಗಳೂ, ಬೌದ್ಧ ಭಿಕ್ಷುಗಳ ಆಶ್ರಮಗಳೂ ಇದ್ದವು. ಇವುಗಳಲ್ಲಿ ಮುಖ್ಯವಾದುವು ಡ್ರೇಪುಂಗ್, ಸಿರಾ, ಗ್ಯಾಂಡೆನ್, ಸಾಮ್ಯೆ, ಚಾಂಗ್‌ಜುಸಿ, ಮಿಂಡ್ರೋಲಿನ್ ಇತ್ಯಾದಿ. ಗ್ಯಾಂಡೆನ್ ಬೌದ್ಧ ವಿಹಾರವೊಂದರಲ್ಲೇ ಸುಮಾರು ೩.೩೦೦ ಜನ ಬೌದ್ಧ ಭಿಕ್ಷುಗಳು ವಾಸಿಸುತ್ತಿದ್ದರು. ಆದರೆ ೧೯೬೦ ರಲ್ಲಿ ಚೀನೀಯರು ಟಿಬೆಟ್ಟನ್ನು ಆಕ್ರಮಿಸಿಕೊಂಡು ಈ ವಿಹಾರಗಳನ್ನೆಲ್ಲ ಧ್ವಂಸಮಾಡಿದರು. ಈಗ ಅಲ್ಲಿ ವಾಸಿಸುತ್ತಿರುವುದು ಕೇವಲ ೩೫೦ ಮಂದಿ ಭಿಕ್ಷುಗಳು ಮಾತ್ರ. ಈ ಪ್ರದೇಶದಲ್ಲಿ ಜಾಂಗ್‌ಬೊ ನದಿಯ ಮಟ್ಟ ಸಮುದ್ರಮಟ್ಟದಿಂದ ೧೦,೦೦೦ – ೧೨,೦೦೦ ಅಡಿಗಳಷ್ಟು ಎತ್ತರದಲ್ಲಿದೆ. ಬೇಸಗೆ ಕಾಲದಲ್ಲಿ ಸಾಗುವಳಿ ಮಾಡಲು ಅಲ್ಪ ಸ್ವಲ್ಪ ಭೂಮಿ ಉಪಲಬ್ಧವಾಗುತ್ತೆ. ಟಿಬೆಟ್‌ನ ಹಳೇ ರಾಜಧಾನಿ ಲ್ಹಾಸಾ ಇರುವುದು ಈ ಪ್ರಾಂತದಲ್ಲೇ.

ಮೈಲಿ ೭೫೦ ರಿಂದ ೧೦೦೦ ದವರೆಗೆ (ಜೆಬಾಂಗ್ ಊರಿನಿಂದ ಭಾರತದ ಗಡಿಯೊಳಗಿರುವ ಬಿಶಿಂಗ್ ಪಟ್ಟಣದವರೆಗೆ) ನದಿಯು ತೀವ್ರಗತಿಯಲ್ಲಿ ಕೆಳಗಿಳಿದು ಬರುತ್ತೆ. ೭೫೦ ನೇ ಮೈಲಿಯಲ್ಲಿ ನದೀ ಪಾತ್ರವು ಸಮುದ್ರಮಟ್ಟದಿಂದ ೧೦,೦೦೦ ಅಡಿ ಇದ್ದು, ೧೦೦೦ನೇ ಮೈಲಿಯಲ್ಲಿ ೩,೦೦೦ ಅಡಿಗಳಿಗೆ ಇಳಿಯುತ್ತದೆ. ನದಿಯ ೮೫೦ ನೇ ಮೈಲಿಯಲ್ಲಿ ಪೀ ಎಂಬ ಒಂದು ಪಟ್ಟಣ ಇದೆ. ಇದರ ಬಳಿ ನದಿಯು ೧೦,೦೦೦ ಅಡಿ ಆಳದ ಪ್ರಪಾತದಲ್ಲಿ ಹರಿಯುತ್ತ, ಕೇವಲ ೧೫೦ ಮೈಲಿಗಳ ಪ್ರವಹಣದಲ್ಲಿ ೭೦೦೦ ಅಡಿಗಳಷ್ಟು ಕೆಳಗಿಳಿಯುತ್ತೆ. ಈಗಿನ ಚೀನ ಸರಕಾರವು ಇಲ್ಲಿ ಒಂದು ಬೃಹತ್ ಜಲ ವಿದ್ಯುತ್ ಶಕ್ತಿ ಉತ್ಪಾದನಾ ಯೋಜನೆಯನ್ನು ಹಮ್ಮಿಕೊಂಡಿದೆ. ಯೋಜನೆ ಪೂರ್ಣವಾದರೆ ಅದು ಪ್ರಪಂಚದಲ್ಲೇ ಅತಿ ದೊಡ್ಡ ಜಲ ವಿದ್ಯುತ್ ಉತ್ಪಾದನಾ ಕೇಂದ್ರವಾಗುತ್ತೆ. ಪೀ ಪಟ್ಟಣದ ಜನರ ಮುಖ್ಯ ಉದ್ದಿಮೆ ಮರಮಟ್ಟುಗಳ ವ್ಯಾಪಾರ. ಈ ಕ್ಷೇತ್ರದಲ್ಲಿ ದಟ್ಟವಾದ ಅರಣ್ಯವಿರುವುದರಿಂದ ಈ ಉದ್ದಿಮೆ ಬೆಳೆದುಬಂದಿದೆ.

ಇಲ್ಲಿ ವಾಸವಾಗಿರುವ ಜನರಲ್ಲಿ ಬಹುತೇಕ ಮಂದಿ ಭೂತಾನ್‌ನಿಂದ ಬಂದು ನೆಲೆಸಿರುವ ಬೌದ್ಧ ಧರ್ಮೀಯರು. ಉಳಿದವರು ಆದಿವಾಸಿಗಳು. ಇಲ್ಲಿ ನದಿಗೆ ಬ್ರಹ್ಮಪುತ್ರ ಎಂಬ ಹೆಸರಿನ ಜೊತೆಗೆ ಸಿಯಾಂಗ್ ಎಂಬ ಹೆಸರೂ ಇದೆ. ಮಳೆಗಾಲದಲ್ಲಿ ಭತ್ತ ಬೆಳೆದು ಅದರ ಕಟಾವು ಆದ ಮೇಲೆ ಇಲ್ಲಿಯ ಜನ ಅರಣ್ಯದಲ್ಲಿ ಬೇಟೆಯಾಡಲು ತೆರಳುತ್ತಾರೆ. ಪ್ರಾಣಿವಧೆ ಆದಿವಾಸಿಗಳಿಗೆ ನಿತ್ಯಧರ್ಮ. ಆದರೆ ನದಿಯನ್ನು ದೇವರು ಎಂದು ಭಾವಿಸಿ ಪೂಜಿಸುವ ಜನ.

ಮೈಲಿ ೧೧೦೦ ರಿಂದ ೧೪೮೦ ರವರೆಗೆ (ಸಾದಿಯದಿಂದ ಬಾಂಗ್ಲಾದೇಶದ ಗಡಿಯವರೆಗೆ) – ಈ ೩೮೦ ಮೈಲಿ ಉದ್ದದಲ್ಲಿ, ನದಿಯು ಬ್ರಹ್ಮಪುತ್ರ ಎಂಬ ಒಂದೇ ಹೆಸರಿನಿಂದ ಹರಿಯುತ್ತದೆ. ನದಿಯ ಎರಡೂ ದಡಗಳಲ್ಲಿ ಸಮತಲ ಭೂಮಿ ಇರುವುದರಿಂದ ಇಲ್ಲಿಯ ಜನರಿಗೆ ಕೃಷಿಯೇ ಪ್ರಾಧಾನ್ಯವಾಗಿದೆ. ಇದೇ ಕಾರಣದಿಂದ ಮಳೆಗಾಲದಲ್ಲಿ ನದಿಯ ಪ್ರವಾಹದ ನೀರು ದಂಡೆಗಳಿಂದ ಹೊರಬಂದು ಮೈಲುಮೈಲುಗಳಷ್ಟು ದೂರ ಹರಡುತ್ತದೆ. ಅಸ್ಸಾಂ ಸರಕಾರದ ಸಂರಕ್ಷಿತ ಅರಣ್ಯ ಕಾಜಿರಂಗ ಇರುವುದು ಬ್ರಹ್ಮಪುತ್ರದ ಎಡ ದಂಡೆಯ ಹತ್ತಿರ. ಇನ್ನೂ ಮುಂದೆ ಹೋದರೆ, ಅಸ್ಸಾಮಿನ ರಾಜಧಾನಿ ಗುವಾಹಟಿ. ಇಲ್ಲಿಂದ ಮುಂದೆ ಸುಮಾರು ೧೫೦ ಮೈಲಿ ಹೋದರೆ ಬಾಂಗ್ಲಾ ದೇಶದ ಗಡಿ.

ಮಳೆಗಾಲದಲ್ಲಿ ಪ್ರವಾಹ ಬಂದು ಉಕ್ಕಿ ಹರಿದಾಗ, ಬ್ರಹ್ಮಪುತ್ರದ ಅಗಲ ೬ ಮೈಲಿಗಳಿಗಿಂತ ಅಧಿಕವಿರುವುದು ಸಾಮಾನ್ಯ. ಈ ಹರವಿನಿಂದ ಅಪಾರ ಕಷ್ಟ ನಷ್ಟಗಳಿಗೆ ಒಳಗಾಗುವ ಜನ ನದಿಯನ್ನು ಪೂಜಿಸುವ ಸಂಪ್ರದಾಯವಿದೆ.

ರಾಜಧಾನಿ ಗುವಾಹಟಿಯಲ್ಲಿ ನದೀತೀರದಲ್ಲಿ ಎರಡು ಮಂದಿರಗಳಿವೆ. ಮೊದಲನೆಯದು ಕಾಮಾಕ್ಷ್ಯ ದೇವಸ್ಥಾನ. ಇಲ್ಲಿ ಶಕ್ತಿಯ ಪೂಜೆ. ಎರಡನೆಯದು ಶಿವಮಂದಿರ. ಅಸ್ಸಾಮಿನಲ್ಲಿ ನದಿಯನ್ನು ದಾಟಲು ಇರುವುದು ಎರಡೇ ಸೇತುವೆಗಳು. ಒಂದು ತೇಜ್‌ಪುರ್ ಊರಿನ ಹತ್ತಿರ. ಎರಡನೆಯದು ರಾಜಧಾನಿ ಗುವಾಹಟಿಯಲ್ಲಿ.

ಮೈಲಿ ೧೪೮೦ರಿಂದ ೧೮೦೦ ರವರೆಗೆ (ಬಾಂಗ್ಲಾ ಗಡಿಯಿಂದ ಸಮುದ್ರದವರೆಗೆ) ಬಾಂಗ್ಲಾದೇಶವನ್ನು ಪ್ರವೇಶಿಸಿದ ತಕ್ಷಣ ಬ್ರಹ್ಮಪುತ್ರವು ತನ್ನ ಹೆಸರನ್ನು ಬದಲಿಸಿಕೊಂಡು, ಲಿಂಗ ಪರಿವರ್ತನೆ ಹೊಂದಿ, ಜಮುನ ಎಂಬ ಹೆಸರಿನಿಂದ ಹರಿಯುತ್ತಾಳೆ. ಈ ಹೆಸರಿನಿಂದಲೇ ಗಂಗೆಯೊಡನೆ ಮಿಲನ. ಮಿಲನದ ನಂತರ ಪದ್ಮ ಎಂಬ ಹೊಸ ಹೆಸರಾಂತು ಮುಂದೆ ಹರಿಯುತ್ತದೆ. ಸುಮಾರು ೧೦೦ ಮೈಲಿ ಪ್ರವಹಿಸಿದ ನಂತರ ಮತ್ತೊಮ್ಮೆ ಮೇಘನ ಎಂಬ ಸಣ್ಣ ನದಿಯೊಡನೆ ಸೇರಿ, ತನ್ನ ಹೆಸರನ್ನೂ ಮೇಘನ ಎಂದೇ ಬದಲಿಸಿಕೊಂಡು ಮುಂದೆ ಹರಿದು ಬಂಗಾಳ ಕೊಲ್ಲಿಯನ್ನು ಸಮೀಪಿಸುತ್ತಿದ್ದಂತೆ ಒಡೆದು ಛಿದ್ರಛಿದ್ರವಾಗಿ ಸಮುದ್ರದಲ್ಲಿ ಐಕ್ಯಳಾಗುತ್ತಾಳೆ.

ಬಿ. ವಿ. ಸುಬ್ಬರಾವ್
೨೨೦೩/ಎಫ್, 'ಶ್ರೀನಿಧಿ' ೨೩ನೇ ಕ್ರಾಸ್ ರೋಡ್, ೬ನೇ ಮುಖ್ಯ ರಸ್ತೆ ಹತ್ತಿರ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಹೊಸ ಆರ್ಥಿಕ ಸಮಾನತೆಯ ಸಮಾಜಕ್ಕಾಗಿ ಸಂಕಲ್ಪ

ತಿಳಿವು

ನಮ್ಮ ಸಮಾಜದಲ್ಲಿ ಪ್ರತಿ ಪ್ರಜೆಯನ್ನೂ ಸಮಾನ ದೃಷ್ಟಿಯಿಂದ ನೋಡಬೇಕಲ್ಲವೆ ? ಒಂದು ಗ್ರಾಮದಿಂದ ಹಿಡಿದು ಇಡೀ ದೇಶದ ಆರ್ಥಿಕ ವ್ಯವಸ್ಥೆಯನ್ನು ಅವಲೋಕಿಸಿದಾಗ ನಮ್ಮಲ್ಲಿ ಇವ ಶ್ರೀಮಂತ, ಇವ ಮಧ್ಯಮ, ಇವ ಬಡವ ಎಂಬ ಭೇದ ಸ್ಪಷ್ಟವಾಗಿ ಕಾಣುತ್ತದೆ. ಹಣವಿರುವವರು ಸಮಾಜದಲ್ಲಿ ಹೆಚ್ಚಿನ ಅನುಕೂಲತೆ ಹಾಗೂ ಸೌಲಭ್ಯಗಳನ್ನು ಪಡೆಯುತ್ತಾರೆ. ಮೇಲಾಗಿ ಸಮಾಜದ ಮೇಲೆ ಒಂದು ರೀತಿಯ ಹಿಡಿತವನ್ನು ಸಾಧಿಸುತ್ತಾರೆ.

ಈಗಿನ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕಡಿಮೆ ಬಂಡವಾಳ ಹೊಂದಿರುವ ಉದ್ಯಮಗಳು ಉನ್ನತ ಸ್ಥಾನಕ್ಕೇರುವ ಅವಕಾಶಗಳಿಗಿಂತ ಹಾನಿಗೊಳಗಾಗುವ ಸಂಭವಗಳೇ ಹೆಚ್ಚು. ಹಾಗೆಯೇ ಹೆಚ್ಚು ಬಂಡವಾಳ ಹೊಂದಿರುವ ಉದ್ದಿಮೆಗಳು ಹಾನಿಗೊಳಗಾಗುವ ಸಂಭವ ಕಡಿಮೆ. ದೊಡ್ಡ ದೊಡ್ಡ ಉದ್ದಿಮೆಗಳು ಸರ್ಕಾರಗಳ ಅಪಾರ ನೆರವನ್ನೂ ಪಡೆಯುತ್ತವೆ. ಒಬ್ಬ ಶ್ರೀಮಂತ ತನಗಿಂತಲೂ ಆರ್ಥಿಕವಾಗಿ ದುರ್ಬಲ ರಾಗಿರುವವರ ನಡುವೆ ಹೆಚ್ಚು ಆತ್ಮವಿಶ್ವಾಸದಿಂದ ಬೀಗಬಲ್ಲ, ಇದಕ್ಕೆ ಆತನಿಗಿರುವ ಆರ್ಥಿಕ ಸಬಲತೆ ಕಾರಣ. ಆದರೆ ಒಬ್ಬ ಬಡವ ಶ್ರೀಮಂತರೊಂದಿಗೆ ಬೆರೆಯದೇ ಹಿಂಜರಿಯುವಂತಾಗಲು ಅನೇಕ ರಾಜಕೀಯ, ಸಾಮಾಜಿಕ ಹಾಗೂ ಶೈಕ್ಷಣಿಕ ಕಾರಣ ಗಳಿವೆ. ಉದಾಹರಣೆಗೆ, ಶಿಕ್ಷಣವು ವ್ಯಾಪಾರೀಕರಣ ವಾಗಿರುವುದು. ಶಿಕ್ಷಣ ವ್ಯವಸ್ಥೆಯಲ್ಲಿರುವ ಡೊನೇಶನ್ ಸೀಟುಗಳೆಂದರೆ ಹಣವಂತರಿಗೆ ಮೀಸಲಿರುವ ಸೀಟುಗಳಲ್ಲವೇ ಶ್ರೀಮಂತನ ಮಗ ಶಿಕ್ಷಣವು ಎಷ್ಟೇ ದುಬಾರಿಯಾದರೂ ಅದನ್ನು ಪಡೆಯುತ್ತಾನೆ. ಆದರೆ ಅದೇ ಒಬ್ಬ ಬಡವನ ಮಗ ಅರ್ಹನಿದ್ದರೂ ಆರ್ಥಿಕ ದುರ್ಬಲತೆಯಿಂದ ಶಿಕ್ಷಣದಿಂದ ವಂಚಿತನಾಗುತ್ತಾನೆ.

ಅನೇಕ ಮಾನಸಿಕ, ಕೌಟುಂಬಿಕ ಹಾಗೂ ಇನ್ನಿತರ ಸಮಸ್ಯೆಗಳಿಗೆ ಮೂಲತಃ ಹಣವು ಒಂದು ಪ್ರಮುಖ ಕಾರಣವಾಗಿರುತ್ತದೆ. ಹೀಗಿರುವುದರಿಂದ ಆರ್ಥಿಕವಾಗಿ ದುರ್ಬಲನಾಗಿ ಹುಟ್ಟುವುದು ಆ ವ್ಯಕ್ತಿಯಲ್ಲಿ ಹಿಂಜರಿಕೆ ಹಾಗೂ ಕೀಳರಿಮೆ ಪ್ರಜ್ಞೆಯನ್ನು ಉಂಟುಮಾಡುತ್ತದೆ. ಒಬ್ಬ ಅತೀ ಸಾಮಾನ್ಯ ವ್ಯಕ್ತಿ ಆರ್ಥಿಕವಾಗಿ, ಸಾಮಾಜಿಕವಾಗಿ ಮೇಲ್ವರ್ಗಕ್ಕೇರುವುದು ಕಠಿಣ. ಕೆಲವೊಮ್ಮೆ ಅಸಾಧ್ಯವೂ ಆಗಿರುತ್ತದೆ. ಮೇಲ್ನೋಟಕ್ಕೆ ದುಡಿಯುವವರು ಶ್ರೀಮಂತರಾಗುತ್ತಾರೆ, ದುಡಿಯದವರು ಬಡವರಾಗುತ್ತಾರೆ ಎಂದೆನಿಸಿದರೂ ಈಗಿರುವ ಅಸಮಾನತೆಗೆ ಇದು ಸ್ವಲ್ಪಮಟ್ಟಿಗೆ ಕಾರಣವಷ್ಟೆ. ವ್ಯಕ್ತಿಯೊಬ್ಬ ಶ್ರೀಮಂತನಾಗಿರುವುದಕ್ಕೆ ಅವನು

ಶಿವಕುಮಾರ ಪಿ. ಎಸ್.

ವಂಶಪಾರಂಪರ್ಯವಾಗಿ ಬರುವ ಆಸ್ತಿಗೆ ಒಡೆಯ ನಾಗುವುದೂ ಒಂದು ಪ್ರಮುಖ ಕಾರಣವಾಗಿದೆ. ಸಮಾಜದಲ್ಲಿ ವಿವಿಧ ವರ್ಗಗಳು ಸೃಷ್ಟಿಯಾಗಿ ಅವುಗಳ ಮೂಲಕ ಕೆಳವರ್ಗಗಳು ಶೋಷಣೆಗೆ ಒಳಗಾಗುತ್ತವೆ. ಈ ದುರವಸ್ಥೆಗೆ ಅನುವಂಶೀಯವಾಗಿ ಬರುವ ಅಧಿಕಾರ, ಜಾತಿ ಹಾಗೂ ಸಂಪತ್ತುಗಳು ಪ್ರಮುಖ ಕಾರಣಗಳಾಗಿವೆ.

ಒಂದು ಕಾಲದಲ್ಲಿ ರಾಜರು ರಾಜ್ಯವನ್ನು ಆಳುವ ಅಧಿಕಾರವನ್ನು ವಂಶಪಾರಂಪರ್ಯವಾಗಿ ಪಡೆಯುತ್ತಿದ್ದರು. ಸಾಮಾನ್ಯಜನ ಆಳಿಸಿಕೊಳ್ಳುವುದು ತಮ್ಮ ಹಣೆಬರಹ, ಆಳುವುದು ರಾಜವಂಶದ ಕರ್ತವ್ಯ ಎಂದುಕೊಳ್ಳ ಬೇಕಾಗಿತ್ತು. ಆದರೆ ಈಗ ಪ್ರಜಾಪ್ರಭುತ್ವ ಬಂದಿರುವುದರಿಂದ ಈ ಹಿಂದೆ ಇದ್ದ ಭಾವನೆ ಈಗಿಲ್ಲ. ಅದೇ ರೀತಿ ಜಾತಿಯೂ ವಂಶಪಾರಂಪರ್ಯವಾಗಿ ಬಂದು ಜಾತಿವೈಷಮ್ಯವನ್ನು ಬೆಳೆಸಿ ಬಹುಪಾಲು ಜನರು ಶೋಷಣೆಗೆ ಒಳಗಾಗಬೇಕಾಯಿತು. ಅನೇಕ ಮಹಾನುಭಾವರ ಪ್ರಯತ್ನಗಳಿಂದ ಇಂದು ಶೋಷಿತರು ಜಾಗೃತರಾಗುತ್ತಿದ್ದಾರೆ. ಅದೇ ರೀತಿ ಬಡತನ ಸಿರಿವಂತಿಕೆಗಳು ಅನುವಂಶೀಯವಾಗಬಾರದು.

ಮಾನವ ಸಮಾಜ ಜೀವಿ. ಇಲ್ಲಿ ಏನೇ ಗಳಿಸಿದರೂ ಅದು ಸಮಾಜದಿಂದ ಅಥವಾ ನಿಸರ್ಗದಿಂದ ಬಂದುದೇ ಆಗಿರುತ್ತದೆ. ಪ್ರತಿಯೊಬ್ಬನಿಗೂ ತನ್ನ ಜೀವಮಾನದಲ್ಲಿ ಸಂಪತ್ತು ಗಳಿಸಿ ಅನುಭವಿಸಲು ಸಮಾನ ಅವಕಾಶಗಳಿದ್ದರೆ ಮಾತ್ರ ಶೋಷಣೆಯನ್ನು ತಪ್ಪಿಸಬಹುದು. ಇಲ್ಲಿ 'ಉಳ್ಳವರ ಮಗು', 'ಇಲ್ಲದವರ ಮಗು' ಎಂಬ ಭೇದ ಇರಕೂಡದು. ಈ ಸಮಾನತೆ ಬರಬೇಕಾದರೆ ಮಕ್ಕಳೆಲ್ಲರೂ ಒಂದೇ, ಅವರು ಒಂದೇ ಸಮಾಜದ ಮಕ್ಕಳು ಎಂಬ ಕಲ್ಪನೆ ಮೂಡಬೇಕು. ಪ್ರತಿಯೊಬ್ಬನಿಗೂ ವಿದ್ಯೆ, ಬುದ್ಧಿ, ದುಡಿಮೆಗಳಿಂದ ದುಡ್ಡು ಸಂಪಾದಿಸುವ ಅವಕಾಶವಿರ ಬೇಕು. ಆದರೆ ಶ್ರೀಮಂತನ ಮಗು ಹುಟ್ಟುವಾಗಲೇ ತಂದೆಯ ಆಸ್ತಿಗೆ ವಾರಸುದಾರನಾಗಿರುವುದರಿಂದ ದುಡಿಮೆ, ವಿದ್ಯೆ, ಬುದ್ಧಿ ಇವುಗಳ ಸಾಧನೆಯ ಹಿರಿಮೆ ಗರಿಮೆಗಳಿಲ್ಲದೇ ಹುಟ್ಟುಶ್ರೀಮಂತನಾಗಿರುತ್ತಾನೆ. ಆದರೆ ಬಡವನ ಮಗ ಹುಟ್ಟಾ ಬಡವ. ಹೀಗೇಕೆ ? ಅವನು ಹುಟ್ಟಿದ್ದೇ ತಪ್ಪೇ ? ಹುಟ್ಟಿನ ವಿಷಯ ಮಾತ್ರದಿಂದಲೇ ಒಬ್ಬನಿಗೆ ಸಂಪತ್ತು ಸೌಲಭ್ಯಗಳನ್ನು, ಮತ್ತೊಬ್ಬನಿಗೆ ಬಡತನವನ್ನು ಕೊಡುವುದು ಈ ವ್ಯವಸ್ಥೆಯಲ್ಲಿರುವ ನಿಂದನೀಯವಾದ ಒಂದು ದೊಡ್ಡ ಅನ್ಯಾಯವಲ್ಲವೆ ? ಈಗ ಆರ್ಥಿಕ ಸಮಾನತೆಯನ್ನು ಸಾಧಿಸುವುದು ಅತಿ ಅವಶ್ಯಕವಾಗಿದೆ. ಶಿವಶರಣರೂ ಕೂಡ ಇದೇ ಸಮಾನತೆಯನ್ನು ತಮ್ಮ ಕಾಯಕ ಚಳುವಳಿಯಲ್ಲಿ ತೋರಿಸಿಕೊಟ್ಟಿರುತ್ತಾರೆ.

ಇಂದು ಭಾರತದಲ್ಲಿ ಬಂಡವಾಳಶಾಹಿ ವ್ಯವಸ್ಥೆ ಗಟ್ಟಿಯಾಗಿ ಬೇರೂರಿದೆ, ಕೈಗಾರಿಕೀಕರಣ ಎಂಬುದು ಬೀಜ ಮಂತ್ರವಾಗಿದೆ. ಶ್ರೀಮಂತ, ಮಧ್ಯಮ ಹಾಗೂ ಬಡ ಎಂಬ ವರ್ಗಗಳ ಬಿರುಕೂ ದೊಡ್ಡದಾಗುತ್ತಿದೆ. ಈ ಬೃಹತ್ ಸಮಸ್ಯೆಯನ್ನು ಹೋಗಲಾಡಿಸಲು ಕೆಲವು ಕಾರ್ಯಗಳ ಅವಶ್ಯಕತೆ ಇದೆ. ವಂಶಪಾರಂಪರ್ಯವಾಗಿ ಅಥವಾ ಅನುವಂಶಿಕವಾಗಿ ಬರುವ ಆಸ್ತಿಗೆ ಸಂಪತ್ತಿಗೆ ವಾರಸುದಾರಿಕೆಯನ್ನು ನಿರ್ಧರಿಸುವಾಗ ಕೆಲವು ನಿಬಂಧನೆಗಳನ್ನು ವಿಧಿಸುವುದು ಅನಿವಾರ್ಯ. ಈ ವಾರಸುದಾರಿಕೆಯ ಆಸ್ತಿಗೆ ಒಂದು ಗರಿಷ್ಠ ಮಿತಿಯನ್ನು ಹೇರಬೇಕು. ಈ ಗರಿಷ್ಠ ಮಿತಿಯು ಮನುಷ್ಯನ ಅತೀ ಜೀವನಾವಶ್ಯಕ ಸಂಪತ್ತಿಗಿಂತ ಹೆಚ್ಚಾಗಿರಬಾರದು. ಈ ಗರಿಷ್ಠ ಮಿತಿಯನ್ನು ನಿರ್ಧರಿಸುವಾಗ ಬಡವರ ಹಾಗೂ ಮಧ್ಯಮ ವರ್ಗದವರ ಜೀವನಾವಶ್ಯಕತೆಗಳು ಹಾಗೂ ಅದರ ಆದಾಯ, ಇವುಗಳ ಆಧಾರದ ಮೇಲೆ ನಿರ್ಣಯಿಸಬೇಕು.

'ಬಸವಣ್ಣನವರ ವಚನ ಸಂಪುಟ'ದ ಪ್ರಸ್ತಾವನೆಯಲ್ಲಿ ಎಂ. ಎಂ. ಕಲಬುರ್ಗಿಯವರು ಹೀಗೆ ಹೇಳುತ್ತಾರೆ: ಸಮಾಜ ಶುದ್ಧವಾಗುವದೆಂದರೆ ಸಮಾನತೆಯನ್ನು ತರುವುದು. ಈ ಸಾಮಾಜಿಕ ಸಮಾನತೆಗೆ ಮೂಲವಾದುದು 'ಆರ್ಥಿಕ ಸಮಾನತೆ' ಎಂಬುದನ್ನು ಅರಿತಿದ್ದ ಬಸವಣ್ಣ ಅರ್ಥಮಂತ್ರಿ ಆಗಿದ್ದುದು ಒಂದು ಯೋಗಾಯೋಗ. ಮುಂದುವರೆದು ಕಲಬುರ್ಗಿಯವರು ಹೀಗೆ ಹೇಳುತ್ತಾರೆ: ಬಸವಣ್ಣನ ಸಾಮಾಜಿಕ ಸಿದ್ಧಾಂತವು ಮಾರ್ಕ್ಸ್ ಹೇಳಿದಂತೆ ಧನದ ಅಂದರೆ ಅರ್ಥದ ನೆಲಗಟ್ಟಿನ ಮೇಲೆ ನಿಂತಿದ್ದಿತು. ಅರ್ಥದಲ್ಲಿ ಸಮಾನತೆಯನ್ನು ಸಾಧಿಸಿದರೆ ಸಮಾಜದಲ್ಲಿ ಸಮಾನತೆ ತಾನಾಗಿಯೇ ಸಾಧ್ಯವಾಗುವುದೆಂದು ಅವನು ಕಂಡುಕೊಂಡಿದ್ದನು ಎನಿಸುತ್ತದೆ. ಈತನ ಅರ್ಥ ತತ್ವಕ್ಕೆ ಎರಡು ಮಗ್ಗಲುಗಳುಂಟು. ಒಂದು ಕಾಯಕ (ಶ್ರಮ), ಇನ್ನೊಂದು ದಾಸೋಹ (ವಿತರಣೆ). ಕಾಯಕ ಮಾಧ್ಯಮದಿಂದ ಗಳಿಸಬೇಕು, ದಾಸೋಹ ಮಾಧ್ಯಮದಿಂದ ಬಳಸಬೇಕು ಎಂಬ ಸೂತ್ರದ ಆದರ್ಶದಲ್ಲಿ ಕಲ್ಯಾಣ ರಾಜ್ಯ ಕಟ್ಟುವುದು ಮಂತ್ರಿ ಬಸವಣ್ಣನ ಧ್ಯೇಯವಾಗಿದ್ದಿತು.

ಈಗ ನಾವು ವಿಚಾರ ಮಾಡಬೇಕಾದದ್ದೇನೆಂದರೆ ಈ ಅನುವಂಶಿಕವಾಗಿ ಬರುವ ಆಸ್ತಿ ಕಾಯಕ (ಶ್ರಮ)ದಿಂದ ಬಂದದ್ದಲ್ಲ ದಾಸೋಹ ಮಾಧ್ಯಮದಿಂದ ಸಂಪತ್ತಿನ ವಿತರಣೆಯೂ ಆಗುತ್ತಿಲ್ಲ, ಆದ್ದರಿಂದ ಕಾಯಕ ಹಾಗೂ ವಿತರಣೆಯ ತತ್ವ ಪಾಲನೆಯಾಗಬೇಕಾದರೆ ಸೂಕ್ತ ಕಾನೂನಿನ ರಚನೆ ಅವಶ್ಯ. ಒಂದು ಮನೆಯಲ್ಲಿ ಎಲ್ಲ ಮಕ್ಕಳಿಗೆ ಆಸ್ತಿಯನ್ನು ಸಮಪಾಲು ಮಾಡುತ್ತೇವೆ. ಆದರೆ ಸಾಮಾಜಿಕ ಸಮಾನತೆ ಬರಬೇಕಾದರೆ ದೇಶದ ಪ್ರತಿ ಮಗುವಿಗೂ ಸಮಪಾಲು ಸಿಗಬೇಕು. ಇಲ್ಲಿ ಕೌಟುಂಬಿಕ ಆಧಾರದ ಆಸ್ತಿ ಹಂಚಿಕೆ ಇರದೇ ಇಡೀ ದೇಶದ ಆಧಾರದ ಮೇಲೆ ಆಸ್ತಿ ಹಂಚಿಕೆ ಮಾಡಬೇಕು.

ಬಡವರಿಗೆ ಅದನ್ನು ಕೊಡುತ್ತೇವೆ, ಇದನ್ನು ಕೊಡುತ್ತೇವೆ ಎಂದು ಭರವಸೆ ನೀಡುವುದಕ್ಕಿಂತಲೂ ನಿಜವಾದ ಸಮಾನ ನೆಲಗಟ್ಟಿನಲ್ಲಿ ಇಡೀ ಸಮಾಜ ಬರುವಂತೆ ಮಾಡುವುದು ಮುಖ್ಯ. ದುರ್ಬಲ ವರ್ಗದವರಿಗೆ ನೀಡುವ ಈ ಸಹಾಯಗಳು ಒಳ್ಳೆಯವೇ ಆದರೂ ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಬೆಳೆಸಲು ಮತ್ತು ಅವನು ಸ್ವಾಭಿಮಾನದಿಂದ ಬದುಕಲು ಈ ಸಹಾಯಗಳು ಉಪಯೋಗವಾಗುವುದಿಲ್ಲ. ದಾನ, ಸಹಾಯಗಳು ಅದನ್ನು ಸ್ವೀಕರಿಸುವವನನ್ನು ಋಣಿಯನ್ನಾಗಿಸುತ್ತವಲ್ಲದೆ ಅವನನ್ನು ಇನ್ನಷ್ಟು ದಯನೀಯ ಸ್ಥಿತಿಗೆ ಕೊಂಡೊಯ್ಯುತ್ತವೆ. ಅದೇ ಕಾರಣ ಬಳಸಿ ರಾಜಕಾರಣಿಗಳು ಚುನಾವಣೆಗಳಲ್ಲಿ ಬಡವರಿಗೆ ಹಣ, ವಸ್ತ್ರಗಳನ್ನು ಹಂಚಿ ಅವರನ್ನು ಋಣಿಯನ್ನಾಗಿಸಿ ಪ್ರತಿಫಲವಾಗಿ ವೋಟು ಪಡೆಯುತ್ತಾರೆ. ಫಲಾಪೇಕ್ಷೆ ಇಲ್ಲದ ಕೆಲವು ಸತ್ಕಾರ್ಯಗಳನ್ನು ಹೊರತುಪಡಿಸಿ ಶ್ರೀಮಂತರ, ಅಷ್ಟೇ ಏಕೆ ಸರ್ಕಾರಗಳ, ಅನೇಕ ಸಹಾಯಗಳು ಮೂಲದಲ್ಲಿ ಸ್ವಾರ್ಥವನ್ನೊಳಗೊಂಡಿರುವುದರಿಂದ, ಮೇಲ್ನೋಟಕ್ಕೆ ಸರಿ ಎಂದು ಕಂಡರೂ ಸಮಾಜದ ಮೇಲೆ ದುಷ್ಪರಿಣಾಮ ಬೀರುತ್ತವೆ. ಇಂಥ ಅನೇಕ ಸ್ವಾರ್ಥಪೂರಿತ ದಾನ, ಸಹಾಯಗಳು ದುರ್ಬಲರು ತಮ್ಮ ಜನ್ಮಸಿದ್ಧ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಹಕ್ಕುಗಳನ್ನು ಕೇಳದಂತೆ ತಡೆಯುತ್ತವೆ.

ಸಮಾನತೆಗಾಗಿ ಈ ಮೊದಲೇ ಕೆಲವು ಪ್ರಯತ್ನಗಳು ನಡೆದಿವೆ. ಹಿಂದೆ, ಟೆನೆನ್ಸಿ ಕಾಯ್ದೆ ಕಾರ್ಯರೂಪಕ್ಕೆ ಬಂದು ಶ್ರೀಮಂತ ಜಮೀನ್ದಾರರಿಂದ ನಿಜವಾಗಿ ದುಡಿಯುವವರು ಭೂಮಿಯನ್ನು ಪಡೆದರು. ಹಾಗೆಯೇ 'ಭೂದಾನ ಚಳುವಳಿ'ಯ ಮೂಲಕ ವಿನೋಬಾ ಭಾವೆಯವರು ಬಡವರಿಗೆ ಭೂಮಿಯನ್ನು ಕೊಡಿಸಲು ಸಾಕಷ್ಟು ಶ್ರಮಿಸಿದರು.

ಇಂದು ಭಾರತದಲ್ಲಿ ಬಂಡವಾಳಶಾಹಿ ವ್ಯವಸ್ಥೆ ಗಟ್ಟಿಯಾಗಿ ಬೇರೂರಿದೆ, ಕೈಗಾರಿಕೀಕರಣ ಎಂಬುದು ಬೀಜ ಮಂತ್ರವಾಗಿದೆ. ಶ್ರೀಮಂತ, ಮಧ್ಯಮ ಹಾಗೂ ಬಡ ಎಂಬ ವರ್ಗಗಳ ಬಿರುಕೂ ದೊಡ್ಡದಾಗುತ್ತಿದೆ. ಈ ಬೃಹತ್ ಸಮಸ್ಯೆಯನ್ನು ಹೋಗಲಾಡಿಸಲು ಕೆಲವು ಕಾರ್ಯಗಳ ಅವಶ್ಯಕತೆ ಇದೆ. ವಂಶಪಾರಂಪರ್ಯವಾಗಿ ಅಥವಾ ಅನುವಂಶಿಕವಾಗಿ ಬರುವ ಆಸ್ತಿಗೆ ಸಂಪತ್ತಿಗೆ ವಾರಸುದಾರಿಕೆಯನ್ನು ನಿರ್ಧರಿಸುವಾಗ ಕೆಲವು ನಿಬಂಧನೆಗಳನ್ನು ವಿಧಿಸುವುದು ಅನಿವಾರ್ಯ. ಈ ವಾರಸುದಾರಿಕೆಯ ಆಸ್ತಿಗೆ ಒಂದು ಗರಿಷ್ಠ ಮಿತಿಯನ್ನು ಹೇರಬೇಕು. ಈ ಗರಿಷ್ಠ ಮಿತಿಯು ಮನುಷ್ಯನ ಅತೀ ಜೀವನಾವಶ್ಯಕ ಸಂಪತ್ತಿಗಿಂತ ಹೆಚ್ಚಾಗಿರಬಾರದು. ಈ ಗರಿಷ್ಠ ಮಿತಿಯನ್ನು ನಿರ್ಧರಿಸುವಾಗ ಬಡವರ ಹಾಗೂ ಮಧ್ಯಮ ವರ್ಗದವರ ಜೀವನಾವಶ್ಯಕತೆಗಳು ಹಾಗೂ ಅವರ ಆದಾಯ, ಇವುಗಳ ಆಧಾರದ ಮೇಲೆ ನಿರ್ಣಯಿಸಬೇಕು.

ಒಬ್ಬ ವ್ಯಕ್ತಿಯ ಮರಣಾನಂತರ ಗರಿಷ್ಠ ಮಿತಿಯಲ್ಲಿರುವಷ್ಟೇ ಆಸ್ತಿಯನ್ನು ಅವನ ಮಕ್ಕಳಿಗೆ ವರ್ಗಾಯಿಸಬಹುದು ಹಾಗೂ ಈ ವ್ಯವಸ್ಥೆಯಲ್ಲಿ ಒಬ್ಬ ವ್ಯಕ್ತಿ ಗಳಿಸಿದ ಆಸ್ತಿಯನ್ನು ಆತ ಜೀವಂತವಿದ್ದಾಗಲೂ ಕೂಡ ತನ್ನ ಮಕ್ಕಳಿಗೆ ವರ್ಗಾಯಿಸಲು ಬರಬಾರದು. ವ್ಯಕ್ತಿಯ ಮರಣಾನಂತರ ಗರಿಷ್ಠ ಮಿತಿಯನ್ನು ಮೀರಿದ ಆಸ್ತಿಯನ್ನು ರಾಷ್ಟ್ರೀಯ ಸಂಪತ್ತೆಂದು ಘೋಷಿಸಬೇಕು. ಮಿತಿಯನ್ನು ಮೀರಿದ ಆಸ್ತಿಯನ್ನು ಅವನ ಮಕ್ಕಳು ಬಯಸಿದರೆ ಅವರು ಸ್ವತಃ ದುಡಿದು ಸಂಪಾದಿಸಿಯೇ ಅದನ್ನು ಖರೀದಿಸಬೇಕು. ಹೀಗೆ ಮಾಡುವುದರಿಂದ ಈಗಿರುವ ಆರ್ಥಿಕ ವರ್ಗಗಳ ಬಿರುಕು ಕಡಿಮೆಯಾಗುತ್ತದೆ ಹಾಗೂ ಹುಟ್ಟಿನಿಂದಲೇ ಎಲ್ಲರನ್ನೂ ಸಮಾನ ದೃಷ್ಟಿಯಿಂದ ನೋಡಿದಂತಾಗುತ್ತದೆ. ಅಷ್ಟೇ ಅಲ್ಲದೆ ಯಾವುದೇ ಒಂದು ವರ್ಗದ ಅಥವಾ ಕೆಲವೇ ಮನೆತನಗಳ ಹಿಡಿತ ಸರ್ಕಾರಗಳ ಅಥವಾ ಸಮಾಜದ ಮೇಲಿರದೆ ಎಲ್ಲರೂ ಸಮಾನ ಎಂಬ ಭಾವ ಸಂಚಯವಾಗುತ್ತದೆ. ಈ ರೀತಿಯ ವ್ಯವಸ್ಥೆ ಜಾರಿಗೆ ಬಂದರೆ ಮಾತ್ರ ನಮ್ಮ ಯುವಜನತೆ ಸಾಮಾಜಿಕ ಕೀಳರಿಮೆ ಇಲ್ಲದೆ ಕಾಯಕ ಪ್ರವೃತ್ತಿಯಲ್ಲಿ ತಲ್ಲೀನರಾಗಲು ಸಹಾಯವಾಗುತ್ತದೆ ಮತ್ತು ಅವರ ಆರ್ಥಿಕ ಸಬಲತೆಯೂ ಹೆಚ್ಚಿದಂತಾಗುತ್ತದೆ. ನಕ್ಸಲ್ ವಾದದಂತಹ ಸಮಸ್ಯೆಗಳೂ ಕಡಿಮೆಯಾಗುತ್ತವೆ. ಅಲ್ಲದೆ ವ್ಯಕ್ತಿಯೊಬ್ಬನ ದುಡಿಮೆ ಸ್ವಾರ್ಥಕ್ಕಿಂತ ಹೆಚ್ಚಾಗಿ ಸಮಾಜದ ಹಿತಕ್ಕಾಗಿ ಬಳಸಲ್ಪಡುತ್ತದೆ.

ಈ ರೀತಿಯ ಕಾನೂನುಗಳು ಜಾರಿಗೆ ಬಂದರೆ ಅಪಾರ ಪ್ರಮಾಣದ ಸಂಪತ್ತು ರಾಷ್ಟ್ರದ ಖಜಾನೆಯಲ್ಲಿ ಶೇಖರಣೆಯಾಗುವುದರಿಂದ ಅದನ್ನು ಸಂಕಷ್ಟದಲ್ಲಿರುವ ಬಡ ರೈತರ ಉನ್ನತಿಗಾಗಿ ಹಾಗೂ ಪ್ರತಿ ಮಗುವಿನ ಶಿಕ್ಷಣವನ್ನು ಸಂಪೂರ್ಣವಾಗಿ ಉಚಿತವಾಗಿಸಲು ಬಳಸಬಹುದಾಗಿದೆ. ಈಗಿರುವ ಆಸ್ತಿ ವಾರಸುದಾರಿಕೆ ಕಾನೂನುಗಳು ಹಾಗೂ ವ್ಯವಸ್ಥೆ ಆರ್ಥಿಕವಾಗಿ ದುರ್ಬಲರಾಗಿರುವವರ ಮೇಲೆ ನಡೆಸುವ ದಬ್ಬಾಳಿಕೆ ನೀತಿಗಳಾಗಿವೆ. ಹೀಗಾಗಿ ಇದಕ್ಕೆ ಸಂಬಂಧಿಸಿದಂತೆ ಕಾನೂನು ರಚನೆ ಅಷ್ಟೇ ಅಲ್ಲ, ಅವುಗಳ ನಿರ್ವಹಣೆ ಹಾಗೂ ಪಾಲನೆ ಕೂಡ ಮುಖ್ಯ.

ಇದಲ್ಲದೆ ಈಗ ದೇಶವಿದೇಶಗಳಲ್ಲಿರುವ ಕಪ್ಪು ಹಣವನ್ನು ರಾಷ್ಟ್ರೀಯ ಸಂಪತ್ತೆಂದು ಘೋಷಿಸಿ ಅದನ್ನು ದೇಶದ ಖಜಾನೆಗೆ ತೆಗೆದುಕೊಳ್ಳುವುದು ಅತಿ ಮುಖ್ಯವಾಗಿದೆ. ಈ ನಿಟ್ಟಿನಲ್ಲಿ ಶ್ರೀ ರಾಜೀವ ದೀಕ್ಷಿತರು ದೇಶಾದ್ಯಂತ ಅಭಿಯಾನವನ್ನು ಮಾಡುತ್ತಿದ್ದಾರೆ. ಹಾಗೆಯೇ ನಿಸರ್ಗದ ಆಸ್ತಿಯಾದ ಖನಿಜ ಸಂಪತ್ತನ್ನು ಬೇಕಾಬಿಟ್ಟಿಯಾಗಿ ಮಾರಿ ಅಪಾರ ಹಣ ಶೇಖರಿಸುವುದಲ್ಲದೆ ರಾಜಕೀಯ ಅಟ್ಟಹಾಸಕ್ಕೆ ಕಾರಣವಾದ ಗಣಿ ಉದ್ಯಮವನ್ನು ರಾಷ್ಟ್ರೀಕರಣಗೊಳಿಸಬೇಕಾಗಿದೆ.

ಈಗಿರುವ ವ್ಯವಸ್ಥೆಯಲ್ಲಿ ಬದಲಾವಣೆಯಾಗಬೇಕಾದರೆ ಜನರು ಈ ಬಗ್ಗೆ ಜಾಗೃತರಾಗಿ ಸಂಘಟಿತರಾಗಬೇಕಿದೆ.

**ಶಿವಕುಮಾರ ಪಿ. ಎಸ್.**
c/o ಎಸ್. ಆರ್. ಪ್ರಭುದೇವ, ಪ್ಲಾಟ್ ನಂ. ೧೩೩೮,
''ಡಿಂಡಿಮ''. ಚಂಪಾಬಾಯಿ ಭೌಗೋಲೆ ಮಾರ್ಗ,
ರಾಮತೀರ್ಥನಗರ, ಬೆಳಗಾವಿ.

## ನಿಜ ಸಂಗತಿ

ನೀನು ಮುರಿದದ್ದು ನನ್ನ

ಎಲುಬನಲ್ಲ

ಮನಸನ್ನ

ನೀನು ಹರಿದದ್ದು ನನ್ನ

ತೊಗಲನಲ್ಲ

ಕನಸನ್ನ

ಸುದ್ದಿ ಹೇಗಾಗುತ್ತೆ???

**ವಿ.ಹರಿನಾಥ ಬಾಬು**
ಸದಾಶಿವ ನಗರ, ಸಿರುಗುಪ್ಪ - ೫೮೩೧೨೧





# ದೇವೇಂದ್ರ ಬಡಿಗೇರ್ ಅವರ ಕಲಾಕೃತಿಗಳಲ್ಲಿ ವರ್ಣವೈಭವ

ಧಾರವಾಡದ ಹಿರಿಯ ಚಿತ್ರಕಲಾವಿದ, ಕಲಾ ಉಪನ್ಯಾಸಕ ದೇವೇಂದ್ರ ಬಡಿಗೇರ್ ಅವರ ಕಲಾಕೃತಿಗಳಲ್ಲಿ ವರ್ಣವೈಭವವನ್ನು ಕಾಣಬಹುದು; ಉತ್ತಮ ಸಂಯೋಜನೆ, ಬಣ್ಣಗಳ ಕಲಾತ್ಮಕ ಬಳಕೆ, ಶ್ರೀಮಂತಿಕೆ ಅಲ್ಲಿ ಎದ್ದುಕಾಣುತ್ತವೆ.

ಧಾರವಾಡದ ಸರ್ಕಾರಿ ಚಿತ್ರಕಲಾ ಮಹಾವಿದ್ಯಾಲಯದ ಹಿರಿಯ ಕಲಾ ಉಪನ್ಯಾಸಕ ಬಡಿಗೇರ ಅವರು ಜಲವರ್ಣ, ಅಕ್ರಿಲಿಕ್ ಹಾಗೂ ತೈಲವರ್ಣಗಳಲ್ಲಿ ಚಿತ್ರಗಳನ್ನು ಅರಳಿಸಿದ್ದಾರೆ.

ಉತ್ತಮ ಕಲಾ ಶಿಕ್ಷಕ ಪ್ರಶಸ್ತಿ, ಮೈಸೂರು ದಸರಾ ಪ್ರಶಸ್ತಿ ಹಾಗೂ ರಾಜ್ಯಮಟ್ಟದ ಕಲಾ ಪ್ರಶಸ್ತಿಗಳು ಇವರಿಗೆ ಸಂದಿವೆ.

*– ಜಿ. ಎಂ. ಬೊಮ್ನಳ್ಳಿ , ಬೊಮ್ನಳ್ಳಿ ತಾ: ಶಿರಸಿ ( ಉ. ಕ.) - 581 402*







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

**HOSATHU** Kannada Monthly /MARCH 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.